# ಮೈಸೂರು ವಿಶ್ವವಿದ್ಯಾನಿಲಯ

# "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ"

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ

## ಸಂಶೋಧಕರು


ಮಧುಸೂದನ, ಎಂ.ಎನ್.
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006


## ಮಾರ್ಗದರ್ಶಕರು


ಡಾ.ಕೆ.ಪ್ರಭು
ಎಂ.ಎ., ಪಿಎಚ್.ಡಿ.,
ಸಹಾಯಕ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006


## ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

2019

## ಘೋಷಣಾ ಪತ್ರ

ಶ್ರೀ **ಮಧುಸೂದನ, ಎಂ.ಎನ್**. ಸಂಶೋಧನಾ ವಿದ್ಯಾರ್ಥಿಯಾದ ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿ ಇದೇ ವಿಭಾಗದಲ್ಲಿ ಸಹ ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರಾಗಿರುವ ಡಾ. ಕೆ.ಪ್ರಭು, ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ., ಪದವಿಗಾಗಿ ಸಂಶೋಧನಾ ಕಾರ್ಯ ಕೈಗೊಂಡು ಸಾದರಪಡಿಸಿರುವ **"ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ"** ಎಂಬ ಮಹಾಪ್ರಬಂಧವು ಮಾರ್ಗದರ್ಶಕರ ಮೇಲ್ವಿಚಾರಣೆಯಲ್ಲಿ ನನ್ನಿಂದ ರಚಿತವಾದ ಸ್ವಯಂ ಕೃತಿಯಾಗಿದೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೊಮಾಗಾಗಿ ಸಲ್ಲಿಸಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ: ಮೈಸೂರು
ದಿನಾಂಕ:

**(ಮಧುಸೂದನ, ಎಂ.ಎನ್.)**
ಸಂಶೋಧನಾ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006

## ಪ್ರಮಾಣ ಪತ್ರ

ಶ್ರೀ **ಮಧುಸೂದನ, ಎಂ.ಎನ್**. ಎಂಬ ಸಂಶೋಧನಾ ವಿದ್ಯಾರ್ಥಿಯಾದ ನಾನು **"ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ಅಧ್ಯಯನ"** ಎಂಬ ವಿಷಯದಲ್ಲಿ ಡಾ. ಕೆ.ಪ್ರಭು, ಸಹಾಯಕ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ಕೈಗೊಂಡ ಫಲವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ಪೂರ್ಣಗೊಳಿಸಿರುತ್ತೇನೆಂದು ಪ್ರಮಾಣೀಕರಿಸುತ್ತೇನೆ. ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಷಯದಲ್ಲಿ ಪಿಎಚ್.ಡಿ. ಪದವಿ ಪ್ರಾಪ್ತಿಗಾಗಿ ಕೋರಿ ಈ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಇಡಿಯಾಗಲಿ ಅಥವಾ ಬಿಡಿಯಾಗಲಿ ಯಾವುದೇ ಪದವಿ ಅಥವಾ ಡಿಪ್ಲೊಮಾ ಪದವಿಗಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**(ಮಧುಸೂದನ, ಎಂ.ಎನ್.)**
ಸಂಶೋಧನಾ ವಿದ್ಯಾರ್ಥಿ
ಸಹಿ ಮಾಡಿದ ದಿನಾಂಕ:

**(ಕೆ.ಪ್ರಭು)**
ಮಾರ್ಗದರ್ಶಕರು/ಸಹಾಯಕ ಪ್ರಾಧ್ಯಾಪಕರು

**ಮೇಲು ಸಹಿ**

ಸಹಿ ಮಾಡಿದ ದಿನಾಂಕ:

**(ಕೆ.ಪ್ರಭು)**

ಸಹಿ ಮಾಡಿದ ದಿನಾಂಕ: ಸಹಾಯಕ ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು

## ದೃಢೀಕರಣ ಪತ್ರ

**ಶ್ರೀ ಮಧುಸೂದನ, ಎಂ.ಎನ್**. ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರು ನಮ್ಮ ವಿಭಾಗದಲ್ಲಿ ಪೂರ್ಣಕಾಲಿಕ ಸಂಶೋಧನಾ ವಿದ್ಯಾರ್ಥಿಯಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ., ಪದವಿಗಾಗಿ ಸಂಶೋಧನಾ ಕಾರ್ಯ ಕೈಗೊಂಡು ಸಾದರಪಡಿಸಿರುವ **"ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ"** ಎಂಬ ಮಹಾಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಅವರಿಂದ ಸ್ವಯಂ ರಚಿತ ಕೃತಿಯಾಗಿದೆ ಎಂದು ದೃಢೀಕರಿಸುತ್ತೇನೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೊಮಾಗಾಗಿ ಸಲ್ಲಿಸಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು
ದಿನಾಂಕ:

**(ಕೆ.ಪ್ರಭು)**
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006

# ಕೃತಜ್ಞತೆಗಳು

**"ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ"** ಎಂಬ ವಿಷಯದ ಬಗ್ಗೆ ಸಂಶೋಧನೆ ಕೈಗೊಳ್ಳಲು ಸೂಕ್ತ ಮಾರ್ಗದರ್ಶನವನ್ನು ನೀಡಿ ಪ್ರೋತ್ಸಾಹಿಸಿದ ನನ್ನ ನೆಚ್ಚಿನ ಗುರುಗಳಾದ ಡಾ.ಕೆ.ಪ್ರಭು, ಸಹಾಯಕ ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು ಅವರಿಗೆ ಹೃದಯ ಪೂರ್ವಕವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಈ ನನ್ನ ಸಂಶೋಧನಾ ಕಾರ್ಯವನ್ನು ನಡೆಸಲು ಅವಕಾಶ ನೀಡಿದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನನ್ನ ಹೃದಯಪೂರ್ವಕ ನಮಸ್ಕಾರಗಳು. ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ವತಿಯಿಂದ ಶಿಷ್ಯವೇತನ ನೀಡಿದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನನ್ನ ಹೃದಯಪೂರ್ವಕ ನಮಸ್ಕಾರಗಳು.

ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ನಡೆಸಲು ಸಹಕಾರ ನೀಡಿದ ಗುರುಗಳಾದ ಪ್ರೊ.ಜಿ.ಕರಿಯಪ್ಪ, ಪ್ರಾಧ್ಯಾಪಕರು ಹಾಗೂ ಸಹಾಯಕ ಪ್ರಾಧ್ಯಾಪಕರಾದ ಡಾ.ವಿ.ಶೋಭಾ ಅವರಿಗೆ ಹಾಗೂ ಅವರಿಗೂ ಸಹ ನನ್ನ ಕೃತಜ್ಞತೆಗಳು. ವಿಭಾಗದ ನಿವೃತ್ತ ಪ್ರಾಧ್ಯಾಪಕರುಗಳಾದ ಪ್ರೊ.ಎಂ.ವಿ.ಕೃಷ್ಣಪ್ಪ, ಪ್ರೊ.ಎನ್.ಎಸ್. ರಂಗರಾಜು ಹಾಗೂ ಪ್ರೊ.ಎಂ.ಪಿ.ಮಹದೇವಯ್ಯ ಅವರಿಗೂ ಸಹ ನನ್ನ ಕೃತಜ್ಞತೆಗಳು. ನನ್ನ ಸಂಶೋಧನೆ ಮತ್ತು ಕ್ಷೇತ್ರಕಾರ್ಯದಲ್ಲಿ ಸೂಕ್ತ ಸಲಹೆ–ಸೂಚನೆಗಳನ್ನು ನೀಡಿದ ಡಾ.ಶಲ್ವಪಿಳ್ಳೈ ಅಯ್ಯಂಗಾರ್, ನಿರ್ದೇಶಕರು (ಪ್ರವೇಶಾತಿ), ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು ಇವರಿಗೂ ನನ್ನ ವಿಶೇಷ ಕೃತಜ್ಞತೆಗಳು.

ನನ್ನ ಸಂಶೋಧನಾ ಕಾರ್ಯದ ಎಲ್ಲಾ ಹಂತಗಳಲ್ಲಿ ಸಹಾಯ ಮಾಡಿದ ಡಾ. ಶಶಿಕುಮಾರ, ಎಸ್., ಕ್ಯೂರೇಟರ್ ಇವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ನನ್ನ ಸಂಶೋಧನಾ ಕಾರ್ಯಕ್ಕೆ ಸಲಹೆ ನೀಡಿದ ವಿಭಾಗದ ಡಾ.ಹೆಚ್.ಎನ್.ಕಾಳಸ್ವಾಮಿ ಮತ್ತು ಸಂಶೋಧನಾ ಸಹಾಯಕರಾದ ಡಾ.ಕೆ.ಎಸ್. ಬೆಟ್ಟಪ್ಪನವರಿಗೂ ಹಾಗೂ ನನ್ನ ಸ್ನೇಹಿತರಾದ ಡಾ.ಎಂ.ಜಿ.ಭೈರಪ್ಪ ಇವರಿಗೂ ಸಹ ನನ್ನ ಕೃತಜ್ಞತೆಗಳು. ಹಾಗೂ

ಮಹಾರಾಜ ಕಾಲೇಜಿನ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಸಹಾಯಕ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾದ ಡಾ.ಸಿ.ಈ.ಲೋಕೇಶ್‌ರವರಿಗೆ ನನ್ನ ಧನ್ಯವಾದಗಳು. ಕಛೇರಿ ಸಿಬ್ಬಂದಿಯವರಾದ ಶ್ರೀಮತಿ ಟಿ.ವಿ.ಉಷಾ ಇವರು ನೀಡಿದ ಸಲಹೆ ಮತ್ತು ಸಹಕಾರಗಳಿಗೆ ನಾನು ವಿಶೇಷ ಅಭಾರಿಯಾಗಿರುತ್ತೇನೆ. ವಿಭಾಗದ ಶಿವರಾಜು ಅಲ್ಲದೇ ನನ್ನ ಸಂಶೋಧನಾ ಕಾರ್ಯದಲ್ಲಿ ನೆರವು ನೀಡಿದ ಕುಮಾರಸ್ವಾಮಿ, ಎಸ್.ಡಿ., ಅನಿಲ್, ಎಲ್., ಪ್ರಕಾಶ, ಎಂ., ನೀಲಯ್ಯ, ಎನ್., ಚಂದ್ರಯ್ಯ, ಶಾಂತರಾಜು, ಎಂ., ವಿಷಕಂಠಮೂರ್ತಿ, ಶಶಿಧರ, ಸಿ.ಎ., ಜಗನ್ನಾಥ, ಬಿ.ಆರ್., ಶ್ವೇತ, ಸಿ., ರೇಣುಕ, ಸಿ.ಕೆ., ಡಾ.ಕೆಂಡಮ್ಮ, ಗೌರಿ, ಬಿ., ಗೀತಾ, ಪಿ., ನಿಂಗನಾಯ್ಕ, ಸಿ., ಡಾ.ಉಮಾ, ಡಿ.ಟಿ., ಅವರುಗಳಿಗೆ ನನ್ನ ಕೃತಜ್ಞತೆಗಳು. ಇತರೆ ಸಂಶೋಧಕರುಗಳಾದ ಡಾ.ಸುರೇಶ, ಡಾ.ಸಿ.ಸುರೇಶ, ಡಾ.ಎನ್.ಶಿವಾನಂದ ಅವರುಗಳಿಗೆ ನನ್ನ ಕೃತಜ್ಞತೆಗಳು. ಇತಿಹಾಸ ವಿಭಾಗದ ಸಂಶೋಧಕ ಮಿತ್ರರಾದ ವಸಂತ ಕುಮಾರ್ ದೊಡ್ಡಮಗ್ಗೆ, ಕುಮಾರ, ಡಿ., ಮಹೇಶ್, ಚೇತನ್, ಇಂದ್ರೇಶ್, ಶಿವು ಹಾಗೂ ಮಾನವಶಾಸ್ತ್ರ ವಿಭಾಗದ ಸ್ನೇಹಿತ ಶಂಕರ್ ಇವರುಗಳಿಗೆ ಹಾಗೂ ವಿವಿಧ ವಿಭಾಗದ ನನ್ನ ಎಲ್ಲಾ ಸಂಶೋಧನಾ ಮಿತ್ರರಿಗೆ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನಾ ಕಾರ್ಯವನ್ನು ನಡೆಸಲು ಸಹಾಯ ಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಕೇಂದ್ರ ಗ್ರಂಥಾಲಯ, ಮಾನಸಗಂಗೋತ್ರಿ, ಮೈಸೂರು, ಭಾರತೀಯ ಪುರಾತತ್ವ ಇಲಾಖೆಯ ಗ್ರಂಥಾಲಯ, ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯದ ಗ್ರಂಥಾಲಯ, ನಗರದ ಕೇಂದ್ರ ಗ್ರಂಥಾಲಯ ಇನ್ನೂ ಮುಂತಾದ ಹಲವಾರು ಗ್ರಂಥಾಲಯಗಳನ್ನು ನನ್ನ ಸಂಶೋಧನೆಗೆ ಅಪಾರವಾಗಿ ಬಳಸಿಕೊಂಡಿದ್ದೇನೆ. ಇದಕ್ಕಾಗಿ ನನಗೆ ಅವಕಾಶ ನೀಡಿದ ಎಲ್ಲಾ ಗ್ರಂಥಾಲಯದ ಮುಖ್ಯಸ್ಥರು ಮತ್ತು ಸಿಬ್ಬಂದಿಗಳಿಗೆ ಅಭಾರಿಯಾಗಿದ್ದೇನೆ.

ನನ್ನ ಶ್ರೇಯೋಭಿವೃದ್ಧಿಗಾಗಿ, ಜೀವನದ ಎಷ್ಟೇ ಕಷ್ಟ-ಕಾರ್ಪಣ್ಯಗಳ ನಡುವೆಯೂ ನನ್ನ ವಿದ್ಯಾಭ್ಯಾಸ ಹಾಗೂ ವೈಯಕ್ತಿಕ ಜೀವನದಲ್ಲಿ ಕುಂದುಂಟಾಗದಂತೆ ಶ್ರಮಿಸಿದ ತಂದೆ-ತಾಯಿಗಳಾದ ಶ್ರೀ ನಾರಾಯಣ ದಾಸ್ ಮತ್ತು ಶ್ರೀಮತಿ ಚಿಕ್ಕಾಮಣಿ ಇವರಿಗೆ

ಋಣಿಯಾಗಿರುತ್ತೇನೆ. ಸದಾ ನನ್ನ ಏಳಿಗೆಯನ್ನೇ ಬಯಸುವ ನನ್ನ ಪ್ರೀತಿಯ ತಂಗಿಯರಾದ ಶ್ವೇತ ಮತ್ತು ದೀಪಿಕಾ ಹಾಗೂ ಭಾವಂದಿರಾದ ಶ್ರೀನಿವಾಸ್ ಮತ್ತು ಕುಮಾರ್‌ರವರಿಗೆ ತುಂಬು ಹೃದಯದ ಧನ್ಯವಾದಗಳು. ಬಿಸಿಲು-ಮಳೆಯೆನ್ನದೆ ಸದಾ ಕಾಲ ನನ್ನ ಜೊತೆ ಕ್ಷೇತ್ರಕಾರ್ಯದಲ್ಲಿ ತೊಡಗಿಸಿಕೊಂಡ ನನ್ನ ನೆಚ್ಚಿನ ಗೆಳತಿ ರಕ್ಷಿತ, ಹೆಚ್.ಎಸ್. ಇವರಿಗೆ ಹೃದಯಪೂರ್ವಕ ಕೃತಜ್ಞತೆಗಳು. ಹಾಗೂ ನನ್ನ ಹಿತವನ್ನು ಬಯಸುವ ನನ್ನ ಚಿಕ್ಕಮ್ಮನವರಾದ ಕಾಂತಮ್ಮ, ಅಕ್ಕಂದಿರಾದ ಕೋಮಲ, ಅಂಬಿಕಾ ಮತ್ತು ಭಾವನವರಾದ ರವಿ, ಹಾಗೂ ಅಣ್ಣ-ಅತ್ತಿಗೆಯವರಾದ ಚಿದಾನಂದ ಎರಡಿ ಮತ್ತು ಆಶಾ ಇವರಿಗೆ ಹೃದಯಪೂರ್ವಕ ಧನ್ಯವಾದಗಳು.

ನನ್ನ ಸ್ನೇಹಿತರಾದ ಕಿರಣ್ ಕುಮಾರ್ ಮತ್ತು ಅರುಣ್ ಕುಮಾರ್ ಇವರಿಗೂ ನನ್ನ ಕೃತಜ್ಞತೆಗಳು. ಸದಾಕಾಲ ನನ್ನ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸುತ್ತಲೇ ಬಂದಂತಹ ನನ್ನ ನೆಚ್ಚಿನ ಸೋದರಮಾವ ಅಣ್ಣಾಜಿಯವರಿಗೆ ವಿಶೇಷವಾಗಿ ಹಾಗೂ ಇತರ ಸೋದರ ಮಾವಂದಿರು, ಅತ್ತೆಯಂದಿರಿಗೆ ನನ್ನ ಹೃದಯಪೂರ್ವಕ ಧನ್ಯವಾದಗಳು. ನನ್ನ ವಿದ್ಯಾಭ್ಯಾಸದಲ್ಲಿ ಪ್ರೇರಣೆ ನೀಡಿದ ಮಹಾರಾಜ ಕಾಲೇಜಿನ ಅತಿಥಿ ಉಪನ್ಯಾಸಕರಾದ ಡಾ.ರಾಘವೇಂದ್ರ ಮತ್ತು ನನ್ನ ಚಿಕ್ಕಪ್ಪ ಹಾಗೂ ವಕೀಲರೂ ಆದ ಅನಿಲ್‌ಕುಮಾರ್, ಆರ್. ಹಾಗೂ ನನ್ನ ಅವಿಭಕ್ತ ಕುಟುಂಬದ ಎಲ್ಲಾ ಸದಸ್ಯರಾದ ಚಿಕ್ಕಪ್ಪಂದಿರು-ಚಿಕ್ಕಮ್ಮಂದಿರು, ಸಹೋದರ-ಸಹೋದರಿಯರು, ಅಜ್ಜಿ-ತಾತಂದಿರು ಪ್ರತಿಯೊಬ್ಬರಿಗೂ ಹೃದಯ ತುಂಬಿದ ಧನ್ಯವಾದಗಳು.

ಈ ಮಹಾಪ್ರಬಂಧವನ್ನು ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಉಷಾಗಣೇಶ್ ಹಾಗೂ ಈ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಬೈಂಡಿಂಗ್ ಮಾಡಿಕೊಟ್ಟಂತಹ ಮಧುರಾ ಎಂಟರ್‌ಪ್ರೈಸಸ್ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕ್ಷೇತ್ರಕಾರ್ಯವನ್ನು ಮಾಡುವಾಗ ದೇವಾಲಯಗಳ ಛಾಯಾಚಿತ್ರವನ್ನು ತೆಗೆಯಲು ಅಕಾಶ ಮಾಡಿಕೊಟ್ಟ ಭಾರತೀಯ ಪುರಾತತ್ವ ಇಲಾಖೆ ಸಿಬ್ಬಂದಿ ವರ್ಗದವರಿಗೂ ಹಾಗೂ ಹಾಸನ ತಾಲೂಕಿನ ದೇವಾಲಯಗಳ ಅರ್ಚಕರುಗಳಿಗೂ ಮತ್ತು ಗ್ರಾಮಸ್ಥರಿಗೂ ಹಾಗೂ ನನ್ನ ಬಾಂಧವರು ಹಾಗೂ ಸ್ನೇಹಿತರೆಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ. ದೇವಾಲಯಗಳ ಛಾಯಾಚಿತ್ರಗಳನ್ನು ಅಂದವಾಗಿ ಜೋಡಣೆ ಮಾಡಿಕೊಟ್ಟ ಸಂಶೋಧಕ ಗೆಳೆಯರಾದ

ಚಂದ್ರಶೇಖರ್. ಎನ್ ಮತ್ತು  ಡಾ.ಸನತ್ ಕುಮಾರ್ ಅವರಿಗೆ ನನ್ನ ಕೃತಜ್ಞತೆಗಳು. ನನ್ನ ಸಂಶೋಧನೆಗೆ ಪ್ರೋತ್ಸಾಹ ನೀಡಿದ ಟಿ.ವಿ.೯ ವರದಿಗಾರರಾದ ಕೆ.ಬಿ.ಮಂಜುನಾಥ್, ಧರ್ಮೇಶ್, ನವೀನ್ ಕುಮಾರ್, ಪೃಥ್ವಿ, ಮಂಜು, ಆಶಾ, ರಮೇಶ್, ಮಹೇಶ್ ಮತು ನೆಚ್ಚಿನ ಸ್ನೇಹಿತರಾದ ಪ್ರದೀಪ್ ಕುಮಾರ್, ಎಂ.ಜಿ. ಹಾಗೂ ಹಂಜಾ ಕೀನ್ಯಾ ಇವರುಗಳಗೆ ಕೃತಜ್ಞತೆಗಳು.

**(ಮಧುಸೂದನ, ಎಂ.ಎನ್.)**

## ಪರಿವಿಡಿ



**ಅನುಬಂಧಗಳು**

## ಸಂಕೇತಾಕ್ಷರಗಳು

| | | |
|---|---|---|
| ಎಂ.ಎ.ಆರ್ | – | ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ |
| ಎ.ಕ.ಸಂ. | – | ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟಗಳು |
| ಎ.ಇ. | – | ಎಪಿಗ್ರಾಫಿಯಾ ಇಂಡಿಕಾ |
| ಇ.ಆಂ. | – | ಇಂಡಿಯನ್ ಆಂಟಿಕ್ವೇರಿ |
| ಕ.ಶಾ.ಸಾಂ.ಅ. | – | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಕ.ವಿ.ವಿ.ಕೋ. | – | ಕನ್ನಡ ವಿಷಯ ವಿಶ್ವಕೋಶ |
| ಹಾ | – | ಹಾಸನ |
| ಶಾ.ಸಂ. | – | ಶಾಸನ ಸಂಖ್ಯೆ |
| ತ.ನ. | – | ತಳನಕ್ಷೆ |
| ಚ.ಕಿ.ಮೀ. | – | ಚದರ ಕಿಲೋ ಮೀಟರ್ |
| ಚಿ. ಸಂ. | – | ಚಿತ್ರ ಸಂಖ್ಯೆ |
| ಪು.ಸಂ. | – | ಪುಟ ಸಂಖ್ಯೆ |

# ಅಧ್ಯಾಯ–ಒಂದು

## ಪೀಠಿಕೆ

ಕರ್ನಾಟಕ ಶಿಲ್ಪಕಲಾ ಪರಂಪರೆಗೆ ಹಾಸನ ಜಿಲ್ಲೆಯ ಕೊಡುಗೆ ಅಮೋಘವಾದುದು. ಪ್ರಾಚೀನ ಕಾಲದಿಂದ ಆರಂಭಗೊಂಡು ಇಂದಿನವರೆಗೂ ಈ ಜಿಲ್ಲೆಯ ಇತಿಹಾಸ ಹಾಸುಹೊಕ್ಕಾಗಿ ಮತ್ತು ಅವಿಚ್ಛಿನ್ನವಾಗಿ ಬೆಳೆದು ನಿಂತಿದೆ. ವಿಶ್ವಮಟ್ಟದಲ್ಲಿ ಭಾರತದ ಗತವೈಭವವನ್ನು ಸಾರುವ ಪಾರಂಪಾರಿಕ ಸ್ಥಳಗಳನ್ನು ಹೊಂದಿರುವ ಈ ಜಿಲ್ಲೆಯು ಕರ್ನಾಟಕದ ಸಂಸ್ಕೃತಿ, ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಹಿತ್ಯ ಮತ್ತು ಧಾರ್ಮಿಕ ಕ್ಷೇತ್ರಗಳಿಗೆ ತನ್ನದೇ ಆದ ಕೊಡುಗೆಗಳನ್ನು ನೀಡುತ್ತಲೇ ಬಂದಿದೆ. ಕರ್ನಾಟಕದ ಶಿಲ್ಪಕಲಾ ಜಗತ್ತಿಗೆ ಮಾತ್ರವಲ್ಲದೇ ಇಡೀ ಭಾರತೀಯ ಶಿಲ್ಪಕಲಾ ಪರಂಪರೆಗೆ ಅದ್ಭುತವಾದ ಕೊಡುಗೆ ನೀಡಿ ವಿಶ್ವಮಟ್ಟದಲ್ಲಿ ಹಿರಿಮೆ ಪಡೆದ ಹೊಯ್ಸಳರ ಮೇರುಪ್ರಭುತ್ವಕ್ಕೆ ಸಾಕ್ಷಿಯಾಗಿರುವ ಈ ಜಿಲ್ಲೆಯು ವಿಶಿಷ್ಟವಾದ ಇತಿಹಾಸ, ವಿಭಿನ್ನ ಭೌಗೋಳಿಕ ಲಕ್ಷಣಗಳು ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ತನ್ನ ಒಡಲಲ್ಲಿ ಗರ್ಭೀಕರಿಸಿಕೊಂಡು ಸಾಂಸ್ಕೃತಿಕ ಸಿರಿವಂತಿಕೆಯನ್ನು ಹೊಂದಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇಲ್ಲಿ ಹೊಯ್ಸಳರ ಕಾಲದಲ್ಲಿ ಅತ್ಯಂತ ಸುಂದರ ಮತ್ತು ಕಲಾಶ್ರೀಮಂತಿಕೆಯನ್ನು ಹೊಂದಿರುವ ಬೇಲೂರಿನ ಚೆನ್ನಕೇಶವ, ಹಳೇಬೀಡಿನ ಹೊಯ್ಸಳೇಶ್ವರ, ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ, ಕೋರವಂಗಲದ ಬೂಚೇಶ್ವರ, ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ, ಹೊನ್ನಾವರದ ಕೇಶವ, ಜಾವಗಲ್ಲಿನ ಲಕ್ಷ್ಮೀನರಸಿಂಹ, ಹಾರ್ನಳ್ಳಿಯ ಸೋಮೇಶ್ವರ ಮತ್ತು ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ಇನ್ನೂ ಮುಂತಾದ ಅಸಂಖ್ಯಾ ದೇವಾಲಯಗಳು ನಿರ್ಮಾಣವಾಗಿದ್ದು ಇವುಗಳು ಹೊಯ್ಸಳರ ಇತಿಹಾಸವನ್ನು ಅಜರಾಮರವಾಗಿರಿಸುವುದರ ಜೊತೆಗೆ ಈ ಜಿಲ್ಲೆಯ ಸಾಂಸ್ಕೃತಿಕ ಹಿರಿಮೆಯನ್ನು ದಶ ದಿಕ್ಕುಗಳಲ್ಲಿಯೂ ಹರಡುತ್ತಿವೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

ಹೊಯ್ಸಳರು ಶಿಲ್ಪಕಲೆಯಲ್ಲಿ ತಮ್ಮದೇ ಆದ ಶೈಲಿಯನ್ನು ಅಳವಡಿಸಿಕೊಂಡಿದ್ದರಲ್ಲದೇ ಇದನ್ನು ಹೊಯ್ಸಳ ಶೈಲಿಯೆಂದೇ ಬಹುಪಾಲು ವಿದ್ವಾಂಸರು ಕರೆದಿದ್ದಾರೆ. ಇವರ ವಿಭಿನ್ನವಾದ ಶಿಲ್ಪ ಮಾಧ್ಯಮ, ಹೆಚ್ಚು ಅಲಂಕಾರಿಕವಾದ ಮತ್ತು ಸೂಕ್ಷ್ಮವಾದ ಕುಸುರಿ ಕೆತ್ತನೆಗಳು ತಮ್ಮದೇ ಶೈಲಿಯಲ್ಲಿ ಶಿಲ್ಪಗಳ ವಿನ್ಯಾಸಮಾಡಿ ದೇವಾಲಯಗಳ ವಿವಿಧ ಭಾಗಗಳಲ್ಲಿ ಪ್ರದರ್ಶಿಸಿರುವುದು ಹಾಗೂ ಪೌರಾಣಿಕ ಕಥೆಗಳನ್ನು ಶಿಲ್ಪಮಾಧ್ಯಮದ ಮೂಲಕ ಪ್ರಸ್ತುತೀಕರಣ ಇನ್ನೂ ಮುಂತಾದ ಅಂಶಗಳು ಹೊಯ್ಸಳ ಕಲಾ ಪ್ರೌಢಿಮೆಯ ವಿಶೇಷತೆಗಳಾಗಿವೆ.

ಹಾಸನ ಜಿಲ್ಲೆಯ ಹೊಯ್ಸಳರ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಎಂದಾಕ್ಷಣ ಬಹುಪಾಲು ಜನರ ಧ್ವನಿಯಲ್ಲಿ ಮೂಡುವ ಪದಗಳು ಬೇಲೂರು–ಹಳೇಬೀಡಿಗೆ ಸೀಮಿತವಾಗಿರುತ್ತವೆ. ಆದರೆ ಹಾಸನ ಜಿಲ್ಲೆಯಲ್ಲಿ ಈ ಪ್ರದೇಶಗಳಲ್ಲದೇ ಇನ್ನೂ ಹಲವಾರು ಪ್ರದೇಶಗಳಲ್ಲಿ ಸುಂದರವಾದ ಹೊಯ್ಸಳ ಕಲಾಕೃತಿಗಳು ಕಂಡು ಬರುತ್ತವೆ. ಅಂತಹ ಪ್ರದೇಶಗಳಲ್ಲಿ ಹಾಸನ ತಾಲೂಕು ಸಹ ಮುಂಚೂಣಿಯ ಸ್ಥಾನದಲ್ಲಿ ನಿಲ್ಲುತ್ತದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಹಾಸನ ತಾಲೂಕು ಹೊಯ್ಸಳರ ನೇರ ಆಳ್ವಿಕೆಗೆ ಒಳಪಟ್ಟಿದ್ದ ಪ್ರಮುಖ ಕಾರ್ಯಕ್ಷೇತ್ರವಾಗಿದ್ದು ಹೊಯ್ಸಳರ ಪರಂಪರೆ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಹಲವಾರು ದೇವಾಲಯಗಳು ನಿರ್ಮಾಣವಾಗಿದ್ದು ಇವುಗಳನ್ನು "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ" ಎಂಬ ಸಂಶೋಧನಾ ಶೀರ್ಷಿಕೆಯಡಿಯಲ್ಲಿ ಮಹಾಪ್ರಬಂಧ ರಚನಾ ಕಾರ್ಯವನ್ನು ಕೈಗೊಂಡಿದ್ದು ತಾಲೂಕಿನ ಹೊಯ್ಸಳರ ದೇವಾಲಯಗಳು, ಬಸದಿಗಳು, ಶಾಸನೋಕ್ತ ವೀರಗಲ್ಲುಗಳು ಮತ್ತು ಶಿಲ್ಪಗಳ ಅಧ್ಯಯನಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿದೆ.

**ಭೌಗೋಳಿಕ ಲಕ್ಷಣಗಳು**

ಒಂದು ಪ್ರದೇಶದ ಇತಿಹಾಸವನ್ನು ತಿಳಿಯುವ ನಿಟ್ಟಿನಲ್ಲಿ ಆ ಪ್ರದೇಶದ ಭೌಗೋಳಿಕ ಲಕ್ಷಣಗಳು ಪ್ರಮುಖವಾದ ಪ್ರಭಾವವನ್ನು ಬೀರುತ್ತವೆ. ಯಾವುದೇ ಒಂದು ಸಂಸ್ಕೃತಿಯ ಸಂರಚನೆ ಮತ್ತು ವಿಕಸನದಲ್ಲಿ ಆ ಪ್ರದೇಶದ ವಾಯುಗುಣ ಮತ್ತು ಮೇಲ್ಮೈಲಕ್ಷಣಗಳು, ಅಲ್ಲಿನ ಭೌಗೋಳಿಕ ಪರಿಸರ, ನೈಸರ್ಗಿಕ ಸಂಪನ್ಮೂಲಗಳು ಪ್ರಮುಖವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ವಿವಿಧ ಸಂಸ್ಕೃತಿಗಳ ಸಂಚಯನಕ್ಕೆ ಭೂಮಿಕೆಯಾಗಿದ್ದ ಹಾಸನ ತಾಲೂಕಿನ ಭೌಗೋಳಿಕ ಲಕ್ಷಣಗಳ ಸಂಕ್ಷಿಪ್ತ ಪರಿಚಯದ ಅವಶ್ಯಕತೆ ಇದೆ.

ಹಾಸನ ತಾಲೂಕು ಹಾಸನ ಜಿಲ್ಲೆಯ ವ್ಯಾಪ್ತಿಯೊಳಗೆ ಕಂಡುಬರುವ ಪ್ರಮುಖ ತಾಲೂಕಾಗಿದ್ದು ಹಾಸನ ನಗರವನ್ನೇ ಆಡಳಿತ ಕೇಂದ್ರವನ್ನಾಗಿ ಹೊಂದಿ ಹೊಳೆನರಸೀಪುರ, ಅರಕಲಗೂಡು, ಆಲೂರು, ಬೇಲೂರು, ಸಕಲೇಶಪುರ, ಅರಸೀಕೆರೆ ಮತ್ತು ಚನ್ನರಾಯಪಟ್ಟಣ ತಾಲೂಕುಗಳಿಂದ ಸುತ್ತುವರಿದಿದೆ. ಈ ತಾಲೂಕು $12^{\circ}$ $3'$ ಮತ್ತು $13^{\circ}$ $0'$ ಉತ್ತರ ಅಕ್ಷಾಂಶವನ್ನು $75^{\circ}$ $33^{1}$ ಮತ್ತು $76^{\circ}$ $11'$ ಪೂರ್ವ ರೇಖಾಂಶಗಳನ್ನು ಹೊಂದಿದೆ. ಈ ತಾಲೂಕಿನಲ್ಲಿ ಕಸಬಾ, ಸಾಲಗಾಮೆ, ದುದ್ದ, ಶಾಂತಿಗ್ರಾಮ ಮತ್ತು ಕಟ್ಟಾಯ ಹೋಬಳಿಗಳಿದ್ದು 933 ಚ.ಕಿ.ಮೀ. ವಿಸ್ತೀರ್ಣದ ಭೂಪ್ರದೇಶವನ್ನು ಹೊಂದಿದೆ.[1]

**ಜನಸಂಖ್ಯೆ**

2011ರ ಜನಗಣತಿಯ ಪ್ರಕಾರ ತಾಲೂಕಿನಲ್ಲಿ ಒಟ್ಟು 3.96.166 ಜನಸಂಖ್ಯೆಯಿದೆ. ಇದರಲ್ಲಿ 197,116 ಪುರುಷರು, 1,99,050 ಮಹಿಳೆಯರಿದ್ದು ಲಿಂಗಾನುಪಾತದ ಪ್ರಮಾಣದಲ್ಲಿ 1010 ಪುರುಷರಿಗೆ 973 ಮಹಿಳೆಯರಿದ್ದಾರೆ. ಪ್ರತಿ ಚ.ಕಿ.ಮೀ ವಿಸ್ತೀರ್ಣದಲ್ಲಿ 425 ಸಂಖ್ಯೆಯ ಜನಸಾಂದ್ರತೆಯಿದೆ. ಸಾಕ್ಷರತೆಯ ಬಗ್ಗೆ ಹೇಳುವುದಾದರೆ ಒಟ್ಟು 73.28 % ಅಕ್ಷರಸ್ಥರಿದ್ದರೆ ಇದರಲ್ಲಿ 78.65% ಪುರುಷ ಸಾಕ್ಷರಸ್ಥರು ಮತ್ತು 67.96% ಮಹಿಳಾ ಸಾಕ್ಷರಸ್ಥರಿದ್ದಾರೆ.[2]

**ಕೃಷಿ**

ಕೃಷಿ ಹಾಸನ ತಾಲೂಕಿನ ಜನರ ಮುಖ್ಯ ಕಸುಬಾಗಿದೆ. ಆಲೂಗೆಡ್ಡೆ, ಮೆಕ್ಕೆ ಜೋಳ, ರಾಗಿ ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆಗಳಾಗಿದ್ದು ವಿಶಾಲವಾದ ಕೆರೆ ನೀರಾವರಿ ಪದ್ಧತಿ ಇರುವ ಕಡೆ ಭತ್ತವನ್ನು ಸಹ ಬೆಳೆಯಲಾಗುತ್ತದೆ. ಅವರೆ, ಅಲಸಂದೆ, ತೊಗರಿ ಮತ್ತು ಹುರುಳಿ ಪ್ರಮುಖವಾದ ದ್ವಿದಳ ದಾನ್ಯ ಬೆಳೆಗಳಾಗಿದ್ದು, ಅಲ್ಲಲ್ಲಿ ತರಕಾರಿಗಳನ್ನು ಮತ್ತು ತೋಟಗಾರಿಕಾ ಬೆಳೆಗಳಾದ ತೆಂಗು ಮತ್ತು ಅಡಿಕೆಯನ್ನು ಬೆಳೆಯುತ್ತಾರೆ.[3]

**ಹವಾಮಾನ ಮತ್ತು ಮಳೆ**

ಈ ಪ್ರದೇಶವು ಅರಮಲೆನಾಡು ಮತ್ತು ಬಯಲು ಸೀಮೆಯ ವಾತಾವರಣವೆರಡನ್ನೂ ಹೊಂದಿದೆ. ತಾಲೂಕಿನ ಕಟ್ಟಾಯ, ಸಾಲಗಾಮೆ, ಕಸಬಾ ಹೋಬಳಿ ಮತ್ತು ಶಾಂತಿಗ್ರಾಮ ಹೋಬಳಿಯ ಪಶ್ಚಿಮ ಭಾಗವು ಅರೆಮಲೆನಾಡು ವಾತಾವರಣವನ್ನು ಹೊಂದಿದ್ದರೆ ದುದ್ದ ಹೋಬಳಿಯು ಬಯಲುಸೀಮೆ ವಾತಾವರಣವನ್ನು ಹೊಂದಿದೆ. ಈ ತಾಲೂಕು ಪಶ್ಚಿಮ ಘಟ್ಟಗಳ ತಪ್ಪಲಿನ ಮಲೆನಾಡು ಪ್ರದೇಶಕ್ಕೆ ಸನಿಹವಿರುವುದರಿಂದ ಉತ್ತಮ ಮಳೆಯನ್ನು ಪಡೆಯುತ್ತದೆ. ಜೂನ್ ಮತ್ತು ಸೆಪ್ಟೆಂಬರ್‌ವರೆಗೆ ಬೀಸುವ ನೈರುತ್ಯ ಮಾನ್ಸೂನ್ ಮಾರುತಗಳೇ ಈ ತಾಲೂಕಿನಲ್ಲಿ ಹೆಚ್ಚು ಮಳೆಯನ್ನು ತರುತ್ತವೆ. ಉಳಿದಂತೆ ಚಳಿಗಾಲವು ಡಿಸೆಂಬರ್‌ನಿಂದ ಫೆಬ್ರವರಿವರೆಗೆ ಬೇಸಿಗೆ ಕಾಲವು ಮಾರ್ಚ್‌ನಿಂದ ಮೇವರೆಗೆ ಇರುತ್ತದೆ.

**ಅರಣ್ಯಗಳು**

ಹಾಸನದ ರೆವಿನ್ಯೂ ದಾಖಲೆಗಳ ಪ್ರಕಾರ ಜಿಲ್ಲೆಯಲ್ಲಿ ಕಂಡುಬರುವ 54.029 ಹೆಕ್ಟೇರು ಅರಣ್ಯ ಪ್ರದೇಶದಲ್ಲಿ ಹಾಸನ ತಾಲೂಕು ಶೇಕಡ 3.58ರಷ್ಟು ಅರಣ್ಯ ಪ್ರದೇಶವನ್ನು ಹೊಂದಿದೆ. ಶ್ರೀರಾಮದೇವರ ಹಳ್ಳದ ಅರಣ್ಯ, ಸೀಗೆದ ಗುಡ್ಡ ಅರಣ್ಯ, ಹೊಂಗೆರೆ ಅರಣ್ಯ, ಹಸುವಿನ

ಕಾವಲಿನ ಅರಣ್ಯ ಮತ್ತು ಗೆಂಡೆಕಟ್ಟೆ ಅರಣ್ಯಗಳು ತಾಲೂಕಿನ ಅರಣ್ಯ ಪ್ರದೇಶಗಳಾಗಿದ್ದು, ಶ್ರೀರಾಮದೇವರ ಹಳ್ಳದ ಅರಣ್ಯದಲ್ಲಿ ಶ್ರೀಗಂಧವನ್ನು ಬೆಳೆಯುತ್ತಿರುವುದು ವಿಶೇಷವಾಗಿದೆ.[4]

**ಕೈಗಾರಿಕೆಗಳು**

ಇತ್ತೀಚಿನ ದಿನಗಳಲ್ಲಿ ಹಾಸನದ ಕೈಗಾರಿಕಾ ವಲಯವು ಬಹಳ ವೇಗವಾಗಿ ಬೆಳೆಯುತ್ತಿದ್ದು ಹಾಸನ–ಹೊಳೆನರಸೀಪುರ ರಸ್ತೆಯಲ್ಲಿ 1600 ಎಕರೆ ಪ್ರದೇಶದಲ್ಲಿ ವಿಶೇಷ ಆರ್ಥಿಕ ವಲಯವಿದೆ. ಹಿಮಂತ್‌ಸಿಂಗ್, ಗೋಗೋ ಇಂಟರ್ ನ್ಯಾಷನಲ್ಸ್ ಮತ್ತು ಜಾಕಿ ಎಂಬ ಬೃಹತ್ ಟೆಕ್ಸ್‌ಟೈಲ್ಸ್ ಉದ್ದಿಮೆಗಳು ಹಾಸನ ನಗರದಲ್ಲಿದ್ದು ಇವು ಹಾಸನ ತಾಲೂಕಿನ ಮತ್ತು ಸುತ್ತ–ಮುತ್ತಲ ಜಿಲ್ಲೆ ಮತ್ತು ರಾಜ್ಯಗಳ ನಿರುದ್ಯೋಗಿಗಳಿಗೆ ಅದರಲ್ಲೂ ಮಹಿಳೆಯರಿಗೆ ಉದ್ಯೋಗವಕಾಶಗಳನ್ನು ಕಲ್ಪಿಸಿವೆ. ಹಾಸನ ತಾಲೂಕಿನಲ್ಲಿ ಗ್ರಾನೈಟ್ ಕಲ್ಲಿನ ಗಣಿಗಳು ಹೆಚ್ಚಾಗಿ ಕಂಡುಬರುವುದರಿಂದ ಗ್ರಾನೈಟ್ ಉದ್ದಿಮೆಯೂ ಕೂಡ ಪ್ರಬಲವಾಗಿ ಬೆಳೆದಿದೆ.

**ನದಿಗಳು ಮತ್ತು ನೀರಾವರಿ**

ಹಾಸನ ತಾಲೂಕಿನಲ್ಲಿ ಹೇಮಾವತಿ ನದಿಯು ಹರಿಯುತ್ತದೆ. ಈ ನದಿಗೆ ಗೊರೂರಿನಲ್ಲಿ ಹೇಮಾವತಿ ಜಲಾಶಯವನ್ನು ನಿರ್ಮಿಸಲಾಗಿದ್ದು ಇದರಿಂದ ಹೊಳನರಸೀಪುರ, ಚನ್ನರಾಯಪಟ್ಟಣ ತಾಲೂಕಿನ ಬೆಳೆಗಳಿಗೆ ಸಹಾಯವಾಗುತ್ತಿದ್ದು ಈ ನೀರನ್ನು ಮಂಡ್ಯ ಮತ್ತು ತುಮಕೂರು ಜಿಲ್ಲೆಗಳಿಗೂ ಸಹ ಹರಿಸಲಾಗುತ್ತಿದೆ. ಹಾಸನ ತಾಲೂಕಿನ ಕೃಷಿ ಈ ಜಲಾಶಯದಿಂದ ಅಷ್ಟೇನೂ ಉಪಯೋಗವಿರದಿದ್ದರೂ ಕುಡಿಯುವ ನೀರಿನ ಪೂರೈಕೆಗಾಗಿ ಈ ಜಲಾಶಯದ ನೀರನ್ನು ಬಳಸಿಕೊಳ್ಳಲಾಗುತ್ತಿದೆ. ಹಾಸನ ತಾಲೂಕಿನ ನೀರಾವರಿಗೆ ಸಂಬಂಧಿಸಿದಂತೆ ಹೇಳುವುದಾದರೆ ಇಲ್ಲಿ ಹೆಚ್ಚಿನದಾಗಿ ಮಳೆ ಮತ್ತು ಕೆರೆ ನೀರಾವರಿಗೆ ಅವಲಂಭಿತವಾಗಿದ್ದಾರೆ. ಬೇಲೂರಿನ ಯಗಚಿ ಜಲಾಶಯದ ನೀರನ್ನು ಕಾಲುವೆಗಳ ಮೂಲಕ ಕೆರೆಗಳಿಗೆ ತುಂಬಿಸುತ್ತಿರುವುದರಿಂದ ಈ ತಾಲೂಕಿನ ಜಾನುವಾರುಗಳಿಗೆ ಮತ್ತು ಕೃಷಿ ಚಟುವಟಿಕೆಗಳಿಗೆ ಬಹಳ ಸಹಕಾರಿಯಾಗುತ್ತಿದೆ.

**ಹಾಸನದ ಐತಿಹಾಸಿಕ ಹಿನ್ನೆಲೆ**

ಹಾಸನ ನಗರವು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಸ್ಥಳ ಪುರಾಣದ ಪ್ರಕಾರ ಹಾಸನ ನಗರ ಪ್ರಾರಂಭದಲ್ಲಿ ಸಿಂಹಾಸನಪುರ ಎಂಬ ಹೆಸರಿತ್ತೆಂದು ಅರ್ಜುನನ ಮೊಮ್ಮಗನಾಧ ಜನಮೇಜಯನೊಂದಿಗೆ ಹೋಲಿಸಿ ಹೇಳಲಾಗಿದೆ.[6]

ನಂತರ ಕ್ರಿ.ಶ.11ನೇ ಶತಮಾನದಲ್ಲಿ ಚೋಳ ಅಧಿಕಾರಿಯಾದ ಬುಕ್ಕನಾಯಕನು 'ಚನ್ನಪಟ್ಟಣ' ಎಂಬ ಪಟ್ಟಣವನ್ನು ನಿರ್ಮಿಸಿ ಇದೇ ಹೆಸರಿನಿಂದ ಹಾಸನ ನಗರವನ್ನು ಕರೆಯಲಾಯಿತ್ತೆಂದು ತಿಳಿದುಬರುತ್ತದೆ. ಮತ್ತೊಂದು ಐತಿಹ್ಯದ ಪ್ರಕಾರ ಸಪ್ತಮಾತೃಕೆಯರಾದ ಬ್ರಾಹ್ಮಿ, ವೈಷ್ಣವಿ, ಮಹೇಶ್ವರಿ, ಕೌಮಾರಿ, ಇಂದ್ರಾಣಿ, ವರಾಹಿ ಮತ್ತು ಚಾಮುಂಡಿಯರು ಉತ್ತರದ ವಾರಣಾಸಿಯಿಂದ (ಕಾಶಿ) ದಕ್ಷಿಣ ಭಾರತಕ್ಕೆ ಪ್ರವಾಸ ಬಂದಿದ್ದಾಗ ಈ ಪ್ರದೇಶದ ನೈಸರ್ಗಿಕ ಸೌಂದರ್ಯಕ್ಕೆ ಮನಸೋತು ಇಲ್ಲಿಯೇ ನೆಲೆಸಿದರೆಂದು ತಿಳಿದುಬರುತ್ತದೆ.[7] ಈ ಏಳು ಜನ ಸಪ್ತಮಾತೃಕೆಯರಲ್ಲಿ ಮೂವರು ಹಾಸನದ ದೇವಿಗೆರೆಯಲ್ಲಿ ನೆಲೆಸಿದರೆ ಮೂವರು ಸಪ್ತಮಾತೃಕೆಯರು ಹಾಸನದ ಹಾಸನಾಂಭ ದೇವಾಲಯದೊಳಗೆ ಹುತ್ತದ ರೂಪದಲ್ಲಿ ನೆಲೆಸಿದರೆಂದು ಮತ್ತೊಬ್ಬಳು ಆಲೂರು ತಾಲೂಕಿನ ಕೆಂಚಮ್ಮನ ಹೊಸಕೋಟೆಯಲ್ಲಿ ಕೆಂಚಾಂಬೆಯಾಗಿ ನೆಲೆಸಿದಳೆಂದು ಇಲ್ಲಿನ ಸ್ಥಳ ಪುರಾಣದ ಮೂಲಕ ತಿಳಿದುಬರುತ್ತದೆ.[8]

ವಿಜಯನಗರ ಅರಸರ ಆಳ್ವಿಕೆಯಲ್ಲಿ ಇವರ ಸಾಮಂತ ಪಾಳೆಯಗಾರರಲ್ಲಿ ಒಬ್ಬನಾದ ಸಂಜೀವ ಕೃಷ್ಣಪ್ಪ ನಾಯಕನು ಹಾಸನ ಪ್ರದೇಶದಲ್ಲಿ ಆಡಳಿತ ನಡೆಸುತ್ತಿದ್ದಾಗ ಈತನು ಒಮ್ಮೆ ರಾಜ್ಯ ವೀಕ್ಷಣೆಗೆ ಹೊರಟಾಗ ಒಂದು ಮೊಲ ಅಡ್ಡಲಾಗಿ ಬರುತ್ತದೆ. ಇದನ್ನು ಅಪಶಕುನವೆಂದು ಭಾವಿಸಿದ ಸಂಜೀವ ಕೃಷ್ಣಪ್ಪನಾಯಕನು ಮನಸ್ಸಿನಲ್ಲಿ ಬೇಸರಗೊಂಡ ಸಂದರ್ಭದಲ್ಲಿ ಹಾಸನಾಂಭ ದೇವತೆಯು ಪ್ರತ್ಯಕ್ಷಳಾಗಿ ಇದಕ್ಕೆ ನೊಂದುಕೊಳ್ಳದೇ ಮೊಲ ಅಡ್ಡ ಬಂದ ಸ್ಥಳದಲ್ಲಿ ಒಂದು ಕೋಟೆಯನ್ನು ಒಳಭಾಗದಲ್ಲಿ ಒಂದು ದೇವಾಲಯವನ್ನು ನಿರ್ಮಿಸಲು ತಿಳಿಸಿದಳಂತೆ ಇದರ ಪ್ರಕಾರ ಈತನು ಒಂದು ಕೋಟೆಯನ್ನು ಮತ್ತು ನಗರದ ಒಳಭಾಗದಲ್ಲಿ ಹಾಸನಾಂಭ ದೇವಾಲಯವನ್ನು ನಿರ್ಮಿಸಿ 'ಚನ್ನಪಟ್ಟಣ' ಎಂದು ಕರೆಯುತ್ತಿದ್ದ ನಗರವನ್ನು ಹಾಸನಾಂಭನಗರ ಎಂದು ನಾಮಕರಣ ಮಾಡಿದನೆಂದು ತಿಳಿದುಬರುತ್ತದೆ. ನಂತರದ ಕಾಲಘಟ್ಟದಲ್ಲಿ ಹಾಸನಾಂಭನಗರ ಎಂಬ ಪದವು ಬದಲಾವಣೆ ಹೊಂದಿ ಹಾಸನ ನಗರ ಎಂಬುದಾಗಿ ಪರಿವರ್ತಿತವಾಯಿತು ಎಂದು ಹೇಳಲಾಗಿದೆ.[9]

**ಸಂಶೋಧನೆಯ ಉದ್ದೇಶ**

ಪ್ರತಿಯೊಂದು ಕಾಲಘಟ್ಟದಲ್ಲಿಯೂ ಹಾಸನ ತಾಲೂಕು ವಿಭಿನ್ನವಾಗಿ ನಿಲ್ಲುತ್ತದೆ ಎಂಬುದಕ್ಕೆ ಇಲ್ಲಿ ದೊರೆತಿರುವ ಶಾಸನಗಳು ಮತ್ತು ಸ್ಮಾರಕಗಳು ಸಾಕ್ಷಿಯಾಗಿವೆ. ಹೊಯ್ಸಳರ ಸಮಗ್ರ ರಾಜಕೀಯ ಇತಿಹಾಸವನ್ನು ರಚಿಸುವ ಸಂದರ್ಭದಲ್ಲಿ ಕೇವಲ ಪ್ರಮುಖ ಶಾಸನಗಳನ್ನಷ್ಟೇ ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಆದರೆ ಈ ಪ್ರದೇಶದ ಭೌಗೋಳಿಕ ಮಹತ್ವ ಮತ್ತು ಸ್ಥಳೀಯರು ಹೇಗೆ ರಾಜ್ಯಾಡಳಿತದಲ್ಲಿ ರಾಜರಿಗೆ ನೆರವಾದವು ಎಂಬುದನ್ನು ತಿಳಿಸುವ

ಸ್ಥಳೀಯ ಶಾಸನಗಳನ್ನು ಬಳಸಿಕೊಂಡು ತಾಲೂಕಿನ ಸವಿಸ್ತಾರವಾದ ರಾಜಕೀಯ ಇತಿಹಾಸವನ್ನು ವಿವರಸುವ ಪ್ರಯತ್ನಗಳು ನಡೆದಿರುವುದಿಲ್ಲ. ಆದ್ದರಿಂದ ಹಾಸನ ತಾಲೂಕಿನಲ್ಲಿ ಕಂಡುಬಂದಿರುವ ಎಲ್ಲಾ ಹೊಯ್ಸಳರ ಕಾಲದ ಶಾಸನಗಳು ಮತ್ತು ಇತರ ದ್ವಿತೀಯ ಆಕರಗಳನ್ನು ಬಳಸಿಕೊಂಡು ತಾಲೂಕಿನ ಹೊಯ್ಸಳ ರಾಜಕೀಯ ಇತಿಹಾಸವನ್ನು ಸಂರಚಿಸುವ ಉದ್ದೇಶವನ್ನು ಹೊಂದಲಾಗಿದೆ. ಹಾಗೆಯೇ ಹೊಯ್ಸಳ ವಾಸ್ತುಶಿಲ್ಪ ಕೇಂದ್ರಗಳು ಎಂದಾಕ್ಷಣ ಬಹುಪಾಲು ಜನರ ನೆನಪಿಗೆ ಬರುವುದು ಬೇಲೂರು, ಹಳೆಬೀಡು ಮತ್ತು ಸೋಮನಾಥಪುರ ಇನ್ನೂ ಮುಂತಾದ ಕೆಲವೇ ಕೆಲವು ಕೇಂದ್ರಗಳು. ಆದರೆ ಇವುಗಳ ಹೊರತಾಗಿಯೂ ಅದ್ಭುತವಾದ ಹೊಯ್ಸಳ ದೇವಾಲಯಗಳು ಹಾಸನ ತಾಲೂಕಿನಲ್ಲಿಯೂ ಕಂಡುಬಂದಿದ್ದು ಇವುಗಳು ವಿಭಿನ್ನವಾದ ಲಕ್ಷಣಗಳನ್ನು ಹೊಂದಿವೆ. ಪ್ರಸ್ತುತ ಸಂಶೋಧನೆಯಲ್ಲಿ ಹೊಯ್ಸಳ ದೇವಾಲಯಗಳ ಸಾಮಾನ್ಯ ಲಕ್ಷಣಗಳನ್ನು ವಿವರಿಸುವುದರ ಜೊತೆಗೆ ಹಾಸನ ತಾಲೂಕಿನ ಹೊಯ್ಸಳ ದೇವಾಲಯಗಳು ಮತ್ತು ಶಿಲ್ಪಗಳನ್ನು ಹೊರಜಗತ್ತಿಗೆ ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಸ್ಥಳೀಯ ಇತಿಹಾಸ, ಆಚರಣೆಗಳು ಧರ್ಮ, ಕಲೆ ಇನ್ನೂ ಮುಂತಾದ ಅಂಶಗಳನ್ನು ತಿಳಿಯುವಲ್ಲಿ ವೀರಗಲ್ಲುಗಳು ಪ್ರಮುಖ ಪಾತ್ರವಹಿಸುತ್ತವೆ. ಇವುಗಳು ಸ್ಥಳೀಯ ಜನರ ಭಾವನಾತ್ಮಕ ಸಂಬಂಧದೊಂದಿಗೆ ಬೆರೆತು ಹೋಗಿದ್ದು ಹಾಸನ ತಾಲೂಕಿನ ಈ ವೀರಗಲ್ಲುಗಳನ್ನು ಕುರಿತು ಸಮಗ್ರವಾದ ಅಧ್ಯಯನ ನಡೆದಿರುವುದಿಲ್ಲ. ಆದ್ದರಿಂದ ತಾಲೂಕಿನಲ್ಲಿ ಕಂಡು ಬಂದಿರುವ ಹೊಯ್ಸಳರ ಕಾಲದ ಶಾಸನೋಕ್ತ ವೀರಗಲ್ಲುಗಳ ಸಮಗ್ರ ಮಾಹಿತಿಯನ್ನು ನೀಡುವ ಉದ್ದೇಶವನ್ನು ಪ್ರಸ್ತುತ ಸಂಶೋಧನೆಯು ಒಳಗೊಂಡಿದೆ. ಒಟ್ಟಾರೆಯಾಗಿ ಒಂದು ಸೀಮಿತ ಭೌಗೋಳಿಕ ವ್ಯಾಪ್ತಿಯನ್ನು ಹೊಂದಿರುವ ಹಾಸನ ತಾಲೂಕಿನ ಹೊಯ್ಸಳರ ಸ್ಮಾರಕಗಳ ಇತಿಹಾಸ ಮತ್ತು ಪರಂಪರೆಯನ್ನು ತಿಳಿಸುವುದರ ಜೊತೆಗೆ ಇವುಗಳನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ವರ್ಗಾಯಿಸುವ ಉದ್ದೇಶವನ್ನು ಒಳಗೊಂಡಿದೆ.

**ಸಂಶೋಧನೆಯ ವ್ಯಾಪ್ತಿ**

ಒಂದು ಸಂಶೋಧನೆಯನ್ನು ಸಮಗ್ರವಾಗಿ ಮತ್ತು ವಸ್ತುನಿಷ್ಟವಾಗಿ ಕೈಗೊಳ್ಳಲು ಅದರ ಎಲ್ಲೆಗಳನ್ನು ಗುರುತಿಸಿಕೊಳ್ಳುವುದು ಮಹತ್ವದ್ದಾಗಿರುತ್ತದೆ ಹಾಗೂ ಅದು ಅನಿವಾರ್ಯವೂ ಆಗಿರುತ್ತದೆ. ಆಗ ಮಾತ್ರ ಉದ್ದೇಶಿತ ಸಂಶೋಧನೆಯ ಫಲಿತವನ್ನು ಕಾಣಲು ಸಾಧ್ಯ. ಪ್ರಸ್ತುತ ನನ್ನ ಸಂಶೋಧನಾ ವಿಷಯವು "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ಅಧ್ಯಯನ" ಆಗಿರುವುದರಿಂದ ಭೌಗೋಳಿಕ ವ್ಯಾಪ್ತಿಯನ್ನು ಹಾಸನ ತಾಲೂಕಿಗೆ ಮತ್ತು ಸಂಶೋಧನಾ ವಿಷಯ ವ್ಯಾಪ್ತಿಯನ್ನು ಹೊಯ್ಸಳರಿಗೆ

ಸೀಮಿತವಾಗಿರಿಸಿಕೊಂಡು ಈ ವ್ಯಾಪ್ತಿಯೊಳಗೆ ನನ್ನ ಸಂಶೋಧನಾ ಪ್ರಬಂಧವನ್ನು ರಚಿಸುವ ಕಾರ್ಯ ಮಾಡಲಾಗಿದೆ.

**ಸಂಶೋಧನಾ ವಿಧಾನ**

ಯಾವುದೇ ಒಂದು ಸಂಶೋಧನೆಯು ವ್ಯವಸ್ಥಿತವಾಗಿ ಜರುಗಲು ಆ ಸಂಶೋಧನೆಯಲ್ಲಿ ಬಳಸುವ ವಿಧಾನವು ಮಹತ್ವಪೂರ್ಣವಾಗಿರುತ್ತದೆ. ಪ್ರಸ್ತುತ ಅಧ್ಯಯನವು ಸಂಪೂರ್ಣವಾಗಿ ಶಾಸನ ಉಲ್ಲೇಖಿತ ಮತ್ತು ಉಲ್ಲೇಖಿತವಲ್ಲದ ಹಾಸನ ತಾಲೂಕಿನ ಹೊಯ್ಸಳ ದೇವಾಲಯಗಳ ಕ್ಷೇತ್ರಕಾರ್ಯವನ್ನು ಆಧರಿಸಿರುವುದಾಗಿದೆ. ಆದ್ದರಿಂದ ಕ್ಷೇತ್ರಕಾರ್ಯವನನು ಸಂಶೋಧನಾ ವಿಧಾನದಲ್ಲಿ ಪ್ರಮುಖವಾಗಿ ಅಳವಡಿಸಿಕೊಂಡು ತಾಲೂಕಿನಲ್ಲಿ ಕಂಡುಬರುವ ಹೊಯ್ಸಳ ದೇವಾಲಯಗಳಿಗೆ ಭೇಟಿ ನೀಡಿ ದೇವಾಲಯಗಳ ಮತ್ತು ಶಿಲ್ಪಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗಿದೆ. ಹಾಗೆಯೇ ದೇವಾಲಯಗಳಿಗೆ ಸಂಬಂಧಿಸಿದ ಅರ್ಚಕರು ಹಾಗೂ ಸ್ಥಳೀಯರಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ತೆಗೆದುಕೊಂಡ ಛಾಯಾಚಿತ್ರಗಳ ಜೊತೆಗೆ ವಿವಿಧ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳು ಮತ್ತು ಪ್ರಾಥಮಿಕ ಹಾಗೂ ದ್ವಿತೀಯ ಆಕರಗಳನ್ನು ವಸ್ತುನಿಷ್ಟವಾಗಿ ಮತ್ತು ಸಮಗ್ರವಾಗಿ ಅಧ್ಯಯನಕ್ಕೊಳಪಡಿಸಿ ವಿಶ್ಲೇಷಣಾತ್ಮಕವಾಗಿ ಹಾಗೂ ವಿವರಣಾತ್ಮಕವಾಗಿ ದಾಖಲಿಸಿ ಈ ಸಂಶೋಧನಾ ಪ್ರಬಂಧವನ್ನು ರಚಿಸಲಾಗಿದೆ.

**ಅಧ್ಯಯನದ ಮಹತ್ವ**

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ದೇವಾಲಯಗಳು ಚಿರಸ್ಥಾಯಿಯಾಗಿದ್ದು ಅವುಗಳ ಸಂಶೋಧನೆ ಮತ್ತು ಕ್ರಮಬದ್ಧ ಅಧ್ಯಯನ ಬಹಳ ಮುಖ್ಯವಾಗಿದೆ. ಸಾಂಸ್ಕೃತಿಕ ವಿಚಾರಗಳ ದೃಷ್ಠಿಯಿಂದ ದೇವಾಲಯಗಳ ಉಗಮ, ಮೂಲ, ಹಿನ್ನೆಲೆಯನ್ನು ಗಮನಿಸಿದಾಗ ಅಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಚಾರಗಳನ್ನು ಹೊರಚೆಲ್ಲುವಲ್ಲಿ ಇವುಗಳು ಮಹತ್ವದ ಪಾತ್ರವಹಿಸುತ್ತವೆ. ಕಲೆ ಮತ್ತು ವಾಸ್ತುಶಿಲ್ಪಗಳನ್ನು ಕುರಿತ ಒಂದು ವಿವೇಚನೆ ಈ ವಸ್ತು ವಿಷಯದ ಮುಖ್ಯ ಆಶಯವಾಗಿದೆ. ಕಲೆ ಮತ್ತು ವಾಸ್ತುಶಿಲ್ಪ ಮೂರ್ತವಾದುದು ಹಾಗೂ ಇದು ಭಾವನೆಗಳ ಸಮುಚ್ಛಯ.

ಇಂತಹ ಭಾವನೆಗಳಿಗೆ ಒಂದು ಸ್ವರೂಪವನ್ನು ಕೊಟ್ಟಾಗ ಅವುಗಳು ಕಲಾಸ್ಮಾರಕವಾಗಿ ಸಮಾಜದಲ್ಲಿ ರೂಪಗೊಳ್ಳುತ್ತವೆ. ಈ ದೇವಾಲಯಗಳನ್ನು ಅಧ್ಯಯನ ಮಾಡಿ ಆ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕತೆಗಳ ಮೇಲೆ ಬೆಳಕನ್ನು ಚೆಲ್ಲುವುದರ ಜೊತೆಗೆ ವಾಸ್ತು

ಮತ್ತು ಶಿಲ್ಪಕಲೆಯನ್ನು ಅಧ್ಯಯನ ಮಾಡಿ ಅದರ ಮಹತ್ವವನ್ನು ಇಂದಿನ ಹಾಗೂ ಮುಂದಿನ ಪೀಳಗೆಗೆ ತಿಳಿಸುವ ಮೂಲಕ ಸಮಾಜದಲ್ಲಿ ಉತ್ತಮ ಸಹಿಷ್ಣುತೆಯನ್ನು ಕಾಪಾಡಬಹುದಾಗಿದೆ.

**ಇದೂವರೆಗೂ ನಡೆದಿರುವ ಅಧ್ಯಯನಗಳು**

ಸೂರ್ಯನಾಥ್ ಯು ಕಾಮತ್ ಅವರ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಹಾಸನ ತಾಲೂಕಿಗೆ ಸಂಬಂಧಿಸಿದ್ದು ಈ ಗ್ರಂಥವು ಕ್ರಿ.ಶ.1988ರಲ್ಲಿ ಪ್ರಕಟಗೊಂಡಿದ್ದು, ಹಾಸನ ತಾಲೂಕಿಗೆ ಸಂಬಂಧಿಸಿದ ದೇವಾಲಯಗಳ ಸ್ಥಳನಾಮ, ಭೌಗೋಳಿಕತೆ, ವಾಯುಗುಣ, ಸಸ್ಯವರ್ಗ, ಪ್ರಾಣಿವರ್ಗ ಹಾಗೂ ನದಿಗಳ ಮುಂತಾದವುಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

ಎಫಿಗ್ರಾಪಿಯ ಕರ್ನಾಟಿಕ, ಸಂಪುಟ– 8, 1997ರಲ್ಲಿ ಹಾಸನ ತಾಲೂಕಿನ ಶಾಸನಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಈ ತಾಲೂಕಿನಲ್ಲಿ ಆಡಳಿತ ನಡೆಸಿದ ಗಂಗರು, ಚೋಳರು, ಹೊಯ್ಸಳ ರಾಜಮನೆತನ, ನೀಡಿದ ದಾನದತ್ತಿಗಳು, ಅವರ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳು ಮತ್ತು ಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ಮಾಹಿತಿಯನ್ನು ನೀಡುವ ಮೂಲಕ ಪ್ರಾಥಮಿಕ ಆಕರವೆನಿಸಿದೆ.

ರೈಸ್,ಬಿ.ಎಲ್. ರವರು ಕ್ರಿ.ಶ.1886 ರಿಂದ ಕ್ರಿ.ಶ.1906ರ ವೇಳೆಯಲ್ಲಿ ಹಳೆಯ ಮೈಸೂರು ಸಂಸ್ಥಾನ ಮತ್ತು ಶಾಸನಗಳನ್ನು ಸಂಗ್ರಹಿಸಿ ಎಫಿಗ್ರಾಪಿಯ ಕರ್ನಾಟಿಕ ಸಂಪುಟಗಳನ್ನು ಹೊರತಂದರು

ನರಸಿಂಹಾಚಾರ್,ಆರ್. ಎಂ.ಎ.ಆರ್.ಗಳಲ್ಲಿ ಹೊಯ್ಸಳ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಮೊದಲಿಗರು) ಕರ್ನಾಟಕದ ದೇವಾಲಯಗಳ ಬಗ್ಗೆ ವೈಜ್ಞಾನಿಕವಾದ ಮತ್ತು ಕ್ರಮಬದ್ಧವಾದ ಅಭ್ಯಾಸ ಈ ಕಾಲದಲ್ಲಿಯೇ ಪ್ರಾರಂಭವಾಯಿತು. ಇವರು ಹೊಯ್ಸಳ ದೇವಾಲಯಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಿ ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್‌ಗಳಲ್ಲಿ ಪ್ರಕಟಿಸಿದರು.

ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್, ಕ್ರಿ.ಶ.1885 ರಿಂದ 1946 ಪುರಾತತ್ವ ನೆಲೆಗಳು, ಭೂ ಸಂಶೋಧನೆಗಳು, ಭೂಉತ್ಖನನಗಳು, ನಾಣ್ಯಗಳು, ದೇವಾಲಯಗಳ ಬಗ್ಗೆ ವರದಿಗಳಲ್ಲಿ ಆಯಾ ವರ್ಷಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ದೇವಾಲಯಗಳು ಮತ್ತು ಇತರೆ ವಿಷಯಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಅಲ್ಲದೆ ದೇವಾಲಯದಲ್ಲಿರುವ ಶಾಸನಗಳು ಮತ್ತು ಆ ದೇವಾಲಯಗಳ ಸ್ಥಿತಿಗತಿ, ಜೀರ್ಣೋದ್ಧಾರ, ಸಂರಕ್ಷಣೆಯ ಬಗ್ಗೆ ಮಾಹಿತಿಯನ್ನು

ನೀಡಲಾಗಿದೆ. ಈ ವರದಿಗಳಲ್ಲಿ ಪುರಾತತ್ವ ನೆಲೆಗಳ ಬಗ್ಗೆ ಪ್ರಾಥಮಿಕ ಮಾಹಿತಿ ಹಾಗೂ ಕೆಲವು ಪ್ರಮುಖ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಬಗ್ಗೆ ವಿವರಣೆಯನ್ನು ನೀಡುವುದರ ಜೊತೆಗೆ ತಳನಕ್ಷೆಯನ್ನು ನೀಡಿದ್ದಾರೆ.

ಪ್ರೊ. ಅರವಿಂದ ಮಾಲಗತ್ತಿ ಅವರು 'ಇತಿಹಾಸ ಮತ್ತು ಪುರಾತತ್ವ' ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ-2004 ರಲ್ಲಿ ಹೊಯ್ಸಳರ ಕಾಲದ ದೇವಾಲಯಗಳು, ರಾಜಕೀಯ ಇತಿಹಾಸ, ಸಾಮಾಜಿಕ, ಧಾರ್ಮಿಕ ಸ್ಥಿತಿಗಳು ಹಾಗೂ ಮೂರ್ತಿಶಿಲ್ಪಗಳ ಬಗ್ಗೆ ಸವಿವರವಾದ ಮಾಹಿತಿಯನ್ನು ನೀಡಲಾಗಿದೆ.

ಕೃಷ್ಣ,ಎಂ.ಎಚ್. ಹೊಯ್ಸಳ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಪ್ರಮುಖರು. ಇವರು ಶಾಸನಗಳನ್ನು ಸಂಗ್ರಹಿಸಿ ಓದಿ, ವಿಶ್ಲೇಷಿಸಿ ಅವುಗಳಲ್ಲಿರುವ ಐತಿಹಾಸಿಕ, ಚಾರಿತ್ರಿಕ, ಧಾರ್ಮಿಕ ವಿಷಯಗಳ ಬಗ್ಗೆ ಬೆಳಕು ಚೆಲ್ಲಿದರು.

ಕೃಷ್ಣಸ್ವಾಮಿ ಅಯ್ಯಾಂಗಾರ್,ಎ.ಎನ್., ಜೋಷಿ,ಬಿ.ಎನ್. 'ಬೆಂಗಳೂರಿನ ಮಿಥಿಕ್ ಸೊಸೈಟಿಯ ತ್ರೈಮಾಸಿಕ' ಪತ್ರಿಕೆಯಲ್ಲಿ (ಕ್ಯೂ.ಜೆ.ಎಮ್.ಎಸ್) ಹಲವಾರು ಲೇಖನಗಳು ಪ್ರಕಟಗೊಂಡಿವೆ. ಇವರ ಲೇಖನದಲ್ಲಿ ಶ್ರೀವೈಷ್ಣವ ಧರ್ಮ, ಹೊಯ್ಸಳ ರಾಜವಂಶ ಕುರಿತು ಹಲವಾರು ವಿಷಯಗಳನ್ನು ಬರೆದಿದ್ದಾರೆ.

ವೆಂಕೋಬರಾಯ, ಬಿ. ಅವರು 'ಮೈಸೂರು ಜಿಲ್ಲೆಯ ವಾಸ್ತುಶಿಲ್ಪ' (1928) ಎಂಬ ತಮ್ಮ ಗ್ರಂಥದಲ್ಲಿ ಹಳೆಯ ಮೈಸೂರು ರಾಜ್ಯದ ದೇವಾಲಯಗಳನ್ನು ಕುರಿತು ಪರಿಚಯಾತ್ಮಕವಾಗಿ ತಿಳಿಸಿದ್ದಾರೆ. ಮೈಸೂರು ದೇಶದ ವಾಸ್ತುಶಿಲ್ಪದ ಹಿನ್ನೆಲೆ ಕುರಿತು ಬರೆಯುತ್ತಾ 'ದಕ್ಷಿಣ ದೇಶದಲ್ಲಿರುವ ಕಟ್ಟಡಗಳಲ್ಲಿ ಯಾವುದೂ ಪ್ರಾಯಶಃ ಕ್ರಿ.ಶ.6ನೆಯ ಶತಮಾನಕ್ಕಿಂತ ಹಿಂದಿನದಲ್ಲ, ಅಲ್ಲಿಂದ ಮುಂದಕ್ಕೆ ಕಟ್ಟಿದ ಕಟ್ಟಡಗಳು ಯಥೇಚ್ಛವಾಗಿವೆ' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಲ್ಲದೆ ವಿವಿಧ ವಿದ್ವಾಂಸರ ಈವರೆಗಿನ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ಪರಿಚಯಿಸಿದ್ದಾರೆ. ಆ ಕಾಲಕ್ಕೆ ಲಭ್ಯವಿದ್ದ ಮಾಹಿತಿಗಳ ಆಧಾರದ ಮೇರೆಗೆ ಆಗಿನ ಮೈಸೂರು ದೇಶದ ಭೌಗೋಳಿಕ ವ್ಯಾಪ್ತಿಗೆ ಅನ್ವಯಿಸಿ ನೋಡಿದಾಗ ಗ್ರಂಥದ ಮಹತ್ವ ತಿಳಿಯುತ್ತದೆ.

ಶ್ರೀಕಂಠಶಾಸ್ತ್ರಿ,ಎಸ್. ಅವರ 'ಹೊಯ್ಸಳ ವಾಸ್ತುಶಿಲ್ಪ', (1965) ಹೊಯ್ಸಳ ವಾಸುಶಿಲ್ಪವನ್ನೇ ವಿಶೇಷವಾಗಿ ಪರಿಶೀಲಿಸಿರುವ ಗ್ರಂಥ. ಇದು ಹೊಯ್ಸಳ ಶೈಲಿಯ ಎಲ್ಲಾ

ದೊಡ್ಡ ಮತ್ತು ಸಣ್ಣ ದೇವಾಲಯಗಳನ್ನು ಕುರಿತ ಒಂದು ಉತ್ತಮ ಮಾರ್ಗದರ್ಶಕ ಕೃತಿಯಾಗಿದೆ. ಇದರಲ್ಲಿ 20 ಛಾಯಾಚಿತ್ರಗಳನ್ನು ನೀಡಿದ್ದಾರೆ.

ರಾಮಚಂದ್ರರಾವ್,ಎಸ್.ಕೆ. ಅವರ 'ಭಾರತದ ದೇವಾಲಯ ನೆಲೆ: ಹಿನ್ನೆಲೆ' (1980) ಎಂಬ ಕೃತಿಯಲ್ಲಿ ದೇವಾಲಯದ ಉಗಮ ಮತ್ತು ಬೆಳವಣಿಗೆಯ ಬಗ್ಗೆ ವಿವರಗಳಿವೆ. ಬಹುಮುಖ ಸಂಸ್ಕೃತಿಯುಳ್ಳ ಮನುಷ್ಯನು ತನ್ನ ಮಾನಸಿಕ ಕಲ್ಪನೆಗೆ ಒಂದು ರೂಪಕೊಟ್ಟಿರುವುದೇ ಧರ್ಮವಾಯಿತು, ಅದರ ಕೈ ಕೆಲಸ ಮೂರ್ತಿ ಶಿಲ್ಪವಾಯಿತು ಎಂದಿದ್ದಾರೆ ಕೆಲವು ದೇವಾಲಯಗಳ ವಾಸ್ತುಶೈಲಿಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

ಶ್ರೀನಿವಾಸನ್,ಪಿ.ಆರ್. ಅವರ 'ದಕ್ಷಿಣ ಭಾರತದ ದೇವಾಲಯಗಳು' (1959) ಎಂಬ ಗ್ರಂಥದಲ್ಲಿ ಆಧ್ಯಾತ್ಮಿಕ ವಿಕಾಸಕ್ಕೆ ದೇಹದಂಡನೆಯ ಪ್ರಯೋಗ ಮಾಡಬೇಕೆಂದು ತಿಳಿದು ಧಾರ್ಮಿಕ ಆಚಾರಗಳು ಹುಟ್ಟಿಕೊಂಡು ದೇವಾಲಯಕ್ಕೆ ಬುನಾದಿಯಾದವೆಂಬ ವಿಚಾರಗಳನ್ನು ಚರ್ಚಿಸಲಾಗಿದೆ. ಜನಪದ ದೇವತೆಗಳಾದ ಗ್ರಾಮದೇವತೆಗಳ ಬಗೆಗೆ ಇಲ್ಲಿ ವಿವರಗಳಿದ್ದು ಸ್ತ್ರೀ ದೇವತೆಗಳ ಆರಾಧನೆಯ ಬಗೆಗೆ ವಿವರಗಳಿವೆ. ಗ್ರಾಮ ದೇವತೆಗಳಿಂದ ಶಿಷ್ಟ ದೇವತೆಗಳವರೆಗೆ ಆದ ಧಾರ್ಮಿಕ ಬೆಳವಣಿಗೆಯ ವಿಚಾರಗಳು ಈ ಕೃತಿಯಲ್ಲಿವೆ.

ಇಸ್ಮಾಯಿಲ್,ಕೆ. ಅವರ 'ಕರ್ನಾಟಕ ಟೆಂಪಲ್ಸ್' (1984) ಎಂಬ ಗ್ರಂಥ ಎಂಟು ಅಧ್ಯಾಯಗಳನ್ನೊಳಗೊಂಡಿದ್ದು ಸಾಮಾಜಿಕ ಹಾಗೂ ಆರ್ಥಿಕ ಕೊಡುಗೆಗಳಲ್ಲಿ ದೇವಾಲಯಗಳ ಪಾತ್ರವೇನು ಎಂಬುದನ್ನು ತಿಳಿಸಲಾಗಿದೆ. ವಿಚಾರ ವಿಮರ್ಶೆಯಲ್ಲಿ ಹೆಚ್ಚಾಗಿ ಶಾಸನಾಧಾರಗಳನ್ನು ಅವಲಂಬಿಸಿದೆ.

ಆಚಾರ್ಯ,ಪಿ.ಕೆ. ಅವರ 'ಇಂಡಿಯನ್ ಆರ್ಕಿಟೆಕ್ಚರ್' (1979) ಎಂಬ ಗ್ರಂಥದಲ್ಲಿ ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ವಿವರಿಸುವ ಪ್ರಾಚೀನ ಸಾಹಿತ್ಯ ಕೃತಿಗಳು ಹಾಗೂ ಶಾಸ್ತ್ರ ಗ್ರಂಥಗಳ ಬಗ್ಗೆ ವಿವರಗಳಿವೆ. ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ಕುರಿತು ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿರುವ ವಸ್ತು ವಿಷಯಗಳನ್ನು ಕ್ರೋಡಿಕರಿಸಲಾಗಿದೆ. ಮುಖ್ಯವಾಗಿ ಮಾನಸಾರ, ಮಯಮತ, ಪುರಾಣ, ಆಗಮ, ವೈದಿಕ ಸಾಹಿತ್ಯ, ಬೌದ್ಧ ಸಾಹಿತ್ಯ ಮುಂತಾದವುಗಳನ್ನು ಆಧರಿಸಿ ವಿವರಣೆಯನ್ನು ನೀಡಿದ್ದಾರೆ. ವಾಸ್ತುಶೈಲಿ ಮತ್ತು ಶಿಲ್ಪಗಳ ಅಧ್ಯಯನಕ್ಕೆ ಇದೊಂದು ಉತ್ತಮ ಆಕರ ಗ್ರಂಥವಾಗಿದೆ ಎಂದರೆ ತಪ್ಪಾಗಲಾರದು. 'ಎ ಡಿಕ್ಷನರಿ ಅಫ್ ಹಿಂದೂ ಆರ್ಕಿಟೆಕ್ಚರ್' (1981) ಎಂಬ ಇವರ ಮತ್ತೊಂದು ಗ್ರಂಥದಲ್ಲಿ ದೇವಾಲಯಗಳ ಪ್ರತಿಯೊಂದು ಭಾಗಗಳ ವಿವರಣೆಯನ್ನು ನೀಡಲಾಗಿದೆ. ವಾಸ್ತುಶಿಲ್ಪದ ಅಧ್ಯಯನಕ್ಕೆ ಇದೊಂದು ಮಹತ್ತರ ಗ್ರಂಥವಾಗಿದೆ.

ಸುರೇಶ್,ಕೆ.ಎಂ. ಅವರ 'ಟೆಂಪಲ್ಸ್ ಆಫ್ ಕರ್ನಾಟಕ' (2003) ಎಂಬ ಗ್ರಂಥ ಎರಡು ಸಂಪುಟಗಳನ್ನೊಳಗೊಂಡಿದೆ. ಮೊದಲನೆಯ ಸಂಪುಟದಲ್ಲಿ ಹಲವಾರು ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ತಿಳಿಸಲಾಗಿದೆ. ಏಕಕೂಟ ದೇವಾಲಯದಿಂದ ಆರಂಭಗೊಂಡು ನವಕೂಟ ದೇವಾಲಯದವರೆಗೆ ಅವುಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಎರಡನೆಯ ಸಂಪುಟದಲ್ಲಿ ದೇವಾಲಯಗಳ ತಲನಕ್ಷೆ ಹಾಗೂ 540 ಛಾಯಾಚಿತ್ರಗಳನ್ನು ನೀಡಲಾಗಿದೆ. ಚಿಕ್ಕಮಗಳೂರಿಗೆ ಸಂಬಂಧಪಟ್ಟಂತೆ ಅಮೃತಾಪುರದ ಅಮೃತೇಶ್ವರ, ಆಸಂದಿಯ ಬ್ರಹ್ಮೇಶ್ವರ ಮತ್ತು ಗಂಗೇಶ್ವರ, ಬೆಳವಾಡಿಯ ವೀರನಾರಾಯಣ, ಹಿರೇನಲ್ಲೂರಿನ ಮಲ್ಲಿಕಾರ್ಜುನ, ಕಬ್ಬಳ್ಳಿಯ ಸೋಮೇಶ್ವರ ದೇವಾಲಯಗಳ ವಾಸ್ತುಶಿಲ್ಪದ ವಿವರಣೆಯನ್ನು ನೀಡಿದ್ದಾರೆ.

ಪದ್ಮನಾಭ,ಕೆ. ಅವರ 'ಹೊಯ್ಸಳ ಸ್ಕಲ್ಪ್‌ಚರ್ಸ್ ಎ ಕಲ್ಚರಲ್ ಸ್ಟಡಿ' (1989) ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ದೇವಾಲಯದ ಲಕ್ಷಣಗಳು ಮತ್ತು ವಿವಿಧ ಮಾದರಿಗಳ ಬಗೆಗೆ ಮಾಹಿತಿಯನ್ನು ಒದಗಿಸಿದೆ. ಹೊಯ್ಸಳರ ಕಾಲದ ಶಿಲ್ಪಗಳ ಆಧಾರದ ಮೇಲೆ ಸಮಕಾಲೀನ ಸಮಾಜದಲ್ಲಿ ಅಂದು ಜನಪದರು ಬಳಸುತ್ತಿದ್ದಂತಹ ಉಡುಪುಗಳು, ಪೀಠೋಪಕರಣಗಳು, ಕಿರೀಟಗಳು, ಪಾತ್ರೆಗಳು, ಸಂಗೀತ ಸಾಧನಗಳು, ಆಯುಧಗಳು ಹಾಗೂ ಇನ್ನಿತರ ವಸ್ತುಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

ಜ್ಞಾನಾನಂದ,ಜಿ. ಅವರ 'ಶಿಲ್ಪಾದರ್ಶ' (2002) ಕೃತಿಯು ಎರಡು ಸಂಪುಟಗಳಿಂದ ಕೂಡಿದ್ದು ಮೊದಲ ಸಂಪುಟ ಶಿಲ್ಪಶಾಸ್ತ್ರದ ಗಂಭೀರ ಅಧ್ಯಯನಕ್ಕೆ ಮೂಲ ಆರಕವಾಗಿದೆ. ಎರಡನೆಯ ಸಂಪುಟ ಭಾರತೀಯ ದೇವಾಲಯಗಳ ಇತಿಹಾಸದ ಬಗೆಗೆ ಕುತೂಹಲಕರವಾದ ವಿವರಗಳನ್ನು ಸಂಕ್ಷಿಪ್ತವಾಗಿ ದಾಖಲಿಸುತ್ತದೆ. ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಸ್ವರೂಪ ವೈವಿಧ್ಯತೆಗಳನ್ನು ರೇಖಾಚಿತ್ರಗಳ ಮೂಲಕ ವಿವರಿಸಲಾಗಿದೆ.

ಸಿಂದಗಿ ರಾಜಶೇಖರ ಅವರ 'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' (1988) ಎಂಬ ಗ್ರಂಥದಲ್ಲಿ ಕರ್ನಾಟಕವನ್ನಾಳಿದ ಶಾತವಾಹನರು, ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರ ಕಾಲದ ವಾಸ್ತುಶಿಲ್ಪಗಳ ಲಕ್ಷಣಗಳನ್ನೂ ಕರ್ನಾಟಕದಲ್ಲಿ ಜೈನರ ವಾಸ್ತುಶಿಲ್ಪ ಮತ್ತು ಚಿತ್ರಕಲೆಯ ಲಕ್ಷಣಗಳನ್ನು ಹಾಗೂ ವಿಜಯನಗರ ಕಾಲದ ಚಿತ್ರಕಲೆಯನ್ನೂ ತಿಳಿಸಿದೆ. ಕರ್ನಾಟಕದ ವಾಸ್ತುಶಿಲ್ಪ ಕಲೆಯನ್ನು ಅಧ್ಯಯನ ಮಾಡುವುದಕ್ಕೆ ಇದೊಂದು ಬಹುಮುಖ್ಯ ಪೂರಕವಾದ ಗ್ರಂಥವಾಗಿದೆ.

ಗೋಪಿನಾಥ್,ಟಿ.ಎ. ಅವರ 'ದಿ ಎಲಿಮೆಂಟ್ಸ್ ಆಫ್ ಹಿಂದೂ ಐಕಾನೋಗ್ರಫಿ' (1911) ಎಂಬ ಗ್ರಂಥದಲ್ಲಿ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ಉಲ್ಲೇಖಗಳಿವೆ.

ಶ್ರೀನಿವಾಸ್,ವಿ.ಪಾಡಿಗಾರ್ ರವರ 'ದಿ ಕಲ್ಟ್ ಆಫ್ ವಿಷ್ಣು ಇನ್ ಕರ್ನಾಟಕ ' (1996) ಎಂಬ ಕೃತಿ ಹೊಯ್ಸಳ ಶಿಲ್ಪಗಳ ಉದಾಹರಣೆಗಳೊಂದಿಗೆ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ವಿವರಿಸುತ್ತದೆ.

ಪರ್ಸಿಬ್ರೌನ್‌ರವರ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್' (1942) ಎಂಬ ಗ್ರಂಥ ಭಾರತದ ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಉಗಮ ಮತ್ತು ವಿಕಾಸದ ಬಗ್ಗೆ ವಿವರಣೆ ನೀಡುವ ಮಹತ್ವದ ಗ್ರಂಥವಾಗಿದೆ. ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಸಂಶೋಧನೆ ಮಾಡುವವರಿಗೆ ಆಧಾರ ಕೃತಿಯಾಗಿದೆ.

ಡಾಖೆ,ಎಂ.ಎ. ಅವರ 'ದ ಇಂಡಿಯನ್ ಟೆಂಪಲ್ಸ್ ಪಾರ್ಮ್' (1977) ಎಂಬ ಗ್ರಂಥದಲ್ಲಿ ಸುಮಾರು 51 ಚಿತ್ರಗಳ ಸಹಿತ ದೇವಾಲಯಗಳ ವಾಸ್ತುಶೈಲಿ ಲಕ್ಷಣಗಳನ್ನು ತಿಳಿಸಿದ್ದಾರೆ. ಪ್ರಾಚೀನ ಗ್ರಂಥಗಳ ಮೂಲ ವಿಚಾರಗಳೊಂದಿಗೆ ಹೋಲಿಸಿ ವಾಸ್ತುವಿನ ಬೆಳವಣಿಗೆಯನ್ನು ತಿಳಿಸಲಾಗಿದೆ. ನಾಗರ, ದ್ರಾವಿಡ, ವೇಸರ ಶೈಲಿಯ ಲಕ್ಷಣಗಳ ವಿವರಣೆ ನೀಡಲಾಗಿದೆ. ಹಳೇ ಮೈಸೂರು ಪ್ರಾಂತ್ಯದಲ್ಲಿ ಹೊಯ್ಸಳರ ಕಾಲದಲ್ಲಿ ವೇಸರ ಶೈಲಿ ಅತ್ಯುನ್ನತ ಮಟ್ಟಕ್ಕೇರಿತು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಡಾಖೆ,ಎಂ.ಎ. ಮತ್ತು ಮೈಕಲ್ ಮೈಸ್ಟರ್.,ರವರು ಸಂಪಾದಿಸಿದ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಆಫ್ ಸೌತ್ ಇಂಡಿಯಾ', 'ಲೊಯರ್ ದ್ರಾವಿಡದೇಶ' (1983) 'ಅಪ್ಪರ್ ದ್ರಾವಿಡದೇಶ' (1986)ಎಂಬ ಶಬ್ಧಕೋಶಗಳಲ್ಲಿ (ಭಾಗ 1, 2, 3) ಭಾರತೀಯ ದೇವಾಲಯಗಳ ವಾಸ್ತುಲಕ್ಷಣಗಳ ಸಂಪೂರ್ಣ ವಿವರಣೆಯನ್ನು ನೀಡಲಾಗಿದೆ. ಇವುಗಳಲ್ಲಿ ದ್ರಾವಿಡ ಮತ್ತು ನಾಗರಶೈಲಿಯ ದೇವಾಲಯಗಳನ್ನು ಕುರಿತಂತೆ ಅನೇಕ ವಿಚಾರಗಳಿವೆ.

ಶೆಟ್ಟರ್,ಎಸ್., ಅವರು ಬರೆದಿರುವ 'ದಿ ಹೊಯ್ಸಳ ಟೆಂಪಲ್ಸ ಅಟ್ ಕರ್ನಾಟಕ'(1992). ಇದರಲ್ಲಿ ಹೊಯ್ಸಳ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಸಮಗ್ರವಾಗಿ ವಿವರಣೆಯನ್ನು ನೀಡಿದ್ದಾರೆ. ಇವರು ಬರೆದಿರುವ ಕೃತಿಯು ಸಂಪುಟ-1, ದೇವಾಲಯದ ವಿವರಣೆಗೆ ಸಂಬಂಧಿಸಿದ್ದು ಸಂಪುಟ-2 ಛಾಯಾಚಿತ್ರಕ್ಕೆ ಸಂಬಂಧಿಸಿದೆ.

ಸ್ಟೆಲ್ಲಾ ಕ್ರಾರ್ಮರಿಶ್ಚ್., ಅವರ 'ಇಂಡಿಯನ್ ಸ್ಕಲ್ಪ್ ಚರ್' (2013) ಎಂಬ ಕೃತಿಯಲ್ಲಿ ಭಾರತೀಯ ಶಿಲ್ಪಕಲಾಕೃತಿಗೆ ಸಂಬಂಧಿಸಿದಂತೆ ಸಿಂಧೂ ಬಯಲಿನ ನಾಗರೀಕತೆಯಿಂದ

ಮಧ್ಯಕಾಲೀನ ಯುಗದವರೆಗೆ ಅಂದರೆ ಪ್ರಾಚೀನ, ಸಾಂಪ್ರದಾಯಿಕ, ಮಧ್ಯಕಾಲೀನ ಇತಿಹಾಸದ ಅಂತ್ಯದವರೆಗೂ ಶಿಲ್ಪಕಲೆಯ ಉಗಮ ಮತ್ತು ಬೆಳವಣಿಗೆ ಎಷ್ಟರಮಟ್ಟಿಗೆ ಊರ್ಜಿತಗೊಂಡವು ಎಂಬುದನ್ನು ಸಮಗ್ರವಾದ ವಿವರವನ್ನು ನೀಡಿರುವ ಕೃತಿಯಾಗಿದ್ದು 241 ಪುಟಗಳನ್ನು ಜೊತೆಗೆ 116 ಛಾಯಾಚಿತ್ರಗಳನ್ನು ಈ ಕೃತಿಯು ಒಳಗೊಂಡಿದ್ದು ಸಂಶೋಧನಾಸಕ್ತರಿಗೆ ಉಪಯುಕ್ತ ಕೃತಿಯಾಗಿದೆ.

ಅಪರ್ಣ,ಕೂ.ಸ., ಅವರು ಬರೆದಿರುವ 'ದೇವಾಲಯಗಳ ವಾಸ್ತುಶಿಲ್ಪ ಪರಿಚಯ'(1999) ಇವರು ದೇವಾಲಯಗಳ ಲಕ್ಷಣಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ನೀಡಿ ಸಂಶೋಧಕರಿಗೆ ಬಹಳ ಉಪಯುಕ್ತ ಮಾಹಿತಿಯನ್ನು ನೀಡುವಂತ ಪ್ರಯತ್ನವನ್ನು ಮಾಡಿದ್ದಾರೆ.

ಮೈಸೂರು ನಾಗರಾಜ ಶರ್ಮಾ, ಅವರ ಹೊಯ್ಸಳ ಶಿಲ್ಪದಲ್ಲಿ ಶಿವ, ಈ ಕೃತಿಯು ಹೊಯ್ಸಳ ದೇವಾಲಯಗಳಲ್ಲಿ ಕಂಡು ಬರುವ ಲಿಂಗ ಸ್ವರೂಪಿ, ಶೈವ ಪರಂಪರೆಯ ಬಗ್ಗೆ ಉಲ್ಲೇಖಿಸುತ್ತದೆ. ಲಿಂಗಗಳ ಉದ್ಭವ, ಶೈವಾಗಮನ ವರ್ಣನೆ, ದೇವಾಲಯಗಳ ಲಕ್ಷಣಗಳು, ದೇವಾಲಯಗಳ ಕೂಟ ರಚನೆ, ದೇವಾಲಯಗಳ ವಿವಿಧ ಭಾಗಗಳ ಬಗ್ಗೆ ಚರ್ಚಿಸುತ್ತದೆ.

ಡಾ.ತಿಪ್ಪೇರುದ್ರಸ್ವಾಮಿ, ಹೆಚ್., ಅವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'(2013). ಈ ಗ್ರಂಥದಲ್ಲಿ ಭಾರತೀಯ ಸಂಸ್ಕೃತಿ, ಪ್ರಾಚೀನತೆ, ಕರ್ನಾಟಕದಲ್ಲಿ ಆಳ್ವಿಕೆ ನಡಿಸಿದ ರಾಜಮನೆತನಗಳು ಆಡಳಿತ ಕ್ರಮಕ್ಕೆ ಸಂಬಂಧಿಸಿದಂತೆ ಧಾರ್ಮಿಕ ಪರಿಸ್ಥಿತಿ ಹಾಗೂ ವಿದ್ಯಾಭ್ಯಾಸ, ಶಾಸನಗಳಲ್ಲಿ ಸಂಸ್ಕೃತಿ ಅದರಲ್ಲಿ ಶಾಸನ ಸಂಪತ್ತು, ವೀರಗಲ್ಲು, ದಾನಶಾಸನಗಳು ಮತ್ತು ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ಸಂಬಂಧಿಸಿದಂತೆ ಉಗಮ, ಬೆಳವಣಿಗೆ, ಚಾಲುಕ್ಯ, ಹೊಯ್ಸಳ, ವಿಜಯನಗರ ಮತ್ತು ಮುಸ್ಲಿಂ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನ ಕುರಿತ ವಿಷಯಗಳನ್ನು ಒಂದೇ ಕಡೆ ನಿರೂಪಿಸಿರುವುದರಿಂದ ಈ ಗ್ರಂಥವು ಸಂಶೋಧನಾತ್ಮಕವಾಗಿ ಅತ್ಯುಪಯುಕ್ತ ಕೃತಿಯಾಗಿದೆ.

**ಅಧ್ಯಾಯಗಳ ವರ್ಗೀಕರಣ**

ಪ್ರಸ್ತುತ ನನ್ನ ಸಂಶೋಧನಾ ವಿಷಯವು "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ" ಎಂಬುದಾಗಿರುವುದರಿಂದ ಹೊಯ್ಸಳರು ಕಲಾ ಪ್ರಪಂಚಕ್ಕೆ ನೀಡಿರುವ ಕೊಡುಗೆಗಳನ್ನು ಭೌಗೋಳಿಕ ವ್ಯಾಪ್ತಿಗೆ ಸೀಮಿತಗೊಳಿಸಿಕೊಂಡು ಹಾಸನ ತಾಲೂಕಿನಲ್ಲಿ ಹೊಯ್ಸಳರು ನಿರ್ಮಿಸಿರುವ ದೇವಾಲಯಗಳ ಕಲೆ ಮತ್ತು ವಾಸ್ತು ಶಿಲ್ಪವನ್ನು ಪರಿಚಯಿಸುವ ಕಾರ್ಯವನ್ನು ಪ್ರಸ್ತುತ ಸಂಶೋಧನಾ

ಪ್ರೌಢಪ್ರಬಂಧದಲ್ಲಿ ಮಾಡಲಾಗಿದೆ. ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ವಿಶೇಷವಾಗಿ ಚರ್ಚಿಸುವುದರ ಜೊತೆಗೆ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು, ಶಾಸನೋಕ್ತ ವೀರಗಲ್ಲುಗಳನ್ನು ಹಾಗೂ ಪ್ರಮುಖ ಶಿಲ್ಪಗಳ ಲಕ್ಷಣಗಳನ್ನು ಚರ್ಚಿಸುವ ನಿಟ್ಟಿನಲ್ಲಿ, ಅಧ್ಯಯನದ ಅನುಕೂಲಕ್ಕಾಗಿ ನನ್ನ ಸಂಶೋಧನಾ ವಿಷಯವನ್ನು ಈ ಕೆಳಕಂಡಂತೆ ಅಧ್ಯಾಯಗಳಾಗಿ ವರ್ಗೀಕರಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಪ್ರೌಢಪ್ರಬಂಧವನ್ನು ಒಟ್ಟು ಏಳು ಅಧ್ಯಾಯಗಳಾಗಿ ವಿಂಗಡಣೆ ಮಾಡಲಾಗಿದೆ.

ಮೊದಲನೆಯ ಅಧ್ಯಾಯವು ಪೀಠಿಕೆಯಾಗಿದ್ದು, ಇದರಲ್ಲಿ ಹಾಸನ ತಾಲೂಕಿನ ಭೌಗೋಳಿಕ ಲಕ್ಷಣಗಳು, ಹಾಸನ ತಾಲೂಕಿನ ಸಂಕ್ಷಿಪ್ತ ಪರಿಚಯ ಮತ್ತು ಐತಿಹಾಸಿಕ ಹಿನ್ನೆಲೆ, ಪ್ರಸ್ತುತ ಸಂಶೋಧನೆಯ ಉದ್ದೇಶ, ವ್ಯಾಪ್ತಿ, ವಿಧಾನ, ಅಧ್ಯಯನದ ಮಹತ್ವ, ಇದುವರೆಗೆ ನಡೆದಿರುವ ಅಧ್ಯಯನಗಳು ಮತ್ತು ಅಧ್ಯಯದ ಸ್ವರೂಪವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯವು ಹಾಸನ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸದ ಅಂಶಗಳನ್ನು ಒಳಗೊಂಡಿದ್ದು, ಇದರಲ್ಲಿ ಹೊಯ್ಸಳರ ಸಂಕ್ಷಿಪ್ತ ರಾಜಕೀಯ ಇತಿಹಾಸವನ್ನು ಚರ್ಚಿಸುವುದರ ಜೊತೆಗೆ ಹಾಸನ ತಾಲೂಕಿನಲ್ಲಿ ದೊರೆತಿರುವ ಹೊಯ್ಸಳರ ಶಾಸನಗಳನ್ನು ಮತ್ತು ಇತರ ದ್ವಿತೀಯ ಆಕರಗಳನ್ನು ಬಳಸಿಕೊಂಡು ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು ಕಟ್ಟುವ ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯವು ಹೊಯ್ಸಳರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳು ಎಂಬುದಾಗಿದ್ದು, ಇದರಲ್ಲಿ ಹೊಯ್ಸಳ ದೇವಾಲಯಗಳ ತಳವಿನ್ಯಾಸ ಮತ್ತು ಏರು ವಿನ್ಯಾಸದಲ್ಲಿ ಕಂಡುಬರುವ ಜಗತಿ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಹಾರ, ಶಿಖರದ ಲಕ್ಷಣಗಳನ್ನು ಮತ್ತು ಕಂಬಗಳು, ಭುವನೇಶ್ವರಿಗಳು, ದ್ವಾರಗಳು, ದ್ವಾರಪಾಲಕರು ಮತ್ತು ಶಿಲ್ಪಗಳ ವೈಶಿಷ್ಟ್ಯ ಇನ್ನೂ ಮುಂತಾದ ಹೊಯ್ಸಳ ವಾಸ್ತುಶೈಲಿಯ ಪ್ರಮುಖ ಅಂಶಗಳನ್ನು ತಿಳಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಹಾಸನ ತಾಲೂಕಿನ ಹೊಯ್ಸಳರ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ವಿವರಣಾತ್ಮಕ ಅಂಶಗಳನ್ನು ಒಳಗೊಂಡಿದೆ. ಹಾಸನ ಜಿಲ್ಲೆಯು ಹೊಯ್ಸಳರ ಕಾಲದ ದೇವಾಲಯಗಳಿಂದ ವಿಶ್ವಮಾನ್ಯತೆಯನ್ನು ಗಳಿಸಿದ್ದು, ಇವರು ತಮ್ಮ ರಾಜಧಾನಿ ಹಾಗೂ ಶಕ್ತಿಕೇಂದ್ರಗಳ ಹೊರತಾಗಿಯೂ ಹಾಸನ ತಾಲೂಕು ಸಹ ಒಂದು. ಈ ತಾಲೂಕಿನಲ್ಲಿ ಇವರ ಕಾಲದಲ್ಲಿ ನಿರ್ಮಾಣವಾದ ಹಲವಾರು ದೇವಾಲಯಗಳು, ಬಸದಿಗಳಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಇವುಗಳನ್ನು ಶೈವ, ವೈಷ್ಣವ ಮತ್ತು ಜೈನ ಬಸದಿಗಳು ಎಂದು

ವಿಂಗಡಿಸಿಕೊಂಡು ಇವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಕಲೆ ಮತ್ತು ವಾಸ್ತುಶಿಲ್ಪದ ಅಂಶಗಳನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಐದನೇ ಅಧ್ಯಾಯದಲ್ಲಿ ಹಾಸನ ತಾಲೂಕಿನ ಹೊಯ್ಸಳರ ಕಾಲದ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ಚರ್ಚಿಸುವ ನಿಟ್ಟಿನಲ್ಲಿ ಕ್ರಮ ವಹಿಸಲಾಗಿದೆ. ಸ್ಥಳೀಯ ಇತಿಹಾಸವನ್ನು ತಿಳಿಯುವಲ್ಲಿ ಮತ್ತು ರೂಪಿಸುವಲ್ಲಿ ಸ್ಮಾರಕ ಶಿಲ್ಪಗಳಾದ ವೀರಗಲ್ಲುಗಳ ಪಾತ್ರ ಹಿರಿದು. ಪ್ರಸ್ತುತ ಅಧ್ಯಾಯದಲ್ಲಿ ಈ ವೀರಗಲ್ಲುಗಳ ಲಕ್ಷಣಗಳು, ವಿಧಗಳನ್ನು ಸಂಕ್ಷಿಪ್ತವಾಗಿ ಚರ್ಚಿಸುವುದರ ಜೊತೆಗೆ ಹಾಸನ ತಾಲೂಕಿನಲ್ಲಿ ದೊರೆತಿರುವ ಹೊಯ್ಸಳರ ಕಾಲದ ಶಾಸನೋಕ್ತ ವೀರಗಲ್ಲುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಆರನೆಯ ಅಧ್ಯಾಯವು ಶಿಲ್ಪಗಳು ಎಂಬುದಾಗಿದ್ದು, ಇದರಲ್ಲಿ ಶಿಲ್ಪಗಳ ಲಕ್ಷಣ ಮತ್ತು ವೈಶಿಷ್ಟ್ಯಗಳನ್ನು ವಿವರಿಸುವುದರ ಜೊತೆಗೆ ಹಾಸನ ತಾಲೂಕಿನ ಹೊಯ್ಸಳರ ದೇವಾಲಯಗಳಲ್ಲಿ ಕಂಡುಬಂದಿರುವ ಮೂರ್ತಿ ಶಿಲ್ಪಗಳು, ಭಿತ್ತಿ ಶಿಲ್ಪಗಳು ಹಾಗೂ ಬಿಡಿಶಿಲ್ಪಗಳಿಗೆ ಸಂಬಂಧಿಸಿದಂತೆ ಇವುಗಳು ಆರಾಧಿಸುತ್ತಿರುವ ಗ್ರಾಮಗಳು ಮತ್ತು ದೇವಾಲಯಗಳ ಬಗ್ಗೆ ತಿಳಿಸಲಾಗಿದೆ.

ಏಳನೆಯ ಅಧ್ಯಾಯವು ಉಪಸಂಹಾರವಾಗಿದ್ದು ಈ ಅಧ್ಯಾಯದಲ್ಲಿ ಹಾಸನ ತಾಲೂಕಿನ ಹೊಯ್ಸಳರ ಕಾಲದ ರಾಜಕೀಯ ಇತಿಹಾಸ, ದೇವಾಲಯಗಳ ಕಲೆ ಮತ್ತು ವಾಸ್ತು ಶಿಲ್ಪ, ಸ್ಮಾರಕ ಶಿಲ್ಪಗಳು ಮತ್ತು ಶಿಲ್ಪಗಳ ಅಧ್ಯಯನದಿಂದ ಕಂಡುಕೊಂಡಂತಹ ಪ್ರಮುಖ ಫಲಿತಗಳನ್ನು ನೀಡಲಾಗಿದೆ. ಅಲ್ಲದೇ ಪರಾಮರ್ಶನ ಗ್ರಂಥಗಳು, ಭೂಪಟಗಳು, ದೇವಾಲಯಗಳ ಪಟ್ಟಿ, ತಳನಕ್ಷೆಗಳು ಮತ್ತು ಛಾಯಾಚಿತ್ರಗಳು ನೀಡಲಾಗಿದೆ.

## ಅಡಿ ಟಿಪ್ಪಣಿಗಳು

1. ಹಾಸನ ಜಿಲ್ಲಾ ಗ್ಯಾಸೆಟಿಯರ್, 1971, ಪು.ಸಂ.5-6
2. http//www.hassan district, wikipedia.
3. ಹೊಯ್ಸಳ ಸಂಪದ, ಅಖಿಲ ಭಾರತ 65ನೇಯ ಕನ್ನಡ ಸಾಹಿತ್ಯ ಸಮ್ಮೇಳನದ ಸಾಕ್ಷೀ ಸಂಪುಟ, ಪು.ಸಂ.191
4. ಉದಯರವಿ, ಹಾಸನ ಜಿಲ್ಲಾ ವೈಶಿಷ್ಟ್ಯ, ಪು.ಸಂ.2
5. ಅದೇ, ಪು.ಸಂ.22
6. ಹಾಸನ, ಪೂರ್ವೋಕ್ತ, ಪು.ಸಂ.1
7. ಅದೇ, ಪು.ಸಂ.1
8. ಗೊರೂರು ಅನಂತರಾಜು, ಹಾಸನ ಜಿಲ್ಲೆಯ ದೇವಾಲಯ ದರ್ಶನ, ಪು.ಸಂ.2
9. ಉದಯರವಿ, ಪೂರ್ವೋಕ್ತ, ಪು.ಸಂ.21

## ಅಧ್ಯಾಯ–ಎರಡು

## ರಾಜಕೀಯ ಇತಿಹಾಸ

ಕರ್ನಾಟಕದಲ್ಲಿ ಕಂಡುಬರುವ ಜಿಲ್ಲೆಗಳಲ್ಲಿ ಹಾಸನ ಜಿಲ್ಲೆಯೂ ಒಂದು. ಈ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳ ದೃಷ್ಟಿಕೋನದಿಂದ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಈ ಜಿಲ್ಲೆಯ ರಾಜಕೀಯ ಇತಿಹಾಸ ಮೌರ್ಯರಿಂದ ಪ್ರಾರಂಭವಾಗಿ ಮೈಸೂರು ಒಡೆಯರ ಆಳ್ವಿಕೆಯ ಅಂತಿಮ ಘಟ್ಟದವರೆಗೂ ಹಲವಾರು ಹಂತಗಳನ್ನು ಹೊಂದಿದೆ. ಮೌರ್ಯ ಸಾಮ್ರಾಟ ಚಂದ್ರಗುಪ್ತಮೌರ್ಯನು ಕ್ರಿ.ಪೂ.3ನೇ ಶತಮಾನದಲ್ಲಿ ಉತ್ತರ ಭಾರತದಿಂದ ವಲಸೆ ಬಂದು ತನ್ನ ಗುರು ಭದ್ರಬಾಹುವಿನೊಂದಿಗೆ ದಕ್ಷಿಣ ಭಾರತದ ಶ್ರವಣಬೆಳಗೊಳದಲ್ಲಿ ನೆಲೆಸಿ, ಇಲ್ಲಿಯೇ ಮರಣ ಹೊಂದಿದನು.[1] ಎಂಬ ಐತಿಹಾಸಿಕ ಘಟನೆಯೊಂದಿಗೆ ಈ ಜಿಲ್ಲೆಯ ರಾಜಕೀಯ ಇತಿಹಾಸದ ಪ್ರಾರಂಭದ ಘಟ್ಟವನ್ನು ಗ್ರಹಿಸಬಹುದಾಗಿದೆ. ನಂತರ ಇಲ್ಲಿ ಕದಂಬರು, ಗಂಗರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ಚಂಗಾಳ್ವರು, ಕೊಂಗಾಳ್ವರು, ವಿಜಯನಗರದ ಅರಸರು, ವಿವಿಧ ಪಾಳೆಯಪಟ್ಟುಗಳನ್ನು ಹೊಂದಿದ್ದ ಐಗೂರಿನ ಪಾಳೆಯಗಾರರು, ನುಗ್ಗೇಹಳ್ಳಿಯ ಪ್ರಭುಗಳು, ಬೇಲೂರು ನಾಯಕರು, ಬಲಂ ನಾಯಕರು ಮತ್ತು ಮೈಸೂರಿನ ಒಡೆಯರು ಇಲ್ಲಿ ಆಳ್ವಿಕೆ ನಡೆಸಿ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದ್ದಾರೆಂಬುದು ಇಲ್ಲಿ ದೊರೆತಿರುವ ಸಮಕಾಲೀನ ಶಾಸನಗಳು, ಪುರಾತತ್ವ ಮತ್ತು ಸಾಹಿತ್ಯಿಕ ಆಕರಗಳಿಂದ ತಿಳಿದುಬರುತ್ತದೆ. ಈ ಜಿಲ್ಲೆಗೆ ಎಷ್ಟೇ ರಾಜಮನೆತನಗಳು ಮತ್ತು ಪಾಳೆಯಪಟ್ಟುಗಳು ತಮ್ಮ ಕೊಡುಗೆಗಳನ್ನು ನೀಡಿದ್ದರೂ ಸಹ ಈ ಎಲ್ಲಾ ರಾಜಮನೆತನಗಳಿಗಿಂತ ಹೊಯ್ಸಳ ಅರಸರು ಒಂದು ವಿಶಿಷ್ಟವಾದ ಕೊಡುಗೆಗಳನ್ನು ಸಲ್ಲಿಸಿದವರಲ್ಲಿ ಅಗ್ರಗಣ್ಯರು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಪ್ರಸ್ತುತ ಅಧ್ಯಾಯದಲ್ಲಿ ಹೊಯ್ಸಳರ ಸಂಕ್ಷಿಪ್ತ ರಾಜಕೀಯ ಇತಿಹಾಸ ಮತ್ತು ಕೊಡುಗೆಗಳನ್ನು ಹಾಸನ ತಾಲೂಕಿಗೆ ಸೀಮಿತವಾದಂತೆ ಇಲ್ಲಿ ಕಂಡುಬಂದಿರುವ ಇವರ ಕಾಲದ ಶಾಸನಗಳ ಆಧಾರದ ಮೇಲೆ ಚರ್ಚಿಸಲಾಗಿದೆ.

ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿ ಹೊಯ್ಸಳ ರಾಜಮನೆತನವು ಬಹಳ ಪ್ರಮುಖವಾದುದು. ಪ್ರಾರಂಭದಲ್ಲಿ ಕಲ್ಯಾಣಿ ಚಾಳುಕ್ಯರ ಸಾಮಂತರಾಗಿದ್ದ ಇವರು ಅನತಿ ಕಾಲದಲ್ಲಿಯೇ ಸ್ವತಂತ್ರವಾಗಿ ಆಳ್ವಿಕೆಯನ್ನು ನಡೆಸಲಾರಂಭಿಸಿದರು. ಕ್ರಿ.ಶ.1000ದಲ್ಲಿ ಪ್ರಾರಂಭವಾದ ಇವರ ರಾಜಕೀಯ ಆಡಳಿತ ಕ್ರಿ.ಶ.1346ರವರೆಗೆ ಅಂದರೆ ಸುಮಾರು 300 ವರ್ಷಗಳಿಗೂ ಹೆಚ್ಚುಕಾಲ ಅಸ್ತಿತ್ವದಲ್ಲಿತ್ತು. ಇವರು ಕರ್ನಾಟಕದಲ್ಲಿ ಮಾತ್ರ ಆಳ್ವಿಕೆ ನಡೆಸದೇ

ದಕ್ಷಿಣ ಭಾರತದ ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳ ರಾಜ್ಯಗಳಲ್ಲಿಯೂ ತಮ್ಮ ರಾಜ್ಯವನ್ನು ವಿಸ್ತರಿಸಿ ಕಾವೇರಿ ಮತ್ತು ತುಂಗಾಭದ್ರ ನದಿಯ ಬಹುಪಾಲು ಪ್ರದೇಶದ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸಿದರು.

**ಹೊಯ್ಸಳರ ಮೂಲ**

ಹೊಯ್ಸಳರ ಪ್ರಾರಂಭಿಕ ಇತಿಹಾಸದ ಬಗ್ಗೆ ಸ್ಪಷ್ಟವಾದ ದಾಖಲೆಗಳಿಲ್ಲ. ಇವರು ತಮ್ಮನ್ನು ಯಾದವ ವಂಶಜರೆಂದು ಕರೆದುಕೊಂಡಿದ್ದು ಇವರ ಮೂಲ ಪುರುಷ ಸಳ[2] ಇವರ ಕಾಲದ ಶಾಸನಗಳು ಸಹ ಸಳನೇ ಇವರ ಮೂಲ ಪುರುಷನೆಂದು ಉಲ್ಲೇಖಿಸಿವೆ. ಲೂಯಿರೈಸ್ ಹಾಗೂ ಇತರ ವಿದ್ವಾಂಸರು ಅಭಿಪ್ರಾಯಪಡುವಂತೆ ಪಶ್ಚಿಮ ಘಟ್ಟಗಳ ಮಲೆನಾಡಿನಲ್ಲಿ ಕಂಡುಬರುವ ಸೊಸೆವೂರು ಅಥವಾ ಶಶಕಪುರ ಇವರ ಮೂಲ ನೆಲೆ[3] ಇದನ್ನು ಇಂದು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ಅಂಗಡಿ ಎಂಬ ಸ್ಥಳವೆಂದು ಗುರುತಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಇದೊಂದು ವ್ಯಾಪಾರ ಕೇಂದ್ರವಾಗಿತ್ತೆಂದು ತಿಳಿಸುವ ಸೊಸೆವೂರನ್ನು ಉಲ್ಲೇಖಿಸುವ ಅನೇಕ ಶಾಸನಗಳಿವೆ.[4] ಕ್ರಿ.ಶ.1060ರ ಶಾಸನವೊಂದು ಸೊಸೆಯೂರಿನ ವ್ಯಾಪಾರಸ್ಥರು ಸೇರಿ 'ಲೋಕಜಿತನಿಗೆ' ಸ್ಮಾರಕವನ್ನು ನಿರ್ಮಿಸಿದರೆಂದು ಹೇಳಿದೆ.[5] ಆದುದರಿಂದ ಇದೊಂದು ಜೈನ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ.1040ರ ಒಂದು ಶಾಸನ ಜೈನ ಆಚಾರ್ಯನಾದ ವಜ್ರಪಾಣಿ ಭರತೇಶ್ವರನು ಇಲ್ಲಿಯೇ ಕಾಲವಾದನೆಂದು ಉಲ್ಲೇಖಿಸುತ್ತದೆ.[6] ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಅಂಗಡಿ ಗ್ರಾಮವು ಒಂದು ವ್ಯಾಪಾರಿ ಕೇಂದ್ರವಾಗಿದ್ದು ದೇಶದ ವಿವಿಧ ಭಾಗದ ವರ್ತಕರು ಇದರ ಮೂಲಕ ಹಾದು ಹೋಗುತ್ತಿದ್ದರೆಂದು ಹಾಗೂ ಇಲ್ಲಿನ ಮಲೆನಾಡಿನ ನೈಸರ್ಗಿಕ ಪರಿಸರದಿಂದ ಆಕರ್ಷಿತರಾಗಿ ಹಲವಾರು ಜೈನ ಸನ್ಯಾಸಿಗಳು ಇಲ್ಲಿ ನೆಲೆಸಿ ಧ್ಯಾನವನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ.[7] ಹೊಯ್ಸಳ ಅರಸರು ಸಾಮಾನ್ಯವಾಗಿ 'ಮಲೆಪರೋಳ್‌ಗಂಡ' ಎಂಬ ಬಿರುದನ್ನು ಧರಿಸಿದ್ದರಿಂದ ಹಾಗೂ ಸೊಸೆವೂರು ಅಥವಾ ಶಶಕಪುರ/ಶಶಪುರ ಎಂಬ ಹೆಸರು ಇವರ ಆರಂಭಕಾಲದ ಶಾಸನಗಳಲ್ಲಿ ಉಲ್ಲೇಖವಾಗಿರುವುದರಿಂದ ಮೂಡಿಗೆರೆ ತಾಲೂಕಿನ ಮಲೆನಾಡಿನ ಪರಿಸರದಲ್ಲಿ ಕಂಡುಬರುವ ಸೊಸೆವೂರು ಅಥವಾ ಶಶಕಪುರವೇ (ಇಂದಿನ ಅಂಗಡಿ ಗ್ರಾಮ) ಇವರ ಮೂಲನೆಲೆ ಎಂದು ಬಹುಪಾಲು ವಿದ್ವಾಂಸರು ಅರ್ಥೈಸಿದ್ದಾರೆ.

ಹೊಯ್ಸಳ ರಾಜ್ಯ ಸ್ಥಾಪನೆಗೆ ಕಾರಣವಾದ ರೋಚಕವಾದ ಘಟನೆಯೊಂದು ಅತ್ಯಂತ ಜನಪ್ರಿಯವಾಗಿ ಅಂದಿನಿಂದ ಇಂದಿನವರೆಗೂ ಜನಮನದಲ್ಲಿ ಸ್ಥಿರವಾಗಿ ಉಳಿದಿದೆ. ಇವರ

ಕಾಲದ ಶಾಸನಗಳು 'ಸಳ' ಈ ವಂಶದ ಮೂಲ ಪುರುಷನೆಂದು ಉಲ್ಲೇಖಿಸಿವೆಯಾದರೂ ಈತ ಐತಿಹಾಸಿಕ ವ್ಯಕ್ತಿಯೇ ಅಥವಾ ಕಾಲ್ಪನಿಕ ವ್ಯಕ್ತಿಯೇ ಎಂಬುದು ಜಿಜ್ಞಾಸೆಯಿಂದ ಕೂಡಿದೆ. ಸಳನು ಸೊಸೆಯೂರಿನಲ್ಲಿ ಸುದತ್ತಾಚಾರ್ಯರೆಂಬ ಜೈನ ಗುರುವಿನೊಂದಿಗೆ ವಾಸಂತಿಕಾ ದೇವಾಲಯದಲ್ಲಿ ಅರ್ಚನೆಯಲ್ಲಿ ತೊಡಗಿದ್ದಾಗ ಹುಲಿಯೊಂದು ದೇವಾಲಯದ ಆವರಣದೊಳಗೆ ಪ್ರವೇಶಿಸಿತು. ಆಗ ಸುದತ್ತಾಚಾರ್ಯರು ಸಳನಿಗೆ 'ಪೊಯ್‌ಸಳ' (ಹೊಡೆಸಳ) ಎಂದು ಆಜ್ಞೆ ಮಾಡಿದರು. ಗುರುವಿನ ಆಜ್ಞೆಯ ಮೇರೆಗೆ ಸಳನು ಹುಲಿಯನ್ನು ಕೊಂದು ಶೌರ್ಯ ಮೆರೆದನು. ಈ ಘಟನೆಯಿಂದಲೇ ಪ್ರಾಯಶಃ ಸಳನು (ಹೊಯ್-ಸಳ) ಹೊಯ್ಸಳನಾದನು. ಇದೇ ಹೆಸರು ಈ ರಾಜಮನೆತನಕ್ಕೆ ಅನ್ವಯವಾಯಿತು.[8] ಇದು ಹೊಯ್ಸಳ ವಂಶದ ಸ್ಥಾಪನೆಗೆ ಸಂಬಂಧಿಸಿದ ಒಂದು ಪುರಾಣ ಅಥವಾ ಕಥೆಯಾದರೆ ಕೆಲವು ವಿದ್ವಾಂಸರು ಪೊಯ್ಸಳ ಎಂಬ ಹೆಸರಿನ ವ್ಯುತ್ಪತ್ತಿಗೆ ಸಂಬಂಧಿಸಿದಂತೆ ಚಾರಿತ್ರಿಕ ಅಂಶಗಳನ್ನು ದಾಖಲು ಮಾಡುತ್ತಾರೆ. ಬೇಲೂರಿನ ಉತ್ತರಕ್ಕೆ ಕಂಡುಬರುವ 'ಮರಲೆ' ಎಂಬ ಗ್ರಾಮದಲ್ಲಿ ಅರಕೆಲ್ಲನ ಮೊಮ್ಮಗ, 'ಪೊಯ್ಸಳ ಮಾರುಗ' ಎಂಬ ವ್ಯಕ್ತಿ ಜೀವಿಸಿದ್ದು ಈತನು ಧೈರ್ಯಶಾಲಿ ಹೋರಾಟಗಾರನಾಗಿದ್ದು ಕ್ರಿ.ಶ.೯೪೦ರಲ್ಲಿ ನೊಳಂಬ ಅಣ್ಣಿಗನ ವಿರುದ್ಧ ಹೋರಾಡಿ ಮರಣ ಹೊಂದಿದನು[9] ಎಂಬ ಅಂಶವನ್ನು ತಿಳಿಸುತ್ತಾರೆ. ಈ ಸಂದರ್ಭದಲ್ಲಿ ರಾಷ್ಟ್ರಕೂಟ ದೊರೆ ೩ನೇ ಕೃಷ್ಣನು ದಖನ್ ಪ್ರಸ್ಥಭೂಮಿಯನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ.೯೪೦ರಲ್ಲೇ 'ಪೊಯ್ಸಳ ಮಾರುಗ' ಹಾಗೂ ಈತನ ತಾತ ಅರಕೆಲ್ಲನ ಹೆಸರು ಉಲ್ಲೇಖವಾಗಿರುವುದರಿಂದ ಕ್ರಿ.ಶ.೯೦೦ನೇ ಇಸವಿಗೂ ಮೊದಲೇ ಹೊಯ್ಸಳರ ಪೂರ್ವಜರು ಈ ಪ್ರಾಂತ್ಯದಲ್ಲಿ ಪರಿಚಿತರಾಗಿದ್ದರು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ.

**ನೃಪಕಾಮ ಅಥವಾ ಕಾಮ ಹೊಯ್ಸಳ (ಕ್ರಿ.ಶ.1022-1045)**

ಹೊಯ್ಸಳರ ಸ್ಪಷ್ಟವಾದ ರಾಜಕೀಯ ಇತಿಹಾಸ ಕ್ರಿ.ಶ.1000 ದಿಂದ ಪ್ರಾರಂಭವಾಯಿತು ಎಂದು ಹೇಳಬಹುದಾಗಿದೆ. ಈ ಕಾಲಘಟ್ಟದಲ್ಲಿ ಹೊಯ್ಸಳ ವಂಶದ ವಾರಸುದಾರನಾಗಿ ಕಂಡುಬರುವವನೇ ನೃಪಕಾಮ. ಕ್ರಿ.ಶ.1006ರಲ್ಲಿ ಚೋಳ ಸಾಮಂತ ಅಥವಾ ಅಧಿಕಾರಿ ಅಪ್ರಮೇಯನನ್ನು ಹೊಯ್ಸಳ ನಾಯಕ ಕಲಿಯೂರು ಕದನದಲ್ಲಿ ಎದುರಿಸಿದನೆಂದು ತಿಳಿದುಬರುತ್ತದೆ. ಆದರೆ ಸ್ಪಷ್ಟವಾಗಿ ಈ ಕದನದಲ್ಲಿ ಚೋಳರನ್ನು ಎದುರಿಸಿದ ನಾಯಕ ಯಾರೆಂಬುದು ಕಷ್ಟಸಾಧ್ಯವಾಗುತ್ತದೆ. ಆದರೆ ಕೆಲವು ವಿದ್ವಾಂಸರು ಅಪ್ರಮೇಯನನ್ನು ಎದುರಿಸಿದ ನಾಯಕ ನೃಪಕಾಮನೆಂದು ಹೆಸರಿಸುತ್ತಾರೆ.[10] ಕ್ರಿ.ಶ.1022 ರಿಂದ ಕ್ರಿ.ಶ.1027ರ ನಡುವೆ ಉಪಲಬ್ಧವಾಗಿರುವ ಶಾಸನಗಳ ಆಧಾರದ ಮೇಲೆ ನೃಪಕಾಮನೇ ಹೊಯ್ಸಳ ವಂಶದ

ಐತಿಹಾಸಿಕ ವ್ಯಕ್ತಿ ಎಂಬ ಅಭಿಪ್ರಾಯವನ್ನು ವಿಲಿಯಂ ಕೊಹಿಲೋರವರು ತಿಳಿಸುತ್ತಾರೆ.[11] ಕ್ರಿ.ಶ.1022ರಲ್ಲಿ ರಾಜೇಂದ್ರ ಚೋಳ ಪೃಥ್ವಿ ಮಹಾರಾಜನು ನೃಪಕಾಮನ ವಿರುದ್ಧ ಯುದ್ಧ ಸಾರಿದಾಗ ರಾಜೇಂದ್ರ ಚೋಳನ ದಂಡನಾಯಕ ಕನ್ನಮನು ನೃಪಕಾಮನ ಮೇಲೆ ಮುಗಿ ಬೀಳುತ್ತಾನೆ. ಆ ಸಂದರ್ಭದಲ್ಲಿ ನೃಪಕಾಮನ ದಂಡನಾಯಕ ಜೋಗಯ್ಯನು ತನ್ನ ನಾಯಕ ನೃಪಕಾಮನನ್ನು ರಕ್ಷಿಸಿ ವೀರ ಮರಣವನ್ನು ಹೊಂದಿದನು ಎಂಬ ವಿಚಾರವನ್ನು ರಾಜೇಂದ್ರಪುರದ ಶಾಸನವೊಂದು ತಿಳಿಸುತ್ತದೆ.[12] ಕ್ರಿ.ಶ.1026ರಲ್ಲಿ ರಾಜೇಂದ್ರ ಚೋಳ ಕೊಂಗಾಳ್ವನು ನೃಪಕಾಮನ ಮೇಲೆ ಯುದ್ಧಸಾರಿದಾಗ ನೃಪಕಾಮನು ನೆಲಮಂಗಲ ತಾಲೂಕಿನ ಮಣ್ಣೆ ಎಂಬಲ್ಲಿ ಸೋಲಲ್ಪಟ್ಟನು ಎಂಬ ವಿಚಾರವನ್ನು ಅರಕಲಗೂಡಿನ ಶಾಸನವೊಂದು ಉಲ್ಲೇಖಿಸುತ್ತದೆ.[13] ನೃಪಕಾಮನು ಚೋಳರು ಮತ್ತು ಇವರ ಸಾಮಂತರಾದ ಕೊಂಗಾಳ್ವರನ್ನು ಎದುರಿಸಿ ಪದೇ ಪದೇ ಸೋಲನ್ನು ಅನುಭವಿಸಿದರೂ ಸಹ ಬನವಾಸಿಯ ಕದಂಬರನ್ನು ರಾಜೇಂದ್ರಪುರದಲ್ಲಿ ಸೋಲಿಸಿದನೆಂಬುದು ತಿಳಿದುಬರುತ್ತದೆ. ಜೊತೆಗೆ ರಾಚಮಲ್ಲ ಪೆರ್ಮನಾಡಿ ಎಂಬ ಬಿರುದನ್ನು ಧರಿಸಿದ್ದ ಈತನು ಚೋಳರ ಸಾಮಾನ್ಯ ವೈರಿಗಳಾದ ಗಂಗರೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದನೆಂದು ತಿಳಿದುಬರುತ್ತದೆ. ನೃಪಕಾಮನ ಆಳ್ವಿಕೆಗೆ ಸಂಬಂಧಿಸಿದಂತೆ ಹಾಸನ ತಾಲೂಕಿನಲ್ಲಿ ಯಾವುದೇ ಶಾಸನಗಳು ಕಂಡುಬರುವುದಿಲ್ಲ.

**ವಿನಯಾದಿತ್ಯ (ಕ್ರಿ.ಶ.1045–1098)**

ನೃಪಕಾಮನ ನಂತರ ಇವನ ಮಗ ವಿನಯಾದಿತ್ಯನು ಅಧಿಕಾರವಹಿಸಿಕೊಂಡು ಸುಮಾರು 50 ವರ್ಷಗಳ ಕಾಲ ಸುದೀರ್ಘವಾಗಿ ರಾಜ್ಯವನ್ನಾಳಿದನು. ಇವನು ಸ್ವತಃ ಮಹಾಮಂಡಳೇಶ್ವರ ಎಂದು ಕರೆದುಕೊಂಡಿದ್ದು ತನ್ನ ರಾಜಕೀಯ ಕ್ಷೇತ್ರವನ್ನು ಸೊಸೆಯೂರಿನಿಂದ ಬೇಲೂರಿಗೆ ವರ್ಗಾಯಿಸಿದನು. ಹೊಯ್ಸಳ ರಾಜಕೀಯ ಇತಿಹಾಸದಲ್ಲಿ ಇವನ ಕಾಲವು ಅತ್ಯಂತ ಮಹತ್ವ ಘಟ್ಟವಾಗಿದೆ. ಈ ಸಂದರ್ಭದಲ್ಲಿ ತುಂಗಭದ್ರ ನದಿಯ ದಖನ್ ಪ್ರಸ್ಥಭೂಮಿಯಲ್ಲಿ ಕಲ್ಯಾಣಿ ಚಾಳುಕ್ಯರು ತಮ್ಮ ಪ್ರಭುತ್ವವನ್ನು ಸಾಧಿಸಿ ಗಂಗವಾಡಿ ಪ್ರಾಂತ್ಯದ ಮೇಲೆ ಹಿಡಿತ ಸಾಧಿಸಲು ಪ್ರಯತ್ನ ಪಡುತ್ತಿದ್ದರು. ಗಂಗವಾಡಿ ಪ್ರಾಂತ್ಯದಲ್ಲಿ ಚೋಳರು ಗಂಗರ ತಲಕಾಡನ್ನು ವಶಪಡಿಸಿಕೊಂಡು ಈ ಪ್ರದೇಶದ ಮೇಲೆ ತಮ್ಮ ಹಿಡಿತವನ್ನು ಸಾಧಿಸಿದ್ದರು. ಇವರೀರ್ವರ ಸಾಮ್ರಾಜ್ಯ ವಿಸ್ತರಣೆಯ ದಾಹದಿಂದಾಗಿ ಕೊಪ್ಪಂ ಎಂಬಲ್ಲಿ ಯುದ್ಧ ನಡೆದರೂ ಸಹ ಯಾವುದೇ ಫಲಿತಾಂಶ ಬರದೇ ಇಬ್ಬರೂ ಸಹ ವಿಜಯಿಗಳೆಂದು ಸ್ವತಃ ಘೋಷಿಸಿಕೊಂಡರೂ ಸಹ ತಲಕಾಡಿನ ಮೇಲೆ ಚೋಳರ ಹಿಡಿತ ಸಡಿಲವಾಗಲಿಲ್ಲ. ಕಲ್ಯಾಣಿ ಚಾಳುಕ್ಯರು ಗಂಗವಾಡಿ ಪ್ರಾಂತ್ಯದಲ್ಲಿ ಆಡಳಿತಾಧಿಕಾರಿಗಳನ್ನು ನೇಮಿಸುವುದನ್ನು ಮುಂದುವರೆಸಿದರು.[14] ಇಂತಹ

ಸಂದಿಗ್ಧ ಪರಿಸ್ಥಿತಿಯಲ್ಲಿ ವಿನಯಾದಿತ್ಯನು ಕಲ್ಯಾಣಿ ಚಾಳುಕ್ಯರ ನಡುವೆ ಉತ್ತಮ ಬಾಂಧವ್ಯ ಹೊಂದಿದ್ದು ಇವರ ಶತ್ರುಗಳಾದ ಚೋಳರೊಂದಿಗಿನ ಯುದ್ಧಗಳಲ್ಲಿ ಭಾಗವಹಿಸಿದನು. ನಂತರದಲ್ಲಿ ಈತನು ಚೆಂಗಾಳ್ವರು, ಕೊಂಗಾಳ್ವರು, ಹೊಂಬುಜದ ಶಾಂತರಸರು ಮತ್ತು ಬಯಲುನಾಡಿನ (ಮಲೆನಾಡಿನ) ಕದಂಬರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು. ವಿನಯಾದಿತ್ಯನು ಚಾಳುಕ್ಯ 1ನೇ ಸೋಮೇಶ್ವರನೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದು ಈತನ ಅರಸಿಯರಲ್ಲಿ ಒಬ್ಬಳಾದ ಹೊಯ್ಸಳ ದೇವಿಯು ವಿನಯಾದಿತ್ಯನ ಮಗಳೋ ಅಥವಾ ಸೋದರಿಯೋ ಆಗಿದ್ದರಬಹುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[15] ವಿನಯಾದಿತ್ಯನು ಕೇವಲ ಯುದ್ಧಗಳಲ್ಲಿ ತೊಡಗಿಕೊಳ್ಳದೇ ತನ್ನ ಆಳ್ವಿಕೆಯಲ್ಲಿ ಉತ್ತಮ ಆಡಳತವನ್ನು ನಡೆಸಿ ಸಾಕಷ್ಟು ಕೆರೆಗಳು, ಕಾಲುವೆಗಳು, ದೇವಾಲಯಗಳು ಮತ್ತು ಜಿನಾಲಯಗಳನ್ನು ನಿರ್ಮಿಸಿದನೆಂದು ಕ್ರಿ.ಶ.1131ರ ಶ್ರವಣಬೆಳಗೊಳದ ಶಾಸನವೊಂದು ತಿಳಸುತ್ತದೆ.[16] ಹಾಸನ ತಾಲೂಕಿನ ನಿಟ್ಟೂರು ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.1096ರ ಶಾಸನವೊಂದು[17] ಮಹಾಮಂಡಳೇಶ್ವರ ಹೊಯ್ಸಳ ದೇವನ ರಾಜ್ಯ ಎಂದು ಹೆಸರಿಸಿದ್ದು ಇದು ವಿನಯಾದಿತ್ಯನ ಆಳ್ವಿಕೆಯ ಕಾಲವಧಿಗೆ ಹೊಂದಿಕೆಯಾಗುತ್ತದೆ. ಈ ಶಾಸನದಲ್ಲಿ ಚಾಳುಕ್ಯ ವಿಕ್ರಮಶಕೆಯ ಉಲ್ಲೇಖ ಕಂಡುಬರುವುದರಿಂದ ವಿನಯಾದಿತ್ಯನು ಕಲ್ಯಾಣಿ ಚಾಳುಕ್ಯರ 6ನೇ ವಿಕ್ರಮಾದಿತ್ಯನ ಸಾಮಂತನಾಗಿದ್ದನೆಂಬುದು ಸೂಚಿತವಾಗುತ್ತದೆ. ಈ ಶಾಸನದ ಪಠ್ಯದಲ್ಲಿ ಹಿಂಚಗಾವುಂಡನ ಮಗ ಬೂವಗಾವುಂಡನು ದೇವಾಲಯವನ್ನು ಕಟ್ಟಿಸಿ ಕೆರೆ ಮತ್ತು ಕಾಲುವೆಯನ್ನು ತೋಡಿಸಿ 555 ಗದ್ಯಾಣವನ್ನು ದಾನ ನೀಡಿದ ವಿಷಯವು ಉಲ್ಲೇಖವಾಗಿದೆ.

**ಎರೆಯಂಗ (ಕ್ರಿ.ಶ.1098-1102)**

ವಿನಯಾದಿತ್ಯನ ಮಗನಾದ ಎರೆಯಂಗನು ಕ್ರಿ.ಶ.1098ರಲ್ಲಿ ಅಧಿಕಾರಕ್ಕೆ ಬಂದು ಕೇವಲ 4ವರ್ಷ ಆಳ್ವಿಕೆಯನ್ನು ನಡೆಸಿದನು. ಈತನು ಹೊಯ್ಸಳ ವಂಶದ ರಾಜನಾಗಿ ಪಟ್ಟಾಭಿಷಿಕ್ತನಾದುದ್ದಕ್ಕೆ ಹಾಗೂ ಈತನ ಆಳ್ವಿಕೆಯ ಕಾಲಾವಧಿಯ ಬಗ್ಗೆ ಕೆಲವು ವಿದ್ವಾಂಸರು ಅನುಮಾನಗಳನ್ನು ವ್ಯಕ್ತಪಡಿಸಿದ್ದಾರೆ.[18] ಎರೆಯಂಗನು ಕೆಲವೇ ಕೆಲವು ವರ್ಷಗಳು ಆಳ್ವಿಕೆ ಮಾಡಿದ್ದರೂ ಸಹ ತನ್ನ ತಂದೆಯ ಆಳ್ವಿಕೆಯ ಅವಧಿಯಲ್ಲಿಯೇ ಯುವರಾಜನಾಗಿ ಹಲವು ಯುದ್ಧಗಳಲ್ಲಿ ಭಾಗವಹಿಸಿದ್ದನು. ಎರೆಯಂಗನು ಚಾಳುಕ್ಯ 6ನೇ ವಿಕ್ರಮಾದಿತ್ಯನಿಗೆ ಬಹಳ ಆಪ್ತನಾಗಿದ್ದು ಈತನ ಹಲವಾರು ದಂಡಯಾತ್ರೆಗಳಲ್ಲಿ ಬಹಳ ಧೈರ್ಯದಿಂದ ಹೋರಾಡುತ್ತಿದ್ದನೆಂದು ತಿಳದುಬರುತ್ತದೆ. ಆರನೇ ವಿಕ್ರಮಾದಿತ್ಯನ ಮಲೆಪರು, ಚೋಳರು, ಮಾಳ್ವ, ಕಳಂಗ ಮತ್ತು ವೆಂಗಿಯ ಅರಸರ ಮೇಲೆ ಕೈಗೊಂಡ ದಂಡಯಾತ್ರೆಗಳಲ್ಲಿ

ಪಾಲ್ಗೊಂಡಿದ್ದ ಎರೆಯಂಗನು ಧಾರಾ, ಬಲಯಪಟ್ಟಣ ಮತ್ತು ಮಧ್ಯಪ್ರದೇಶದ ಬಸ್ತಾರ್ ಜಿಲ್ಲೆಯಲ್ಲಿನ ಚಕ್ರಕೂಟ ಮುಂತಾದ ಕೋಟೆಗಳನ್ನು ವಶಪಡಿಸಿಕೊಳ್ಳುವಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸಿದ್ದನು.[19] ಹೊಯ್ಸಳ ಅರಸರಲ್ಲಿ 'ವೀರಗಂಗ' ಎಂಬ ಬಿರುದನ್ನು ಧರಿಸಿದ್ದವರಲ್ಲಿ ಈತನು ಮೊದಲಿಗನಾಗಿದ್ದು ಚೋಳರ ಯುವರಾಣಿ ಚೋಳ ಮಹಾದೇವಿಯನ್ನು ಈತನು ವಿವಾಹವಾಗಿದ್ದನೆಂದು ತಿಳಿದುಬರುತ್ತದೆ.[20] ಈತನಿಗೆ 1ನೇ ಬಲ್ಲಾಳ, ಬಿಟ್ಟಿಗ (ವಿಷ್ಣುವರ್ಧನ) ಮತ್ತು ಉದಯಾದಿತ್ಯ ಎಂಬ ಮೂವರು ಮಕ್ಕಳಿದ್ದರು.

**ಒಂದನೇ ಬಲ್ಲಾಳ (ಕ್ರಿ.ಶ.1100–1108)**

ಎರೆಯಂಗನ ಆಳ್ವಿಕೆಯ ನಂತರ ಅಧಿಕಾರಕ್ಕೆ ಬಂದ ರಾಣಿ ಏಚಲಾದೇವಿಯ ಪುತ್ರ 1ನೇ ಬಲ್ಲಾಳನು ಕೇವಲ 8 ವರ್ಷಗಳು ಮಾತ್ರ ಅಧಿಕಾರ ನಡೆಸಿದನು. ಪ್ರಾರಂಭದಿಂದಲೂ ಕಲ್ಯಾಣಿ ಚಾಳುಕ್ಯರ ಸಾಮಂತರಾಗಿದ್ದುಕೊಂಡು ಬಂದಿದ್ದ ಹೊಯ್ಸಳರು 1ನೇ ಬಲ್ಲಾಳನ ಅವಧಿಯಲ್ಲಿ ಸ್ವತಂತ್ರರಾಗಲು ಹವಣಿಸುತ್ತಿದ್ದುದನ್ನು ಗಮನಿಸಿದ ಚಾಳುಕ್ಯ 6ನೇ ವಿಕ್ರಮಾದಿತ್ಯನು ತನ್ನ ಸಾಮಂತ ಮಿತ್ರ ಪರಮಾರ ವಂಶದ ರಾಜಕುಮಾರನಾದ ಜಗದ್ದೇವನನ್ನು ಸೈನ ಸಮೇತ 1ನೇ ಬಲ್ಲಾಳನ ಮೇಲೆ ಯುದ್ಧಕ್ಕೆ ಕಳುಹಿಸಿದನು.[21] ಆದರೆ ಈ ಯುದ್ಧದಲ್ಲಿ 1ನೇ ಬಲ್ಲಾಳನು ತನ್ನ ಸಹೋದರನಾದ ವಿಷ್ಣುವರ್ಧನ ಮತ್ತು ಉದಯಾದಿತ್ಯರ ಸಮರ್ಥ ನೆರವಿನಿಂದ ಜಗದ್ದೇವನನ್ನು ಸೋಲಿಸಿ ಹಿಮ್ಮೆಟ್ಟಿಸಿದನು ನಂತರ ಕ್ರಿ.ಶ.1104ರಲ್ಲಿ ಕೊಡಗು ಮತ್ತು ಮೈಸೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಆಳುತ್ತಿದ್ದ ಚೋಳರ ಸಾಮಂತರಾದ ಚಂಗಾಳ್ವರನ್ನು ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡುತ್ತಿದ್ದ ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿದನು. ಈತನಿಗೆ ತುಂಗಭದ್ರ ನದಿ ಪ್ರದೇಶದ ಬೆಳ್ವೊಲ ಪ್ರಾಂತ್ಯದ ಮೇಲೆ ಪ್ರಭುತ್ವವನ್ನು ಸಾಧಿಸಬೇಕೆಂಬ ಆಲೋಚನೆಯಿಂದ ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತನಾಗುತ್ತಿದ್ದ ಸಂದರ್ಭದಲ್ಲಿಯೇ 6ನೇ ವಿಕ್ರಮಾದಿತ್ಯನು ತನ್ನ ನೆಚ್ಚಿನ ಸೇನಾನಿ ಸಿಂದ ಕುಲದ ಅಚುಗಿಯನ್ನು 1ನೇ ಬಲ್ಲಾಳನ ರಾಜ್ಯದ ಮೇಲೆ ಯುದ್ಧಕ್ಕೆ ಕಳುಹಿಸಿದಾಗ 1ನೇ ಬಲ್ಲಾಳನು ಸೋಲನ್ನು ಅನುಭವಿಸಬೇಕಾಯಿತು. ಬಲ್ಲಾಳನು ತನ್ನ ದಂಡನಾಯಕ ಮರಿಯಾನೆಯ ಮೂವರು ಹೆಣ್ಣುಮಕ್ಕಳಾದ ಪದ್ಮಲದೇವಿ, ಚಾಮಲದೇವಿ ಮತ್ತು ಬೊಪ್ಪಾದೇವಿಯರನ್ನು ಒಂದೇ ಹಸೆಮಣೆಯಲ್ಲಿ ವಿವಾಹವಾಗಿದ್ದನು.[22] ಈ ವಿಷಯವನ್ನು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಶಾಸನವೊಂದು ಸಹ ಉಲ್ಲೇಖಿಸುತ್ತದೆ.[23] 1ನೇ ಬಲ್ಲಾಳನು ಹಾಸನ ತಾಲೂಕಿನ ವ್ಯಾಪ್ತಿಯಲ್ಲಿ ಆಳ್ವಿಕೆ ಮಾಡಿರುವುದಕ್ಕೆ ಸಂಬಂಧಿಸಿದಂತೆ ಎರಡು ಶಾಸನಗಳು ಕಂಡುಬರುತ್ತವೆ. ಹಾಸನ ತಾಲೂಕಿನ ಗುಡ್ಡದ ತೆರಣ್ಯ

ಗ್ರಾಮದಲ್ಲಿ ಕಂಡುಬಂದಿರುವ ಕ್ರಿ.ಶ.1104ರ ಶಾಸನದಲ್ಲಿ[24] ಮಹಾಮಂಡಳೇಶ್ವರ, ತ್ರಿಭುವನವಲ್ಲ, ಬಲಾಳುಹೊಯ್ಸಳದೇವನು ಗಂಗವಾಡಿ 96,000ವನ್ನು ಆಳ್ವಕೆ ಮಾಡುತ್ತಿರುವಾಗ ಸೀಗೆನಾಡು 300 ಪ್ರಾಂತ್ಯದಲ್ಲಿ ಚಂಗನಾಡ ಮಾವನೂರಿನ ಚೋಳಗಾವುಂಡನ ಮಗ ಅರಿಗಾವುಂಡನು ರಾಜಗಾವುಂಡನು ಸೋಮೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿ ದಾನ ನೀಡಿರುವ ಉಲ್ಲೇಖವಿದೆ. ಈ ಶಾಸನದಲ್ಲಿ ಚಾಳುಕ್ಯ ವಿಕ್ರಮ ಶಕೆಯ ಬಳಕೆ ಕಂಡುಬಂದಿರುವುದರಿಂದ ಈ ಕಾಲಮಾನದಲ್ಲಿ ಹೊಯ್ಸಳರು 6ನೇ ವಿಕ್ರಮಾದಿತ್ಯನ ಸಾರ್ವಭೌಮತ್ವನ್ನು ಒಪ್ಪಿಕೊಂಡಿದ್ದರೆಂದು ತಿಳಿದುಬರುತ್ತದೆ. ಇದೇ ದೇವಾಲಯದ ದಕ್ಷಿಣ ಗೋಡೆಯ ಮೇಲೆ ಮತ್ತೊಂದು ಶಾಸನವಿದ್ದು ಇದರಲ್ಲಿ ತ್ರಿಭುವನಮಲ್ಲ ಬಲ್ಲಾಳು ಪೊಯ್ಸಳ ದೇವನು ಕೊಂಗಾಳ್ವರ ಮೇಲೆ ದಾಳ ಮಾಡಿದ ಹಾಗೂ ಈ ದೇವಾಲಯಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[25] ಆದರೆ ಈ ಶಾಸನದ ಕಾಲಮಾನ ಕಂಡುಬರುವುದಿಲ್ಲ. ವಿಲಿಯಂ ಕೊಹಿಲೋರವರು ಬಲ್ಲಾಳನ ದಾಳಿಗೀಡಾದವನು ಚಂಗಾಳ್ವ ದೇವನಾಗಿದ್ದಿರಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[26] ಆದರೆ ಬಾ.ರಾ.ಗೋಪಾಲ್‌ರವರು ಈತನು ಇಮ್ಮಡಿ ರಾಜೇಂದ್ರ ಚೋಳ ಕೊಂಗಾಳ್ವನ ಮಗ 'ತ್ರಿಭುವನಮಲ್ಲ ಕೊಂಗಾಳ್ವ' ಎಂಬುದಾಗಿ ಹೇಳುತ್ತಾರೆ.[27] ಏನೇ ಇದ್ದರೂ 2ನೇ ಬಲ್ಲಾಳನು ತನ್ನ ಆಳ್ವಕೆಯ ಕಡಿಮೆ ಅವಧಿಯಲ್ಲಿಯೇ ಕಲ್ಯಾಣಿ ಚಾಳುಕ್ಯರ ಸಾರ್ವಭೌಮತ್ವದಿಂದ ಆಚೆ ಬಂದು ಒಂದು ಸ್ವತಂತ್ರ ಹೊಯ್ಸಳ ರಾಜಮನೆತನವನ್ನು ಕಟ್ಟುವಲ್ಲಿ ಮೊದಲ ಹೆಜ್ಜೆ ಇಟ್ಟನೆಂದು ನಂತರ ಈತನ ಅಭಿಲಾಷೆಯನ್ನು ಇವನ ಸಹೋದರ ಬಿಟ್ಟಿದೇವನು (ವಿಷ್ಣುವರ್ಧನ) ಪೂರೈಸಿದನೆಂದು ತಿಳಿದುಬರುತ್ತದೆ.

**ವಿಷ್ಣುವರ್ಧನ (ಕ್ರಿ.ಶ.1106-1142)**

ಹೊಯ್ಸಳ ರಾಜಮನೆತನದ ಇತಿಹಾಸದಲ್ಲಿ ವಿಷ್ಣುವರ್ಧನ ಆಳ್ವಕೆಯ ಅವಧಿಯು ಅಭೂತಪೂರ್ವವಾದುದು. ಈತನು ತನ್ನ ತಂದೆ ಎರೆಯಂಗ ಹಾಗೂ ಸಹೋದರ ಬಲ್ಲಾಳನ ಕಾಲಘಟ್ಟದಲ್ಲೇ ಹಲವಾರು ಯುದ್ಧಗಳಲ್ಲಿ ಭಾಗವಹಿಸಿ ಯುದ್ಧ ಕಲೆಯಲ್ಲಿ ಪರಿಣಿತಿಯನ್ನು ಪಡೆದಿದ್ದನು. ಈತನು ಪರಾಕ್ರಮಿಯು, ಸರ್ವಧರ್ಮ ಸಹಿಷ್ಣುವೂ ಆಗಿದ್ದು ತನ್ನ ಸಹೋದರ 1ನೇ ಬಲ್ಲಾಳನ ಆಳ್ವಕೆಯ ತರುವಾಯ ಹೊಯ್ಸಳ ರಾಜಮನೆತನದ ಚುಕ್ಕಾಣಿಯನ್ನು ಹಿಡಿಯುತ್ತಾನೆ. ಅಧಿಕಾರಕ್ಕೆ ಬಂದ ತರುವಾಯ ತನ್ನ ಸುತ್ತಮುತ್ತಲಿನ ಸಣ್ಣಪುಟ್ಟ ಸಾಮಂತರನ್ನು ಸೋಲಿಸಿ ತನ್ನ ಪೂರ್ವಿಕರ ಕಾಲದಿಂದಲೂ ಪ್ರಬಲ ಶತ್ರುಗಳಾಗಿದ್ದ ಚೋಳರ ಮೇಲೆ ಅಧಿಪತ್ಯ ಸ್ಥಾಪಿಸಲು ಮತ್ತು ಪ್ರಾರಂಭದಿಂದಲೂ ಕಲ್ಯಾಣಿ ಚಾಲುಕ್ಯರ ಸಾಮಂತತ್ವವನ್ನು ಒಪ್ಪಿಕೊಂಡು ಬಂದಿದ್ದ ಹೊಯ್ಸಳ ಮನೆತನವನ್ನು ಸ್ವತಂತ್ರ

ರಾಜಮನೆತನವನ್ನಾಗಿ ಮಾಡಲು ಯೋಜನೆಯನ್ನು ರೂಪಿಸುತ್ತಾನೆ. ಈ ಸಂದರ್ಭದಲ್ಲಿ ಗಂಗವಾಡಿ ಪ್ರಾಂತ್ಯವು ಚೋಳರ ಅಧಿಪತ್ಯದಲ್ಲಿದ್ದು ಚೋಳರ ಪ್ರತಿನಿಧಿಯಾಗಿ ಆದಿಯವನು ತಲಕಾಡಿನಲ್ಲಿ ಆಳ್ವಿಕೆ ನಡೆಸುತ್ತಿರುತ್ತಾನೆ. ಆಗ ವಿಷ್ಣುವರ್ಧನನು ತನ್ನ ನೆಚ್ಚಿನ ದಂಡನಾಯಕ ಗಂಗರಾಜ, ಪುಣಿಸಾಮಯ್ಯ, ಬಿಟ್ಟಿಯಣ್ಣ ಮತ್ತು ತನ್ನ ಸಹೋದರ ಉದಯಾದಿತ್ಯರ ನೇತೃತ್ವದಲ್ಲಿ ಕ್ರಿ.ಶ.1116ರಲ್ಲಿ ತಲಕಾಡಿನ ಮೇಲೆ ದಾಳ ಮಾಡಿಸುತ್ತಾನೆ.[28] ಈ ಯುದ್ಧದಲ್ಲಿ ಚೋಳರ ನೇತೃತ್ವ ವಹಿಸಿದ್ದ ಆದಿಮನ ಸೈನ್ಯವು ಸೋಲಲ್ಪಟ್ಟು ಯುದ್ಧ ಭೂಮಿಯಿಂದ ಫಲಾಯನವಾಯಿತು. ಚೋಳರ ಮತ್ತೊಬ್ಬ ದಂಡನಾಯಕ ದಾಮೋದರ ಕಂಚಿಗೆ ಫಲಾಯನವಾದರೆ ಇನ್ನೊಬ್ಬ ದಂಡನಾಯಕ ನರಸಿಂಹವರ್ಮನು ಯುದ್ಧಭೂಮಿಯಲ್ಲೇ ಮರಣ ಹೊಂದುತ್ತಾನೆ.[29] ಈ ವಿಜಯದ ನೆನಪಿಗಾಗಿ ವಿಷ್ಣುವರ್ಧನನು ಪಂಚನಾರಾಯಣ ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ತಲಕಾಡುಗೊಂಡ, ಭುಜಬಲಗಂಗ, ಸಾಹಸಗಂಗ ಹೊಯ್ಸಳ, ರಕ್ಕಸಗಂಗ, ವೀರಗಂಗ ಮತ್ತು ನನ್ನೀಯಗಂಗ ಎಂಬ ಬಿರುದುಗಳನ್ನು ಧರಿಸುತ್ತಾನೆ.[30] ಈ ಯುದ್ಧದ ತರುವಾಯ ಹೊಯ್ಸಳರ ಮತ್ತೊಂದು ಸೈನ್ಯದ ತುಕಡಿ ಪುಣಿಸಾಮಯ್ಯನ ನೇತೃತ್ವದಲ್ಲಿ ಚಂಗಾಳ್ವರು, ಕೊಂಗಾಳ್ವರು, ತುಳುವರನ್ನು ಸೋಲಿಸಿ ನೀಲಗಿರಿ ಮತ್ತು ಕೇರಳವನ್ನು ಪ್ರವೇಶಿಸಿ ವಿಷ್ಣುವರ್ಧನನ ಅಧಿಪತ್ಯವನ್ನು ಹೊರ ರಾಜ್ಯಗಳಿಗೂ ವಿಸ್ತರಿಸಲಾಯಿತು. ನಂತರ ಇದೇ ಕಾಲಘಟ್ಟದಲ್ಲಿ ವಿಷ್ಣುವರ್ಧನನು ಕೋಲಾರ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದ ಚೋಳರನ್ನು ಸೋಲಿಸಿ ಕಂಚಿಯವರೆಗೂ ತನ್ನ ರಾಜ್ಯವನ್ನು ವಿಸ್ತರಿಸಿದನು. ತಲಕಾಡು ವಿಜಯ ಮತ್ತು ನಂತರ ನಡೆದ ಕೆಲವು ಕದನಗಳಿಂದ ಇಡೀ ಗಂಗವಾಡಿ ಪ್ರಾಂತ್ಯವು ವಿಷ್ಣುವರ್ಧನನ ಅಧೀನಕ್ಕೆ ಒಳಪಟ್ಟಿತು. ದಕ್ಷಿಣದ ಈ ವಿಜಯದ ನಂತರ ವಿಷ್ಣುವರ್ಧನನ ದೃಷ್ಟಿಯು ಉತ್ತರದ ಕಡೆ ಹರಿಯಿತು. ಕಲ್ಯಾಣಿ ಚಾಳುಕ್ಯರ ಸಾಮಂತರಾಗಿ ನೊಳಂಬವಾಡಿ ಪ್ರಾಂತ್ಯದ ಮೇಲೆ ಹಿಡಿತವನ್ನು ಹೊಂದಿದ್ದ ಉಚ್ಚಂಗಿಯ ಪಾಂಡ್ಯರನ್ನು ದುಮ್ಮೆ ಕದನದಲ್ಲಿ ಸೋಲಿಸಿ ನೊಳಂಬವಾಡಿಗೊಂಡ ಎಂಬ ಬಿರುದನ್ನು ಧರಿಸಿದನು.[31] ನಂತರ ಕ್ರಿ.ಶ.1118ರಲ್ಲಿ ಕನ್ನೇಗಾಲ ಎಂಬಲ್ಲಿ ಗಂಗರಾಜನ ನೇತೃತ್ವದ ಸೈನ್ಯವು ಕಲ್ಯಾಣಿ ಚಾಳುಕ್ಯರ ಸೈನ್ಯವನ್ನು ಸೋಲಿಸುತ್ತದೆ.[32] ನಂತರ ವಿಷ್ಣುವರ್ಧನನು ಗೋವಾದ ಕದಂಬರು ಮತ್ತು ಕ್ರಿ.ಶ.1125ರಲ್ಲಿ ಹಾನಗಲ್ಲಿನ ಕದಂಬರನ್ನು ಸೋಲಿಸಿ ಅವರ ರಾಜ್ಯಗಳನ್ನು ವಶಪಡಿಸಿಕೊಳ್ಳುತ್ತಾನೆ. ಕ್ರಿ.ಶ.1123ರಲ್ಲಿ 6ನೇ ವಿಕ್ರಮಾದಿತ್ಯನ ಮರಣದ ತರುವಾಯ ವಿಷ್ಣುವರ್ಧನನ ರಾಜ್ಯ ವಿಸ್ತರಣೆಗೆ ಇನ್ನೂ ಹೆಚ್ಚಿನ ಅವಕಾಶಗಳು ಲಭ್ಯವಾದವು. ಈ ಸಂದರ್ಭದಲ್ಲಿ ಬಂಕಾಪುರವನ್ನು ತನ್ನ ಮತ್ತೊಂದು ಪ್ರಮುಖ ಕಾರ್ಯಕ್ಷೇತ್ರವನ್ನಾಗಿ

ಮಾಡಿಕೊಂಡು ಇಲ್ಲಿಯೇ ಹೆಚ್ಚು ನೆಲೆಸಲು ಪ್ರಾರಂಭಿಸಿದನು.[33] ಈ ಸಂದರ್ಭದಲ್ಲಿ ಮಲಪ್ರಭ ಮತ್ತು ತುಂಗಭದ್ರ ನದಿಯ ಬಹುಪಾಲು ಪ್ರದೇಶವು ವಿಷ್ಣುವರ್ಧನನ ಅಧೀನದಲ್ಲಿತ್ತು. ಮಲೆನಾಡಿನ ಒಂದು ಪುಟ್ಟ ಸಾಮಂತ ಮನೆತನವಾಗಿದ್ದ ಹೊಯ್ಸಳ ಮನೆತನವನ್ನು ಒಂದು ವಿಶಾಲ ರಾಜಮನೆತನವನ್ನಾಗಿ ರೂಪಿಸಿದ ವಿಷ್ಣುವರ್ಧನನು ಕ್ರಿ.ಶ.1142ರಲ್ಲಿ ಬಂಕಾಪುರದಲ್ಲಿಯೇ ಮರಣ ಹೊಂದಿದನು.[34]

ಹಾಸನ ತಾಲೂಕಿನಲ್ಲಿ ವಿಷ್ಣುವರ್ಧನನು ಆಳ್ವಿಕೆ ಮಾಡಿರುವುದಕ್ಕೆ ಸಂಬಂಧಿಸಿದಂತೆ ಈತನ ಹೆಸರು ಬಿರುದಾವಳಿಗಳನ್ನು ಉಲ್ಲೇಖಿಸಿದ ಹಾಗೂ ಈತನ ಆಳ್ವಿಕೆಯ ಕಾಲಾವಧಿಗೆ ಹೊಂದಿಕೊಳ್ಳುವ 19 ಶಾಸನಗಳು ಕಂಡುಬರುತ್ತವೆ. ಹಾಸನ ತಾಲೂಕಿನ ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯದ ಪ್ರಾಕಾರದ ನೈರುತ್ಯ ದಿಕ್ಕಿನಲ್ಲಿ ಕಂಡುಬರುವ ಕ್ರಿ.ಶ.1113ರ ಶಾಸನವೊಂದು[35] ವಿಷ್ಣುವರ್ಧನನ ಬಿರುದುಗಳನ್ನು ಉಲ್ಲೇಖಿಸುವುದರ ಜೊತೆಗೆ ರುಹಿತ ಕುಲಕ್ಕೆ ಸೇರಿದ ವಡ್ಡವ್ಯವಹಾರಿ ಕುಲ್ಲಣರಾವುತ ಮತ್ತು ಈತನ ಪತ್ನಿ ಸಹಜಾದೇವಿ ಇವರು ಅಭಿನವ ಕೊಲ್ಲಾಪುರ (ದೊಡ್ಡಗದ್ದವಳ್ಳಿ) ಎಂಬ ಊರನ್ನು ನಿರ್ಮಿಸಿ ಶ್ರೀಮಹಾಲಕ್ಷ್ಮೀದೇವಿ ದೇವಾಲಯವನ್ನು ನಿರ್ಮಿಸಿದುದರ ಬಗ್ಗೆ ತಿಳಿಸುತ್ತದೆ. ಈ ಶಾಸನದ ಮತ್ತೊಂದು ವಿಶೇಷವೆಂದರೆ ಈ ದೇವಾಲಯವನ್ನು ನಿರ್ಮಿಸಿದ ಮಲ್ಲೋಜ ಮಾಣಿಯೋಜರಿಗೆ ದಾನವನ್ನು ನೀಡಿದ್ದರ ಬಗ್ಗೆ ಹಾಗೂ ವಾಸ್ತುವಿನ ಪ್ರಕಾರಗಳಾದ ವಿಮಾನ, ಸರ್ವತೋಭದ್ರ, ವೃಷಭ, ನಳನೀಕೆ, ಉತ್ತುಂಗ, ವೈರಾಜ, ಗರುಡ, ವರ್ದ್ಧಮಾನ, ಶಂಖ, ವೃತ್ತ, ಪುಷ್ಪಕ ಹಾಗೂ ಗೃಹರಾಜ ಇವುಗಳನ್ನು ಉಲ್ಲೇಖಿಸಲಾಗಿದೆ. ಹೊಯ್ಸಳರ ಅದರಲ್ಲೂ ವಿಷ್ಣುವರ್ಧನನ ಆಳ್ವಿಕೆಗೆ ಸಂಬಂಧಿಸಿದಂತೆ ಈ ಶಾಸನವು ಬಹಳ ಪ್ರಾಮುಖ್ಯತೆ ಪಡೆದುಕೊಂಡಿದೆ.

ಹಾಸನ ನಗರದಲ್ಲಿ ಕಂಡು ಬಂದಿರುವ ಕ್ರಿ.ಶ.1117ರ ವೀರಗಲ್ಲು ಶಾಸನವೊಂದು[36] ಬುವಗಾವುಂಡನ ಮಗ ಬಮ್ಮಗೊಂಡನು ಅರಸೀಕೆರೆಯಲ್ಲಿ ನಡೆದ ತುರುಗೋಳ್ ಕದನದಲ್ಲಿ ವೀರ ಮರಣವನ್ನು ಅಪ್ಪಿದರ ಬಗ್ಗೆ ತಿಳಿಸುತ್ತದೆ. ಈ ಶಾಸನದಲ್ಲಿ ಚಾಳುಕ್ಯ ವಿಕ್ರಮ ಶಕೆಯ ಉಲ್ಲೇಖವನ್ನು ಗುರುತಿಸಬಹುದಾಗಿದೆ. ಹಾಸನ ತಾಲೂಕಿನ ಕಬ್ಬಿನಹಳ್ಳಿ ಗ್ರಾಮದಲ್ಲಿ ಕಂಡುಬರುವ ವೀರಗಲ್ಲು ಶಾಸನವೊಂದು[37] ವಿಕ್ರಮಾದಿತ್ಯನ ಪರವಾಗಿ ಹೋರಾಡಿ ಮಸಣಯ ಎಂಬಾತನು ಮರಣ ಹೊಂದಿದುರ ಬಗ್ಗೆ ತಿಳಿಸುತ್ತದೆ. ಈ ಶಾಸನದಲ್ಲಿ ಮೊದಲನೇ ಸಾಲಿನಲ್ಲಿ ಮನುಮಹಾಮಂಡಲೇಶ್ವರ ತ್ರಿಭುವನ ಮಲ್ಲವೀರ ಎಂದು ಹೆಸರಿಸಿದ್ದು ಮುಂದಿನ ಸಾಲಿನ ಪಠ್ಯನಷ್ಟವಾಗಿದೆ. ನಾಲ್ಕನೇ ಸಾಲಿನಲ್ಲಿ ವಿಕ್ರಮಾದಿತ್ಯನ ಹೆಸರು ಉಲ್ಲೇಖವಾಗುವುದರಿಂದ ವಿಷ್ಣುವರ್ಧನನು ಹಲವು ಸಲ ಹೋರಾಡಿ ಎದುರಿಸಿದ ಚಾಳುಕ್ಯ ದೊರೆ 6ನೇ ವಿಕ್ರಮಾದಿತ್ಯನೇ

ಈ ವಿಕ್ರಮಾದಿತ್ಯನೆಂದು ಗುರುತಿಸಲಾಗಿದೆ.[38] ಹಾಸನ ತಾಲೂಕಿನ ಶಾಂತಿಗ್ರಾಮದಲ್ಲಿ ಕಂಡುಬಂದಿರುವ ಕ್ರಿ.ಶ.1122ರ ಶಾಸನವೊಂದು[39] ವಿಷ್ಣುವರ್ಧನನ ಪಟ್ಟದರಸಿಯಾಗಿದ್ದ ಶಾಂತಲಾದೇವಿಯು ಅರಸನಿಂದ ಹಾರುವನಹಳ್ಳಿ, ಗೊಡೆಯನಹಳ್ಳಿ, ಗೌರಿಯಹಳ್ಳಿ, ಸಿರಿಯ ಬಡಗಿ ಕೊನಹಳ್ಳಿ, ಚಿಕ್ಕಹಂಡರಂಗಿ, ಕೋರವಂಗಲ, ಕರಡಿ ಈ ಗ್ರಾಮಗಳನ್ನು ಪಡೆದು 220 ಬ್ರಾಹ್ಮಣರಿಗೆ ದಾನ ನೀಡಿದ ಉಲ್ಲೇಖವನ್ನು ನೀಡುತ್ತದೆ ಹಾಗೂ ಈ ದೇವಾಲಯದ ನಿರ್ಮಾತೃ ಹಾಗೂ ಶಾಂತಲಾದೇವಿಯ ತಂದೆ ಮಾರಸಿಂಗಯ್ಯನು ಧರ್ಮೇಶ್ವರ ದೇವಾಲಯದ ಪೂಜೆ, ನೈವೇದ್ಯ ಇತ್ಯಾದಿ ಸೇವೆಗಳಿಗೆ ಕೆಲವು ಭೂಮಿಗಳನ್ನು ತಳವೃತ್ತಿಯಾಗಿ ದಾನ ನೀಡಿದ ಉಲ್ಲೇಖ ಕಂಡುಬರುತ್ತದೆ. ಈ ದೇವಾಲಯದ ಸ್ಥಾನಪತಿಯಾಗಿದ್ದ ಶಿವಶಕ್ತಿ ಪಂಡಿತನಿಗೆ ಕಿರಿಯ ಹಂಡರಂಗಿ ಮತ್ತು ಕರಡಿ ಗ್ರಾಮದ ಅರ್ಧರ್ಧ ಭಾಗವನ್ನು ಅರಸನು ದಾನ ನೀಡಿದನೆಂದು ದಾನ ನೀಡುವ ಮೊದಲ ಸಮಸ್ತರ ಸಮ್ಮತಿಯನ್ನು ಪಡೆದಿದ್ದನೆಂದು ಈ ಶಾಸನದ ಪಠ್ಯದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಶಾಂತಲಾದೇವಿಯನ್ನು ಲಕ್ಷ್ಮಿದೇವತೆ, ಖಳ್ಗದೇವತೆ, ಭೂಮಿದೇವತೆ , ಪುಣ್ಯದೇವತೆ, ವಾಗ್ದೇವತೆ, ಮಂತ್ರದೇವತೆ, ಶಾಂತಿದೇವತೆ, ಕಲ್ಪವೃಕ್ಷ ಈ ರೀತಿಯ ವಿಶೇಷಣಗಳನ್ನು ಬಳಸುವ ಮೂಲಕ ವರ್ಣಿಸಲಾಗಿದೆ. ಕೆಲವತ್ತಿ ಗ್ರಾಮದಲ್ಲಿ ದೊರೆತಿರುವ ಶಾಸನವೊಂದು ವಿಷ್ಣುವರ್ಧನನ ಸಹೋದರ ಉದಯಾದಿತ್ಯನು ಇದೇ ಗ್ರಾಮದಲ್ಲಿ ಮರಣ ಹೊಂದಿದ ವಿಷಯವನ್ನು ಉಲ್ಲೇಖಿಸುತ್ತದೆ.[40] ಕಾವೇರಿ ತೀರದಲ್ಲಿ ಬೀಡುಬಿಟ್ಟಿದ್ದ ಅರಸನು ನಿರ್ಗುಂದ ನಾಡಿಗೆ ಸೇರಿದ ಕೆಲ್ಲವತ್ತಿ ಗ್ರಾಮವನ್ನು ಅಗ್ರಹಾರವನ್ನಾಗಿ ಮಾರ್ಪಡಿಸಿ 18 ವೃತ್ತಿಗಳಾಗಿ ವಿಂಗಡಿಸಿ ಉದಯಾದಿತ್ಯನನ್ನು ಆಶ್ರಯಸಿದ್ದ ಬ್ರಾಹ್ಮಣರಿಗೆ ಪರೋಕ್ಷ ವಿನಯದ ರೂಪದಲ್ಲಿ ದಾನವಿತ್ತ ವಿಚಾರ ಶಾಸನ ಪಠ್ಯದಿಂದ ಲಭ್ಯವಾಗುತ್ತದೆ. ದಾನವಿತ್ತ 18 ವೃತ್ತಿಗಳಲ್ಲಿ 2 ವೃತ್ತಿಗಳು ಅರಸನು ನಿರ್ಮಿಸಿದ ಜನಾರ್ಧನ ದೇವಾಲಯಕ್ಕೆ ಸಲ್ಲುತ್ತದೆ. ದೊಡ್ಡಗದ್ದವಳ್ಳಿಯ ಪ್ರಾಕಾರದಲ್ಲಿ ಕಂಡುಬಂದಿರುವ ಕ್ರಿ.ಶ.1126-27ನೇ ಕಾಲಮಾನಕ್ಕೆ ಹೊಂದಿಕೆಯಾಗುವ ವೀರಗಲ್ಲು ಶಾಸನವೊಂದು ಬೊಪ್ಪದೇವನ ಕುದುರೆ ಕಾಳಗದಲ್ಲಿ ಸವಾರನು ಮರಣ ಹೊಂದಿದ ವಿಷಯ ತಿಳಿದುಬರುತ್ತದೆ. ವಿಶೇಷವಾಗಿ ಈ ಶಾಸನದಲ್ಲಿ ವಿಷ್ಣುವರ್ಧನನ ಹೆಸರಿನ ಜೊತೆಗೆ ಚಿಕ್ಕಬಿಟ್ಟಿದೇವ ಎಂಬ ಹೆಸರು ಉಲ್ಲೇಖವಾಗುತ್ತದೆ. ಈ ಚಿಕ್ಕಬಿಟ್ಟಿದೇವ ಅಥವಾ ಬಿಟ್ಟಯಣ್ಣನು ವಿಷ್ಣುವರ್ಧನನ ದಂಡನಾಯಕ ಮರಿಯಾನೆಯ ಮಗನಾಗಿದ್ದು ಅರಸನು ಚಿಕ್ಕಬಿಟ್ಟಿ ದೇವನನ್ನು ಸ್ವಂತ ಮಗನಂತೆ ಬಹಳ ಪ್ರೀತಿಯಿಂದ ಕಾಣುತ್ತಿದ್ದನು. ಈತನ ಉಪನಯನ ಕಾರ್ಯಕ್ರಮವನ್ನು ವಿಷ್ಣುವರ್ಧನನ ಮತ್ತು ಶಾಂತಲಾದೇವಿಯರು ಬಹಳ ಸಡಗರದಿಂದ ನೆರವೇರಿಸಿದ್ದರೆಂಬುದು ಸಹ ತಿಳಿದುಬರುತ್ತದೆ.[41] ಪೂಮಗಾಮೆಯಲ್ಲಿ ಕಂಡುಬಂದಿರುವ ಕ್ರಿ.ಶ.1139ರ ಶಾಸನವೊಂದು ಶಾಹಣಿ ಬಸವಯ್ಯನು

ಪೂರ್ವಗಾವೆಯ ಕಾಳಿದೇವ ದೇವಾಲಯಕ್ಕೆ ಭೂಮಿಯನ್ನು ದಾನವಿತ್ತ ವಿಚಾರವನ್ನು ಹಾಗೂ ದಾನ ಪಡೆದ ವ್ಯಕ್ತಿಯ ಹೆಸರು ಕ್ರಿಯಾಶಕ್ತಿ ಪಂಡಿತ ಎಂಬುದನ್ನು ತಿಳಿಸುತ್ತದೆ.[42] ಈ ಶಾಸನದಲ್ಲಿ ವಿಷ್ಣುವರ್ಧನನ ಬಿರುದಾವಳಿಗಳನ್ನು ಹೆಸರಿಸಿದ್ದರೂ ಸಹ ಪ್ರಾರಂಭದಲ್ಲಿ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ರಾಜಪರಮೇಶ್ವರಂ ಪರಮಭಟ್ಟಾರಕಂ, ಸತ್ಯಾಶ್ರಯಕುಲತಿಳಕಂ ಚಾಳೂಕ್ಯಾಭರಣಂ ಶ್ರೀಮೆತ್ತ್ರಿಭುವನಮಲ್ಲದೇವರು ಆಳ್ವಿಕೆ ಮಾಡುತ್ತಿರುವಾಗ ಎಂದು ಸಂಬೋಧಿಸಿರುವುದರಿಂದ ಇದು ಚಾಳುಕ್ಯ 3ನೇ ಸೋಮೇಶ್ವರನ ಕಾಲಾವಧಿಯನ್ನು ಸೂಚಿಸುತ್ತದೆ. ಬಹುಶಃ ವಿಷ್ಣುವರ್ಧನನ ಆಳ್ವಿಕೆಯ ಕೊನೆಯ ಘಟ್ಟದಲ್ಲೂ ಸಹ ಕಲ್ಯಾಣಿ ಚಾಲುಕ್ಯರು ಈ ಪ್ರಾಂತ್ಯದ ಮೇಲೆ ಹಿಡಿತವನ್ನು ಹೊಂದಿದ್ದರಬಹುದೆಂದು ಹಾಸನ ತಾಲೂಕಿನ ಯೆಲೆಗುಂದ ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1135ರ ಶಾಸನದಲ್ಲಿ[43] ವಿಷ್ಣುವರ್ಧನನ ಅರಸಿ ಚಿಕ್ಕಶಾಂತಲೆ ಮತ್ತು ಈಕೆಯ ಮಗಳೂ ಮರಣ ಹೊಂದಿದ್ದರಿಂದ ಚಿಕ್ಕಶಾಂತಲೆಯ ತಾಯಿ ಹೆಗ್ಗಡತಿ ಜಕ್ಕಿಯಬ್ಬೆಯು ನಿರ್ಗುಂದ ನಾಡಿನ ಯೆಲೆಗುಂದದಲ್ಲಿ ಶಾಂತಲೇಶ್ವರ ಮತ್ತು ಬೊಪ್ಪೇಶ್ವರ ದೇವಾಲಯಗಳನ್ನು ನಿರ್ಮಿಸಿ ಪರೋಕ್ಷ ವಿನಯದ ರೂಪದಲ್ಲಿ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಈ ಚಿಕ್ಕಶಾಂತಲೆಯ ಅನುಪಮ ಸೌಂದರ್ಯದಿಂದ ವಿಷ್ಣುವರ್ಧನನು ಈಕೆಗೆ ಆಕರ್ಷಿನಾಗಿದ್ದನೆಂಬುದು ತಿಳಿದು ಬರುತ್ತದೆ.[44] ಈ ಶಾಸನದಲ್ಲಿ ವೇದಶಾಲೆಗೆ ದಾನ ನೀಡಿರುವ ಉಲ್ಲೇಖ ಕಂಡು ಬಂದಿರುವುದು ಮತ್ತೊಂದು ವಿಶೇಷತೆಯಾಗಿದೆ. ಇದೇ ಗ್ರಾಮದ ರಾಮೇದೇವರ ಹಳ್ಳದ ರಾಮೇಶ್ವರ ದೇವಾಲಯದ ಬಳಿ ಕಂಡು ಬಂದಿರುವ ಶಾಸನವೊಂದು[45] ವಿಷ್ಣುವರ್ಧನನ ಅರಸಿ ಚಿಕ್ಕಶಾಂತಲೆಯು ಮರಣ ಹೊಂದಲಾಗಿ ಚಂಡಿಮುಂಡಿ ತೀರ್ಥದ ಮಹಾದೇವರಿಗೆ 3 ವ್ರಿತ್ತಿಗಳನ್ನು ದಾನ ನೀಡಿದ ವಿಚಾರವನ್ನು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಪ್ರಾರಂಭದ ಸಾಲುಗಳಲ್ಲಿ ವಿಷ್ಣುವರ್ಧನನನ್ನು ವಿವಿಧ ಬಿರುದುಗಳಿಂದ ವರ್ಣಿಸಲಾಗಿದೆ. ಕುದುರೆಗುಂಡಿ ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1140ರ ವೀರಗಲ್ಲು ಶಾಸನವೊಂದು[46] ವಿಷ್ಣುವರ್ಧನನು ಹಾನಗಲ್ಲಿನ ಕೋಟೆಯನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಚಟ್ಟಯಬಾಳುಗಿ ಎಂಬಾತನು ವೀರ ಮರಣವನ್ನಪ್ಪಿದರ ಬಗ್ಗೆ ಉಲ್ಲೇಖಿಸುತ್ತದೆ. ವಿಷ್ಣುವರ್ಧನನ ಆಳ್ವಿಕೆಯನ್ನು ಉಲ್ಲೇಖಿಸುವ ಮುಗಳೂರಿನ ಶಾಸನವೊಂದು[47] ಮಾರಿಸೆಟ್ಟಿಯೆಂಬಾತನು ಜಿನಾಗಾರವೊಂದನ್ನು ಕಟ್ಟಿಸಿದ ವಿಷಯವನ್ನು ತಿಳಿಸುತ್ತದೆ. ಭೀಮಯ್ಯ ಮತ್ತು ದೇವಲಬ್ಬೆಯರ ಎರಡನೆಯ ಮಗನಾದ ಈ ಮಾಡಿಸೆಟ್ಟಿಗೆ ಮಸಣಸೆಟ್ಟಿ ಮತ್ತು ಗೋವಿಂದ ಸೆಟ್ಟಿಯರು ಸಹೋದರರು ಎಂಬುದು ತಿಳಿದು ಬರುತ್ತದೆ. ಈ ಶಾಸನದಲ್ಲಿ ಜೈನ ಯತಿಗಳ ಗುರು ಪರಂಪರೆಯನ್ನು ಹೇಳಲಾಗಿದ್ದು, ಗೋವಿಂದ ಜಿನಾಲಯಕ್ಕೆ ವೀರನಾರಸಿಂಹದೇವನು ದಾನ ನೀಡಿದ ಉಲ್ಲೇಖವೂ ಕಂಡು

ಬರುತ್ತದೆ. ಮಾರಿಸೆಟ್ಟಿಯು ಈ ಜಿನಾಲಯವನ್ನು ಕಟ್ಟಿಸುವುದಕ್ಕೆ ಮುಂಚೆಯೇ, ಗೋವಿಂದನು ಮುಗಳಿಯಲ್ಲಿ (ಮುಗುಳೂರು) ಜಿನಾಲಯವೊಂದನ್ನು ನಿರ್ಮಿಸಿದ್ದಿರಬಹುದೆಂದು ಶಾಸನ ಪಠ್ಯದಿಂದ ತಿಳಿದು ಬರುತ್ತದೆ.[48] ವಿಷ್ಣುವರ್ಧನನ ಬಿರುದುಗಳು ಮತ್ತು ಆಳ್ವಿಕೆಯನ್ನು ಹೆಸರಿಸುವ ಹೊನ್ನಾವರದ ಕ್ರಿ.ಶ.1149ರ ಶಾಸನವೊಂದು ಕೋಣೆಯ ಶಂಕರ ದಂಡನಾಥನು ಹೊನ್ನಾವರ ಗ್ರಾಮದಲ್ಲಿ ಕೇಶವ ದೇವಾಲಯವನ್ನು ನಿರ್ಮಿಸಿದನೆಂದು ತಿಳಿಸುತ್ತದೆ.[49] ಆದರೆ ಇದೊಂದು ಸಂಕೀರ್ಣ ಶಾಸನವಾಗಿದ್ದು ಪೂರ್ವಾರ್ಧದಲ್ಲಿ 37ನೇ ಸಾಲಿನವರೆಗೆ ವಿಷ್ಣುವರ್ಧನನ ಆಳ್ವಿಕೆ ಮತ್ತು ಬಿರುದುಗಳನ್ನು ಉಲ್ಲೇಖಿಸುತ್ತಾ ಕೇಶವ ದೇವಾಲಯದ ಪ್ರತಿಷ್ಠಾಪನೆಯ ಬಗ್ಗೆ ತಿಳಿಸುತ್ತದೆ. ಆದರೆ ನಂತರದ ಸಾಲುಗಳು ಕೆಲವು ವರ್ಷಗಳ ನಂತರ ನಾಗದೇವನಾಯಕನ ಮಗನಾದ ಮಹಾಪ್ರಧಾನ ಹೆಗ್ಗಡೆ ಲಕುಮಯ್ಯನು ಒಂದನೇ ನರಸಿಂಹನಿಂದ ಭೂಮಿಯನ್ನು ದಾನವಾಗಿ ಪಡೆದು, ಪ್ರತಿಯಾಗಿ ಭೂಮಿ ಕಾಣಿಕೆಗಳನ್ನು ಕೇಶವ ದೇವರಿಗೆ ಹಾಗೂ ಶಂಕರ ದಂಡನಾಯಕನ ಮಗನಾದ ಬೋಕಣನಿಗೆ ದಾನ ನೀಡಿದ ಅಂಶಗಳನ್ನು ಉಲ್ಲೇಖಿಸುತ್ತದೆ. ಈ ಶಾಸನದ ಮತ್ತೊಂದು ವಿಶೇಷತೆಯೆಂದರೆ ಪ್ರಾರಂಭದ ಸಾಲುಗಳಲ್ಲಿ ಹೊಯ್ಸಳ ವಂಶ ಬೆಳೆದು ಬರಲು ಕಾರಣಕರ್ತನಾದ ಸಳನ ಚರಿತ್ರೆಯನ್ನು ತಿಳಿಸಲಾಗಿದೆ. ಬೈಲಹಳ್ಳಿ ಗ್ರಾಮದಲ್ಲಿ ದೊರೆತಿರುವ ವೀರಗಲ್ಲು ಶಾಸನವೊಂದು[50] ಮನುಮಹಾಮಂಡಳೇಶ್ವರ ಚೊಕ್ಕಬಿಟ್ಟಿದೇವನ ಕಾಳಗದೊಳು ದಂಡನಾಯಕ ಬೊಪ್ಪದೇವನು ಎಂದು ಹೆಸರಿಸಿದ್ದು, ಚೊಕ್ಕಬಿಟ್ಟಿದೇವನು ವಿಷ್ಣುವರ್ಧನನು ಬಹಳ ಪ್ರೀತಿಯಿಂದ ಕಾಣುತ್ತಿದ್ದ ಮರಿಯಾನೆ ದಂಡನಾಯಕನ ಮಗ ಬಿಟ್ಟಿಯಣ್ಣನಿರಬಹುದು. ಬೊಪ್ಪದೇವನು ವಿಷ್ಣುವರ್ಧನನ ಮತ್ತೊಬ್ಬ ದಂಡನಾಯಕನಾಗಿಬಹುದಾಗಿದ್ದು ಹೆಚ್ಚಿನ ಮಾಹಿತಿ ತಿಳಿಯಲು ದುರಾದೃಷ್ಟವಶಾತ್ ಈ ಶಾಸನದ ಸಾಲುಗಳು ನಶಿಸಿಹೋಗಿವೆ. ದೊಡ್ಡಗದ್ದವಳ್ಳಿಯ ದೇವಾಲಯದ ಮಹಾದ್ವಾರದ ಬಳಿ ಕಂಡು ಬರುವ ಕ್ರಿ.ಶ.12ನೇ ಶತಮಾನದ ಶಾಸನವು ಶಿವಲೆಂಕ ದಾಸಯ್ಯನು ಮಹಾಲಕ್ಷ್ಮಿ ದೇವಾಲಯಕ್ಕೆ 10 ಹೊನ್ನುಗಳನ್ನು ದಾನ ನೀಡಿದುದರ ಬಗ್ಗೆ ಉಲ್ಲೇಖಿಸುತ್ತದೆ.[51] ಮುತ್ತತ್ತಿ ಗ್ರಾಮದ ಮಾಧವರಾಯ ದೇವಾಲಯದ ಸ್ತಂಭಗಳ ಬೋದಿಗೆಯ ಸುತ್ತಲೂ ಶಾಸನಗಳು ಕಂಡು ಬಂದಿದ್ದು ಇವು ವಿಷ್ಣುವರ್ಧನನ ಆಳ್ವಿಕೆಯ ಕಾಲಘಟ್ಟದಲ್ಲಿ ವಿನಯಾದಿತ್ಯಣ್ಣ ಎಂಬಾತನು ನಿರ್ಮಿಸಿದ ಜಿನಾಲಯಕ್ಕೆ ಮುತ್ತತ್ತಿ ಗ್ರಾಮದ ಕೆಲವು ಗದ್ದೆ, ತೋಟವನ್ನು ದಾನ ನೀಡಿದ್ದರ ಬಗ್ಗೆ ತಿಳಿಸುತ್ತದೆ. ದಾನವನ್ನು ಪಡೆದ ಪ್ರತಿಗ್ರಹಿಯು ಪ್ರಭಾಚಂದ್ರಸಿದ್ಧಾಂತದೇವ ಎಂಬ ಉಲ್ಲೇಖವಿದೆ.[52] ಅನುಗವಳ್ಳಿಯ ಕೋದಂಡರಾಮ ದೇವಾಲಯದ ಬಳಿ ಕಂಡು ಬಂದಿರುವ ಶಾಸನವೊಂದು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ವಿಗ್ರಹ ಅಥವಾ ದೇವಾಲಯವನ್ನು ಪ್ರತಿಷ್ಠೆ ಮಾಡಿದುದರ ಬಗ್ಗೆ ತಿಳಿಸುತ್ತದೆ.[53] ಆದರೆ ಈ ಶಾಸನದ ಬಹಳಷ್ಟು

ಸಾಲುಗಳು ನಶಿಸಿ ಹೋಗಿರುವುದು ದುರದೃಷ್ಟಕರ. ಇದೇ ದೇವಾಲಯದ ಪಶ್ಚಿಮದ ಗೋಡೆಯ ಮೇಲೆ ಕ್ರಿ.ಶ.1414ನೇ ಕಾಲಮಾನಕ್ಕೆ ಸಲ್ಲುವ ತಮಿಳು ಲಿಪಿಯ ಶಾಸನವೊಂದು[54] ಅನುಮನ್ವಳ್ಳಿಯ ಕೇಶವ ದೇವರಿಗಾಗಿ ಎರಡು ಖಂಡುಗ ಭೂಮಿಯನ್ನು ಖರೀದಿಸಿದುದರ ಬಗ್ಗೆ ತಿಳಿಸುತ್ತದೆ. ವಿಶೇಷವೆಂದರೆ ಈ ಶಾಸನದಲ್ಲಿ ವಿಷ್ಣುವರ್ಧನನ ಹೆಸರು ಉಲ್ಲೇಖವಾಗುತ್ತದೆ. ಕೋಡಿಹಳ್ಳಿಯ ಈಶ್ವರ ದೇವಾಲಯದ ಬಳಿ ವೀರಗಲ್ಲು ಶಾಸನವೊಂದಿದ್ದು, ಇದು ವಿಷ್ಣುವರ್ಧನ ಬಿಟ್ಟಿದೇವ ಪೊಯ್ಸಳನು ಗಂಗವಾಡಿ ತೊಂಭತ್ತಾರು ಸಾವಿರ ಪ್ರದೇಶವನ್ನು ಆಳ್ವಿಕೆ ಮಾಡುತ್ತಿರುವಾಗ ತುರುಗೋಳ್ ಕದನದಲ್ಲಿ ಸೋಮಣ್ಣನು ಮರಣ ಹೊಂದಿದ್ದನ್ನು ತಿಳಿಸುತ್ತದೆ.

ಹೀಗೆ ವಿಷ್ಣುವರ್ಧನನು ಮಹಾನ್ ಪರಾಕ್ರಮಿಯಾಗಿದ್ದು ತನ್ನ ಆಳ್ವಿಕೆಯ ಅವಧಿಯಲ್ಲಿ ವಿಶಾಲವಾದ ಹೊಯ್ಸಳ ರಾಜಮನೆತನವನ್ನು ಕಟ್ಟುವುದರ ಜೊತೆಗೆ ಸಮಾಜಮುಖಿ ಕಾರ್ಯಗಳನ್ನು ಸಹ ಮಾಡುತ್ತಾನೆ. ಮೂಲತಃ ಜೈನಿಗನಾಗಿದ್ದ ವಿಷ್ಣುವರ್ಧನನು ಶ್ರೀರಾಮಾನುಜಾಚಾರ್ಯರ ದಿಸೆಯಿಂದ ವೈಷ್ಣವ ಧರ್ಮಕ್ಕೆ ಮತಾಂತರವಾದರೂ ಸಹ ಎಲ್ಲಾ ಧರ್ಮೀಯರನ್ನು ಪ್ರೀತಿಯಿಂದ ಆಧರಿಸುತ್ತಿದ್ದ. ಈತನ ಪತ್ನಿ ಶಾಂತಲಾದೇವಿಯು ತನ್ನ ಜೀವಿತದ ಕೊನೆಯವರೆಗೂ ಜೈನ ಧರ್ಮಿಯಾಳಾಗಿ ಉಳಿದದ್ದು ಈತನ ಸರ್ವಧರ್ಮ ಸಹಿಷ್ಣುತೆಗೆ ಹಿಡಿದ ಕೈಗನ್ನಡಿಯಾಗಿದೆ. ಈತನು ತನ್ನ ಆಳ್ವಿಕೆಯ ಕಾಲಾವಧಿಯಲ್ಲಿ ಸಾಕಷ್ಟು ಸಂಖ್ಯೆಯ ದೇವಾಲಯ ಜಿನಾಲಯಗಳನ್ನು ನಿರ್ಮಿಸಿ ಅಪಾರವಾದ ದಾನ ದತ್ತಿಗಳನ್ನು ನೀಡುವುದರ ಮೂಲಕ ಹೊಯ್ಸಳ ರಾಜ್ಯವನ್ನು ಒಂದು ಕಲ್ಯಾಣ ರಾಜ್ಯವನ್ನಾಗಿ ರೂಪಿಸುತ್ತಾನೆ. ನಂತರ ಇವನ ಮಗ ಒಂದನೇ ನರಸಿಂಹನು ಹೊಯ್ಸಳ ರಾಜಮನೆತನದ ಗದ್ದುಗೆಯನ್ನು ಏರುತ್ತಾನೆ.

**ಒಂದನೇ ನರಸಿಂಹ (ಕ್ರಿ.ಶ.1152–1173)**

ವಿಷ್ಣುವರ್ಧನ ಹಿರಿಯ ಮಗನಾದ ಕುಮಾರ ಬಲ್ಲಾಳನು ಬಾಲ್ಯದಲ್ಲಿಯೇ ಅಕಾಲಿಕ ಮರಣಕ್ಕೆ ತುತ್ತಾಗಿದ್ದರಿಂದ, ಈತನ ಎರಡನೇ ಮಗ ಒಂದನೇ ನರಸಿಂಹನು ಹೊಯ್ಸಳ ರಾಜಮನೆತನದ ಗದ್ದುಗೆಯನ್ನು ತನ್ನ ಎಂಟನೇ ವಯಸ್ಸಿನಲ್ಲಿಯೇ ಏರುತ್ತಾನೆ.[55] ಈತನ ಕಾಲದಲ್ಲಿ ಯಾವುದೇ ಪ್ರಮುಖ ರಾಜಕೀಯ ಘಟನೆಗಳು ನಡೆಯಲಿಲ್ಲ. ಈತನ ಆಳ್ವಿಕೆಯಲ್ಲಿ ಹೊಯ್ಸಳ ರಾಜಮನೆತನದ ರಾಜ್ಯವು ವಿಸ್ತಾರವಾಗುವುದಕ್ಕಿಂತ ಸಂಕುಚಿತವಾಗಿ ತನ್ನ ತಂದ ಪ್ರಭುತ್ವದ ಸಾಧಿಸಿದ್ದ ಪ್ರದೇಶಗಳ ಮೇಲಿನ ಹಿಡಿತವನ್ನು ಕಳೆದುಕೊಳ್ಳಬೇಕಾದ ಪರಿಸ್ಥಿತಿ ನಿರ್ಮಾಣವಾದಾಗ ಈತನ ದಂಡನಾಯಕರುಗಳಾದ ಬೊಪ್ಪದೇವ, ಚಾವಿಮಯ್ಯ

ಬೂಚಿಮಯ್ಯ ಮುಂತಾದ ದಂಡನಾಯಕರುಗಳು ರಾಜ್ಯವು ಶತ್ರುಗಳ ವಶವಾಗದಂತೆ ನೋಡಿಕೊಂಡರು. ವಿಷ್ಣುವರ್ಧನನ ಮರಣಾನಂತರ ಚಂಗಾಳ್ವರು ಸ್ವತಂತ್ರರಾಗಲು ಹವಣಿಸುತ್ತಿದ್ದಾಗ ಒಂದನೇ ನರಸಿಂಹನ ಆಳ್ವಿಕೆಯನ್ನು ಹೊಯ್ಸಳ ಸೈನ್ಯವು ಕ್ರಿ.ಶ.1145ರಲ್ಲಿ ಇವರ ಮೇಲೆ ಯುದ್ಧ ಕೈಗೊಂಡು ಅಪಾ ಪ್ರಮಾಣದ ಚಿನ್ನಾಭರಣಗಳನ್ನು, ಆನೆಗಳು ಮತ್ತು ಕುದುರೆಗಳನ್ನು ವಶಪಡಿಸಿಕೊಳ್ಳುತ್ತದೆ.[56] ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಬನವಾಸಿ–ಹಾನಗಲ್ಲು ಪ್ರಾಂತ್ಯವು ಹೊಯ್ಸಳರ ಹಿಡಿತದಲ್ಲಿದ್ದು ನರಸಿಂಹನ ಆಳ್ವಿಕೆಯ ಕಾಲಘಟ್ಟಕ್ಕೆ ಇವರ ಹಿಡಿತದಿಂದ ಸಡಿಲವಾಗುವ ಹಂತ ತಲುಪಿತು. ಇಂಥ ಸಂದರ್ಭದಲ್ಲಿ ಕಲ್ಯಾಣಿ ಚಾಲುಕ್ಯ ಜಗದೇಕಮಲ್ಲನ ಸಾಮಂತನಾಗಿದ್ದ ಕದಂಬ ಮಲ್ಲಿದೇವರಸನ ಮೇಲೆ ಕ್ರಿ.ಶ.1143ರಲ್ಲಿ ಹೊಯ್ಸಳ ಸೈನ್ಯವು ಯುದ್ಧ ಸಾರಿದಾಗ ಪುನಃ ಕದಂಬರ ಆಳ್ವಿಕೆಯ ಪ್ರಾಂತ್ಯವು ಹೊಯ್ಸಳರ ವ್ಯಾಪ್ತಿಗೆ ಒಳಪಡುತ್ತದೆ.[57] ನಂತರ ಕ್ರಿ.ಶ.1153ರಲ್ಲಿ ನರಸಿಂಹನು ತುಂಗಭದ್ರ ಪ್ರಾಂತ್ಯದ ಮೇಲೆ ಹಿಡಿತ ಸಾಧಿಸಲು ವಿಫಲನಾಗಿ ಕಲ್ಯಾಣಿ ಚಾಳುಕ್ಯ ಜಗದೇಕಮಲ್ಲನ ಹೆಸರನ್ನು ತನ್ನ ಹೆಸರಿನ ಪ್ರಾರಂಭದಲ್ಲಿ ಸೇರಿಸಿಕೊಳ್ಳುವ ಮೂಲಕ ಅವನ ಅಧೀನಕ್ಕೆ ಒಳಪಡಬೇಕಾಗುತ್ತದೆ.[58] ಇದೇ ಕಾಲಘಟ್ಟದಲ್ಲಿ ಕಲ್ಯಾಣಿ ಚಾಲುಕ್ಯರಿಗೆ ಪ್ರಬಲ ಸ್ಪರ್ಧಿಗಳಾಗಿ ಕಳಚೂರಿ ಅರಸರು ಪ್ರವರ್ಧಮಾನಕ್ಕೆ ಬಂದು ಆ ಪ್ರಾಂತ್ಯವು ಕಳಚೂರಿಗಳ ಹಿಡಿತಕ್ಕೆ ಸಿಗುತ್ತದೆ. ಕಲ್ಯಾಣಿ ಚಾಳುಕ್ಯರ ಸಾಮ್ರಾಜ್ಯದಲ್ಲಿ ಕಳಚೂರಿಗಳ ಪ್ರಭಾವದಿಂದಾಗಿ ಉಂಟಾದ ಪ್ರಕ್ಷೋಭೆಯಿಂದಾಗಿ ನರಸಿಂಹನು ಪ್ರಬಲನಾದರೂ ಕೂಡ ಕ್ರಿ.ಶ.1160ರಲ್ಲಿ ಕಳಚೂರಿ ಅರಸ ಬಿಜ್ಜಳನ ಸಾಮಂತನಾದ ಬರಮ್ಮರಸನಿಂದ ತುಂಗಭದ್ರಾ ನದಿಯ ದಂಡೆಯ ಬಳಿ ನಡೆದ ಯುದ್ಧದಲ್ಲಿ ಸೋಲಲ್ಪಡುತ್ತಾನೆ.[59] ನಂತರ ಪುನಃ ಬಿಜ್ಜಳನು ಕ್ರಿ.ಶ.1162ರಲ್ಲಿ ಬಳ್ಳಿಗಾವೆಯಲ್ಲಿ ಸೈನ್ಯವನ್ನು ಬೀಡುಬಿಟ್ಟು ನರಸಿಂಹನ ಮೇಲೆ ದಾಳಿ ಮಾಡಿದಾಗ ಈ ಯುದ್ಧದಲ್ಲಿ ನರಸಿಂಹನ ಸೇನಾದಿ ಲಕುಮಯ್ಯದ ಹೋರಾಟದ ಫಲವಾಗಿ ಹೊಯ್ಸಳ ಸೈನ್ಯಕ್ಕೆ ಗೆಲುವು ದಕ್ಕುತ್ತದೆ.[60] ತುಂಗಭದ್ರಾ ನದಿಯ ಪ್ರದೇಶದಲ್ಲಿ ಚಾಳುಕ್ಯರ ಮತ್ತು ಕಳಚೂರಿಗಳ ನಡುವಿನ ಕಲಹವನ್ನು ಸದುಪಯೋಗಪಡಿಸಿಕೊಂಡು ನರಸಿಂಹನು ಕ್ರಿ.ಶ.1173ರವರೆಗೆ ನಡೆಸಿದನಾದರೂ ಈತನ ನಿರಾಸಕ್ತ ಮತ್ತು ಅದಕ್ಷ ಆಡಳಿತದಿಂದ ಬೇಸತ್ತಿದ್ದ ಈತನ ಮಗ ಎರಡನೇ ಬಲ್ಲಾಳನು ತಂದೆಯ ವಿರುದ್ಧ ಧಂಗೆಯೆದ್ದು ಹೊಯ್ಸಳ ಸಿಂಹಾಸನವನ್ನೇರುತ್ತಾನೆ.

ಹಾಸನ ತಾಲೂಕಿನ ಬಹುಪಾಲು ಪ್ರದೇಶವು ಒಂದನೇ ನರಸಿಂಹನ ಆಳ್ವಿಕೆಗೆ ಒಳಪಟ್ಟಿದ್ದು ಈತನ ಹೆಸರು, ಬಿರುದುಗಳು ದೇವಾಲಯಗಳನ್ನು ನಿರ್ಮಿಸಿ ದಾನ ದತ್ತಿಗಳನ್ನು ನೀಡಿರುವುದನ್ನು ಉಲ್ಲೇಖಿಸುವ ಸಾಕಷ್ಟು ಸಂಖ್ಯೆಯ ಶಾಸನಗಳು ಕಂಡು ಬರುತ್ತವೆ. ನಿಟ್ಟೂರು ಗ್ರಾಮದ ಸೋಮೇಶ್ವರ ದೇವಾಲಯದ ಬಳಿ ನಿಲ್ಲಿಸಿರುವ ಕ್ರಿ.ಶ.1147ರ ವೀರಗಲ್ಲು

ಶಾಸನವೊಂದು[61] ಹೊಯ್ಸಳ ಅರಸರ ಬಿರುದುಗಳ ಜೊತೆಗೆ ನಾರಸಿಂಘದೇವನ ಆಳ್ವಿಕೆಯ ಕಾಲಘಟ್ಟದಲ್ಲಿ ಮಲೆಯಗಾವುಂಡನ ಮಗ ವರೆಯನು ತುರುಗೋಳ್ ಕಾಳಗದಲ್ಲಿ ಮರಣ ಹೊಂದಿದ ವಿಚಾರವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಚಾಳುಕ್ಯ ವಿಕ್ರಮಶಕೆಯ ಉಲ್ಲೇಖವಿರುವುದರಿಂದ ಹೊಯ್ಸಳರು ಚಾಳುಕ್ಯರ ಅಧಿಪತ್ಯವನ್ನು ಒಪ್ಪಿಕೊಂಡಿದ್ದರೆಂದು ತಿಳಿಯಬಹುದಾಗಿದೆ. ಇದೇ ಶಾಸನದ ಪಕ್ಕದಲ್ಲಿರುವ ಮತ್ತೊಂದು ವೀರಗಲ್ಲು ಶಾಸನವು[62] ಕ್ರಿ.ಶ.1145-46ರಲ್ಲಿ ಬಿಕ್ಕಿಸೆಟ್ಟಿಯ ಮಗ ಮರಣ ಹೊಂದಿದ ವಿಚಾರವನ್ನು ತಿಳಿಸುತ್ತದೆ. ಈ ಶಾಸನದಲ್ಲೂ ಸಹ ವೀರನಾರಸಿಂಹನ ಹೆಸರಿನ ಜೊತೆಗೆ ಚಾಳುಕ್ಯ ವಿಕ್ರಮಶಕೆಯ ಉಲ್ಲೇಖ ಕಂಡು ಬಂದಿದ್ದು ಇದು ಚಾಳುಕ್ಯರ ಅಧಿಪತ್ಯವನ್ನು ತೋರಿಸುತ್ತದೆ. ಹೆರಗು ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1155ರ ಶಾಸನವೊಂದು[63] ಮಹಾಪ್ರಧಾನ ಮತ್ತು ಹಿರಿಯ ಹಡವಳ ಚಾವಿಮಯ್ಯನ ಪತ್ನಿ ಜಕ್ಕವ್ವೆಯು ಹೆರಗು ಗ್ರಾಮದಲ್ಲಿ ಚೆನ್ನಪಾರ್ಶ್ವನಾಥನಿಗೆ ಬಸದಿಯನ್ನು ನಿರ್ಮಿಸಿ, ಈ ಜಿನಾಲಯದ ಪೂಜೆ, ನೈವೇದ್ಯ ಕಾರ್ಯಗಳಿಗೆ ಗ್ರಾಮದ ದೊಡ್ಡ ಕೆರೆಯ ಕೆಳಗಿನ ಗದ್ದೆ ಮತ್ತು ಹೊಲವನ್ನು ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಈ ಶಾಸನದ ಪ್ರಾರಂಭದಲ್ಲಿ ಹೊಯ್ಸಳ ಅರಸರ ಬಿರುದುಗಳನ್ನು ಹೇಳುವುದರ ಜೊತೆಗೆ ವೀರನಾರಸಿಂಹದೇವನ ಹೆಸರನ್ನು ಉಲ್ಲೇಖಿಸಲಾಗಿದೆ. ಈ ಶಾಸನದಲ್ಲಿ ಚಾವಿಮಯ್ಯ ಮತ್ತು ಜಕ್ಕವ್ವೆಯನ್ನು ವಿವಿಧ ವಿಶೇಷಣಗಳಿಂದ ವರ್ಣಿಸಲಾಗಿದ್ದು, ಜಕ್ಕವ್ವೆಯು ದೇಶೀಯ ಗಣದ, ಮೂಲ ಸಂಘದ ನಯಕೀರ್ತಿ-ಸಿದ್ಧಾಂತ ಚಕ್ರವರ್ತಿಯ ಅನುಯಾಯಿ ಎಂಬುದು ತಿಳಿದು ಬರುತ್ತದೆ. ಮುದುಗೆರೆ ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1156ರ ಶಾಸನವು[64] ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಪೆರ್ಗಡೆ ಎರೆಯಮನು ಮುದುಗೆರೆಯಲ್ಲಿ ತನ್ನ ಹೆಸರಿನಲ್ಲಿ ಎರಂಗೇಶ್ವರ ದೇವಾಲಯವನ್ನು ಕಟ್ಟಿಸಿ ಲಿಂಗ ಪ್ರತಿಷ್ಠಾಪನೆ ಮಾಡಿಸಿದ ವಿಷಯವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಅರಸ ನರಸಿಂಹನನ್ನು, ಇವನ ಪೂರ್ವಿಕರ ಇತಿಹಾಸ ಮತ್ತು ಬಿರುದುಗಳನ್ನು ಉಲ್ಲೇಖಿಸುವ ಮೂಲಕ ವರ್ಣಿಸಲಾಗಿದೆ. ಈ ಶಾಸನದಲ್ಲಿ ಮುದುಗೆರೆ ಮುನಿಪ ಎಂದು ವರ್ಣಿತನಾದ ನಾಗರಾಶಿಪಂಡಿತ ದೇವನಿಗೆ ಈ ದೇವಾಲಯವನ್ನು ವಹಿಸಿಕೊಟ್ಟಂತೆ ತೋರುತ್ತದೆ. ವಾಸ್ತವವಾಗಿ ಆತ ಇದೇ ಸ್ಥಳದವನಾಗಿದ್ದು ಲಾಕುಳ ಪಂಥಕ್ಕೆ ಸೇರಿದವನೆಂದು ತಿಳಿಸುತ್ತದೆ. ಎರೆಯಮನು ಬೋಕಣ ಅಥವಾ ಬೋಕುಮಯ್ಯನ ಮನೆ ವೆರ್ಗಡೆಯಾಗಿದ್ದನೆಂದು ಮತ್ತು ಚಿನ್ನವೆಗ್ಗಡೆ ಹಾಗೂ ಮಾಕಿಯಕ್ಕರ ಮಗನೆಂದು ವರ್ಣಿತನಾಗಿದ್ದಾನೆ. ಈತನಿಗೆ ಬಾಚಲೆ ಮತ್ತು ಮಾಚಲೆ ಎಂಬ ಪತ್ನಿಯರು ಹಾಗೂ ಮೊಮ್ಮದೇವನೆಂಬ ಮಗನಿದ್ದನೆಂಬುದು ಈ ಶಾಸನದಿಂದ ತಿಳಿದು ಬರುತ್ತದೆ. ಈ ಶಾಸನದಲ್ಲಿ ಹೆಸರಿಸಿರುವ ಬೋಕಿಮಯ್ಯನು ಹೊಯ್ಸಳ ಅರಸನ ಮಹಾಪ್ರಧಾನ, ಸೇನಾಧಿಪತಿ ಹಾಗೂ

ಹಿರಿಯ ಹಡವಳನಾಗಿದ್ದನು. ಈ ದೇವಾಲಯದ ಮೂಲಸ್ಥಾನ ದೇವರಾದ ರಾಮೇಶ್ವರನಿಗೆ ಗ್ರಾಮದ ಗದ್ದೆ, ತೋಟ, ತೆಲ್ಲಿಗರ ಗಾಣದಿಂದ ಎಣ್ಣೆ ಹಾಗೂ ಹೂದೋಟಗಳನ್ನು ದಾನ ನೀಡಿದ ಉಲ್ಲೇಖ ಶಾಸನದ ಕೊನೆಯ ಸಾಲುಗಳ ಪಠ್ಯದಿಂದ ತಿಳಿದು ಬರುತ್ತದೆ. ಕ್ರಿ.ಶ.1158ರ ಹೊನ್ನಾವರ ಗ್ರಾಮದ ಶಾಸನವು[65] ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಕಂದಮಂಗಲದ ಬಮ್ಮಗಾವುಂಡ ಮತ್ತು ಬೆನವಗಾವುಂಡಿಯರ ಮಗನಾದ ಸುರಿಗೆಯ ಗಂಗಣ್ಣನು ಮಹಾಪ್ರಧಾನ ಶಂಕರದಣ್ಣಾಯಕನಿಗೆ ಸೇರಿದ ನೀರ್ಗುಂದನಾಡಿನ ಹೊನ್ನಪುರ (ಹೊನ್ನಾವರ)ದಲ್ಲಿ ಮೂಲಸ್ಥಾನ ಮಹಾದೇವ ದೇವಾಲಯದಲ್ಲಿ ದೇವರ ಮುಂದೆ ನಂದಿಯ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿಸಿದುದನ್ನು ತಿಳಿಸುತ್ತದೆ. ಹೆರಗು ಗ್ರಾಮದ ಕ್ರಿ.ಶ.1159ರ ಶಾಸನವೊಂದು[66] ಹೊಯ್ಸಳ ಒಂದನೇ ನರಸಿಂಹನ ಆಳ್ವಿಕೆಯಲ್ಲಿ ಹೆಗಿನ ಸೋವನಾಥಿಮನಿಗೆ ಅರಸನ ಪರವಾಗಿ ದಾನ ನೀಡಿದಂತೆ ತಿಳಿದು ಬಂದರೂ ಸಹ ಶಾಸನ ಅಪೂರ್ಣವಾಗಿದೆ. ಹುಲ್ಲೇನಹಳ್ಳಿ ಗ್ರಾಮದ ಶಾಸನವು[67] ಹೊಯ್ಸಳ ನಾರಸಿಂಹನ ಆಳ್ವಿಕೆಯ ಅವಧಿಯಲ್ಲಿ ಹುಲ್ಲೆಯಹಳ್ಳಿಯ ವಡ್ಡಸೆಟ್ಟಿ ಸಿವನಾದ ಸಾಹಣಿಯು ಮಾಡಿದ ಧರ್ಮಕ್ಕೆ ಹೊನ್ನಾವರದ ಹೊನ್ನಗೌಂಡನ ಮಗ ಬೋಕಗೌಂಡುನ ಹಳ್ಳಿಯ ಚಟ್ಟಗೌಂಡನು, ಹನೆಯಗೌಂಡನು ಸಮಸ್ತ ಪ್ರಜೆಗಳ ಸಮ್ಮುಖದಲ್ಲಿ ತ್ರಿಭುವನಶಕ್ತಿ ಪಂಡಿತರ ಪುತ್ರ ಭೈರವಜೀಯನ ಕಾಲಗೆರಗಿ ಮಲ್ಲಿಕಾರ್ಜುನ ದೇವಾಲಯಕ್ಕೆ ಭೂಮಿ ಮತ್ತು ನಂದಾದೀವಿಗೆಗೆ ಒಂದು ಕೈಗಾಣವೊಂದನ್ನು ದಾನ ನೀಡಿದ ಉಲ್ಲೇಖ ಕಂಡು ಬರುತ್ತದೆ. ಕೋರವಂಗಲದ ಗೋವಿಂದೇಶ್ವರ ದೇವಾಲಯದ ದಕ್ಷಿಣ ದಿಕ್ಕಿನಲ್ಲಿ ಕಂಡುಬಂದಿರುವ ಕ್ರಿ.ಶ.1160ರ ಶಾಸನವು[68] ಸೀಗೆನಾಡಿನ ಕೋರವಂಗಲ ಗ್ರಾಮದಲ್ಲಿ ಹೆಗ್ಗಡೆ ಮತ್ತು ಶ್ರೀಕರಣ ಗೋವಿಂದಮಯ್ಯನು ಗೋವಿಂದೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ವಿಚಾರಗಳನ್ನು ತಿಳಿಸುತ್ತದೆ. ಈ ದೇವಾಲಯಕ್ಕೆ ದಾನವನ್ನು ಪಡೆದ ಪ್ರತಿಗ್ರಹಿಯಾದ ವಿದ್ಯಾಭರಣ ಪಂಡಿತದೇವನ ಹೆಸರು ಈ ಶಾಸನದಿಂದ ತಿಳಿದು ಬರುತ್ತದೆ. ಗೊರೂರಿನಲ್ಲಿ ಕಂಡು ಬಂದಿರುವ ಕ್ರಿ.ಶ.1167ರ ಶಾಸನವು[69] ಶತರುದ್ರಿಯ ಪುರವಾದ ಗೊರವೂರಿನಲ್ಲಿ ಸುರಿಗೆಯ ವಿಜಯಾದಿತ್ಯ ಹೆಗ್ಗಡೆಯು ತ್ರಿಕೂಟ ಲಿಂಗವನ್ನು ಪ್ರತಿಷ್ಠಾಪಿಸಿ 15 ಗದ್ಯಾಣಗಳನ್ನು ಮತ್ತು ಮಾವಿನಕೆರೆ ಗ್ರಾಮವನ್ನು ವಿಜಯಾದಿತ್ಯಪುರಕ್ಕೆ ಧಾರಾಪೂರ್ವಕವಾಗಿ ದಾನ ನೀಡಿದ ವಿಚಾರಗಳನ್ನು ತಿಳಿಸುತ್ತದೆ. ಇದೇ ದೇವಾಲಯದ ಕಂಬಗಳ ಮೇಲೆ ಕಂಡು ಬಂದಿರುವ ಶಾಸನ,[70] ಹೊರಭಿತ್ತಿಯ ಕೆಳಭಾಗದಲ್ಲಿ ಕಂಡು ಬಂದಿರುವ ಶಾಸನ,[71] ದೇವಾಲಯದ ಹೊರಬಾಗಿಲಿಗೆ ಉತ್ತರ ಕಡೆಯ ಗೋಡೆಗೆ ಸೇರಿಸಿರುವ ಕಂಬದ ಮೇಲಿನ ಶಾಸನ,[72] ಇದೇ ದೇವಾಲಯದ ಬಲಗಡೆಯ ತಳಪಾದಿಯ ಕಲ್ಲಿನ ಮೇಲಿರುವ ಶಾಸನ,[73] ಒಟ್ಟು ಈ ದೇವಾಲಯದ ಐದೂ ಶಾಸನಗಳು ಕೂಡ ಸುರಿಗೆಯ

ವಿಜಯಾದಿತ್ಯನು 15 ಗದ್ಯಾಣಗಳು ಮತ್ತು ಮಾವಿನಕೆರೆ ಗ್ರಾಮವನ್ನು ವಿಜಯಾದಿತ್ಯಪುರಕ್ಕೆ ದಾನ ನೀಡಿದ ವಿಚಾರವು ಪದೇ ಪದೇ ಪುನರಾವರ್ತಿತವಾಗುತ್ತದೆ. ಗೌಡಗೆರೆ ಗ್ರಾಮದ ಕ್ರಿ.ಶ.1170ರ ಒಂದು ಶಾಸನವು[74] ನರಸಿಂಹನ ಆಳ್ವಿಕೆಯ ಕಾಲದಲ್ಲಿ ಸಾವಾಸಿ ಎಲಿಭಟ್ಟನು ಹಾಲ್ತೊರೆಯ ಮದುಕಗೌಂಡ, ಬಮ್ಮಗೌಡ, ಮಲ್ಲಗೌಡ, ಮುದ್ದಗೌಡ, ರಾಜಗೌಡ, ಮಸಣಗೌಡ ಇವರಿಂದ ಭೂಮಿಯನ್ನು ಖರೀದಿಸಿ 'ಪಿನ್ನವನೆ' ಎಂಬ ಕೆರೆಯನ್ನು ನಿರ್ಮಿಸಿ, ಇದರ ಕೆಳಗಿನ ಗದ್ದೆಯನ್ನು ಗೌಡಗೆರೆಯ ದೇವಸ್ಥಾನಕ್ಕೆ ದಾನ ಕೊಟ್ಟ ವಿಚಾರವನ್ನು ತಿಳಿಸುತ್ತದೆ. ದುದ್ದ ಹೋಬಳಿಯ ಜಕ್ಕೇನಹಳ್ಳಿಯಲ್ಲಿ ಕಂಡು ಬಂದಿರುವ ಕ್ರಿ.ಶ.1170-71ರ ಶಾಸನವು[75] ಒಂದನೇ ನಾರಸಿಂಹನ ಆಳ್ವಿಕೆಯ ಕಾಲದಲ್ಲಿ ಮಹಾಪ್ರಧಾನ, ಹೆಗ್ಗಡೆ ಕಾಳಮಯ್ಯನು ಕಾಳೇಶ್ವರ ದೇವಾಲಯವನ್ನು ನಿರ್ಮಿಸಿ, ದೇವಾಲಯದ ನಿತ್ಯ ಪೂಜೆ, ನೈವೇದ್ಯಕ್ಕೆ ಮತ್ತು ಜೀರ್ಣೋದ್ಧಾರಕ್ಕೆ ಗ್ರಾಮದ ಕೆಲವು ಹೆಸರಿಸಿದ ಗದ್ದೆ, ತೋಟ ಹಾಗೂ ಜಮೀನನ್ನು ದೇವಾಲಯದ ಸ್ಥಾನಪತಿಯಾದ ಶಿವಶಕ್ತಿಪಂಡಿತನಿಗೆ ಧಾರಾಪೂರ್ವಕವಾಗಿ ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ. ಈ ಶಾಸನವು ನರಸಿಂಹನನ್ನು ವಿಶಿಷ್ಟ ಪದನಾಮ, ವಾಕ್ಯಗಳಿಂದ ವರ್ಣಿಸುವುದರ ಜೊತೆಗೆ ದೇವಾಲಯದ ನಿರ್ಮಾತೃ ಕಾಳಮಯ್ಯನ ವಂಶಾವಳಿಯನ್ನು ತಿಳಿಸುವುದರ ಮೂಲಕ ಈತನು ವೇದಾಧ್ಯಯನ, ವೇದಾರ್ಥ ವಿಚಾರಗಳಲ್ಲಿ ಪಂಡಿತನಾಗಿದ್ದನೆಂಬ ಅಂಶಗಳನ್ನು ದಾಖಲಿಸುತ್ತದೆ. ಗೌಡಗೆರೆಯ ಕ್ರಿ.ಶ.1173ರ ವೀರಗಲ್ಲು ಶಾಸನವು[76] ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ವೀರಣ ಮತ್ತು ಕಲಿಬಂಕ ಎಂಬುವರು ಗೋಗ್ರಹಣದಲ್ಲಿ ಹೋರಾಡಿ ಮಡಿದಾಗ ಮಾರಗೌಡನ ಮಗ ಮುದ್ದಯ್ಯನು ಈ ವೀರಗಲ್ಲು ಶಾಸನವನ್ನು ನಿರ್ಮಿಸಿದನೆಂದು ತಿಳಿದು ಬರುತ್ತದ. ಮುಖ್ಯವಾಗಿ ಈ ಶಾಸನದಲ್ಲಿ 'ಕುಮಾರ ಬಲ್ಲಾಳನ ವಿಡ್ಡುರ' ಎಂಬ ಅಂಶ ದಾಖಲಾಗುತ್ತದೆ. ಕಬ್ಬಿನಹಳ್ಳಿ ಗ್ರಾಮದ ಕ್ರಿ.ಶ.1173ರ ವೀರಗಲ್ಲು ಶಾಸನವು[77] ನರಸಿಂಹನ ಆಳ್ವಿಕೆಯ ಕಾಲದಲ್ಲಿ ಮಹಾಸಾಮಂತ ಕಬ್ಬಿನಕೆರೆಯ ಹಿರಿಯತಮನ ಮಗ ಮಾದೆಯನು ಯಡಪ್ಪನ ಕಾಳಗದಲ್ಲಿ ಮಡಿದು ಸುರಲೋಕ ಪ್ರಾಪ್ತನಾದನೆಂಬ ಅಂಶವನ್ನು ಉಲ್ಲೇಖಿಸುತ್ತದೆ. ಕೋರವಂಗಲದ ಕ್ರಿ.ಶ.12ನೇ ಶತಮಾನಕ್ಕೆ ಸಲ್ಲುವ ಒಂದು ಶಾಸನವು[78] ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಮಹಾಪ್ರಧಾನ, ಶ್ರೀಕರಣ, ತಂತ್ರಾಧಿಕಾರಿ ನಾಕಣನು (ನಾಕಿಮಯ್ಯ) ಸೀಗೆನಾಡಿನ ಅಗ್ರಹಾರವಾದ ಕೋರವಂಗಲದಲ್ಲಿ 'ನಾಕೇಶ್ವರ' ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ ಹಾಗೂ ಇದೇ ದೇವಾಲಯಕ್ಕೆ ಹಿರಿಯ ಅಗ್ರಹಾರವಾದ ಶಾಂತಿಗ್ರಾಮದ ಶೇಷ ಮಹಾಜನರು ಸಹ ದಾನ ನೀಡಿದ ಉಲ್ಲೇಖ ಈ ಶಾಸನದಲ್ಲಿ ಕಂಡು ಬಂದಿದೆ. ವಿಶೇಷವಾಗಿ ಈ ಶಾಸನದಲ್ಲಿ ಒಂದನೇ ನರಸಿಂಹನವರೆಗಿನ ಹೊಯ್ಸಳ ಅರಸರಾದ ವಿನಯಾದಿತ್ಯ,

ನೃಪಕಾಮ, ಎರೆಯಂಗ ಮತ್ತು ಈತನ ಪತ್ನಿ ಏಚಲಾದೇವಿ ಹಾಗೂ ವಿಷ್ಣುವರ್ಧನನ ಹೆಸರುಗಳು ಉಲ್ಲೇಖವಾಗುತ್ತವೆ. ಒಂದನೇ ನರಸಿಂಹನ ಆಳ್ವಿಕೆಯನ್ನು ಉಲ್ಲೇಖಿಸುವ ಶಾಂತಿಗ್ರಾಮದೊಂದು ಶಾಸನವು[79] ವರದನರಸಿಂಹದೇವರ ನಂದಾದೀವಿಗೆಗೆ ವರ್ಷವೊಂದಕ್ಕೆ ಒಂದು ಗದ್ಯಾಣ ಮತ್ತು ಎರಡು ಹಣವನ್ನು ಧಾರಾಪೂರ್ವಕವಾಗಿ ದಾನ ನೀಡಿದ ವಿಚಾರವನ್ನು ಉಲ್ಲೇಖಿಸುತ್ತದೆ.

ಒಂದನೇ ನರಸಿಂಹನು ತನ್ನ ಆಳ್ವಿಕೆಯ ಕಾಲದಲ್ಲಿ ಹಾಸನ ತಾಲೂಕಿನಲ್ಲಿ ಹಲವು ದೇವಾಲಯಗಳನ್ನು ನಿರ್ಮಿಸಿ ಅಪಾರವಾದ ದಾನ-ದತ್ತಿಗಳನ್ನು ನೀಡಿರುವುದಕ್ಕೆ ಸಂಬಂಧಿಸಿದಂತೆ ಇದುವರೆಗೂ ಚರ್ಚಿಸಿದ ಹಲವು ಶಾಸನಗಳು ಆಧಾರವಾಗಿ ನಿಲ್ಲುತ್ತವೆ. ಆದರೆ ಒಟ್ಟಾರೆಯಾಗಿ ಈತನ ಆಳ್ವಿಕೆಯನ್ನು ಗಮನಿಸಿದಾಗ ಯಾವುದೇ ಪ್ರಮುಖ ರಾಜಕೀಯ ಘಟನೆಗಳು ನಡೆಯಲಿಲ್ಲ. ಈತ ರಾಜ್ಯ ವಿಸ್ತರಿಸುವುದಿರಲಿ, ತನ್ನ ಆಳ್ವಿಕೆಯಲ್ಲಿದ್ದ ಪ್ರದೇಶಗಳನ್ನು ಉಳಿಸಿಕೊಳ್ಳಲು ಪರದಾಡಬೇಕಾಯಿತು. ಇಂಥ ಸಂದರ್ಭದಲ್ಲಿ ಹೊಯ್ಸಳ ದಂಡನಾಯಕರುಗಳಾದ ಬೊಪ್ಪದೇವ, ಚಾವಿಮಯ್ಯ, ಬೂಚಿಮಯ್ಯ ಮುಂತಾದ ದಂಡನಾಯಕರು ರಾಜ್ಯವು ಶತ್ರುಗಳ ವಶವಾಗದಂತೆ ನೋಡಿಕೊಂಡಿದ್ದರ ಫಲವಾಗಿ ಒಂದನೇ ನರಸಿಂಹನು ಕ್ರಿ.ಶ.1173ರವರೆಗೆ ಆಳ್ವಿಕೆ ನಡೆಸಿದನಾದರೂ, ಈತನ ನಿಷ್ಕ್ರಿಯತೆ, ಸುಖಲೋಲುಪತೆಯಿಂದ ಬೇಸತ್ತಿದ್ದ ಎರಡನೇ ಬಲ್ಲಾಳನು ತನ್ನ ತಂದೆಯ ವಿರುದ್ಧವೇ ದಂಗೆಯೆದ್ದು ಹೊಯ್ಸಳ ಸಿಂಹಾಸನವನ್ನು ಏರಿದನು.[80, 81]

**ಎರಡನೇ ಬಲ್ಲಾಳ (ವೀರಬಲ್ಲಾಳ) (ಕ್ರಿ.ಶ.1173-1220)**

ಹೊಯ್ಸಳ ಅರಸರಲ್ಲಿ ವಿಷ್ಣುವರ್ಧನನ ನಂತರ ಈ ಮನೆತನವನ್ನು ಉತ್ಕೃಷ್ಟವಾಗಿ, ಒಂದು ಸುಭದ್ರ ಅಡಿಪಾಯದಲ್ಲಿ ಮುನ್ನಡೆಸಿದ ಕೀರ್ತಿಯು ಎರಡನೇ ಬಲ್ಲಾಳನಿಗೆ ಸಲ್ಲುತ್ತದೆ. ತನ್ನ ತಂದೆ ಒಂದನೇ ನರಸಿಂಹನ ನಿಷ್ಕ್ರೀಯ ಧೋರಣೆಯನ್ನು ಸಹಿಸಲಾರದೇ ಆತನ ವಿರುದ್ಧವೇ ದಂಗೆಯೇಳುವ ಮೂಲಕ ಕ್ರಿ.ಶ.1173ರಲ್ಲಿ ಹೊಯ್ಸಳರ ಸಿಂಹಾಸನವನ್ನು ಏರುತ್ತಾನೆ.[82,83] ಪರಾಕ್ರಮಿಯು, ಸಮರ್ಥ ಆಡಳಿತಗಾರನಾಗಿದ್ದ ಈತನ ಆಳ್ವಿಕೆಯ ಕಾಲವನ್ನು ಹೊಯ್ಸಳರ ಇತಿಹಾಸದಲ್ಲಿಯೇ ವೈಭವಯುಕ್ತ ಅಧ್ಯಾಯವೆಂದೇ ಪರಿಗಣಿಬಹುದಾಗಿದೆ. ಮೂರು ದಶಕಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ ಈತನು ತನ್ನ ತಂದೆಯ ಆಳ್ವಿಕೆಯಲ್ಲಿ ವೀಕ್ಷಿಸಲಾದ ಹಿನ್ನಡೆಯನ್ನು ಅಂತ್ಯಗೊಳಿಸಿದುದಲ್ಲದೇ ತನ್ನ ತಾತ ವಿಷ್ಣುವರ್ಧನನು ಹಮ್ಮಿಕೊಂಡಿದ್ದ ಸ್ವತಂತ್ರ ರಾಜ್ಯದ ಕನಸನ್ನು ನನಸಾಗಿಸುವಲ್ಲಿ ಯಶಸ್ವಿಯಾದನು. ಈತನು ಅಧಿಕಾರಕ್ಕೇರಿದ ತರುವಾಯ ತನ್ನ ತಂದೆಯ ಕಾಲದಲ್ಲಿ ಸ್ವತಂತ್ರರಂತೆಯೇ ವರ್ತಿಸುತ್ತಿದ್ದ

ಚಂಗಾಳ್ವರ ಮೇಲೆ ಕ್ರಿ.ಶ.1173ರಲ್ಲಿ ದಂಡನಾಯಕ ಬೆಟ್ಟರಸನ ನೇತೃತ್ವದಲ್ಲಿ ದಾಳಿ ನಡೆಸಿ ಚಂಗಾಳ್ವದೇವನ ವಿರುದ್ಧ ಜಯ ಸಾಧಿಸುವ ಮೂಲಕ ಚಂಗಾಳ್ವ ಪ್ರಾಂತ್ಯದ ಮೇಲೆ ಹಿಡಿತ ಸಾಧಿಸುತ್ತಾನೆ.[84] ನಂತರ ಕ್ರಿ.ಶ.1177ರಲ್ಲಿ ಉಚ್ಚಂಗಿಯ ಪಾಂಡ್ಯರ ಮೇಲೆ ದಾಳಿ ಮಾಡಿ ಕಾಮದೇವನನ್ನು ಸೋಲಿಸಿ ಇವರ ಕೋಟೆಯನ್ನು ವಶಪಡಿಸಿಕೊಂಡು 'ಗಿರಿದುರ್ಗಮಲ್ಲ' ಎಂಬ ಬಿರುದನ್ನು ಧರಿಸುತ್ತಾನೆ.[85] ಮುಖ್ಯವಾಗಿ ಈ ಯುದ್ಧವು ಶನಿವಾರ ದಿನದಂದೇ ನಡೆದು ಬಲ್ಲಾಳನು ವಿಜಯಿಯಾದುದರಿಂದ 'ಶನಿವಾರ ಸಿದ್ಧಿ' ಎಂಬ ಬಿರುದನ್ನೂ ಸಹ ಧರಿಸುತ್ತಾನೆ.[86] ಅದರೆ ಈ ಯುದ್ಧ ನಡೆದ ಹತ್ತು ವರ್ಷದ ಬಳಿಕ ಕ್ರಿ.ಶ.1187ರಲ್ಲಿ ಉಚ್ಚಂಗಿಯ ಪಾಂಡ್ಯರು, ಚಾಳುಕ್ಯ ದೊರೆ ನಾಲ್ಕನೇ ಸೋಮೇಶ್ವರನು ಪ್ರವರ್ಧಮಾನಕ್ಕೆ ಬಂದಾಗ, ಇವನ ಆದೇಶಾನುಸಾರ ಹೊಯ್ಸಳರ ಮೇಲೆ ತಿರುಗಿ ಬೀಳುತ್ತಾರೆ. ಆದರೆ ಈ ಯುದ್ಧದಲ್ಲಿ ಕಾಮದೇವನು (ವಿಜಯಪಾಂಡ್ಯ) ರಣರಂಗದಲ್ಲೇ ಕೊಲ್ಲಲ್ಪಟ್ಟು, ಈತನ ಮಗ ಉದಯಾದಿತ್ಯನು ಉಚ್ಚಂಗಿಯಿಂದ ಫಲಾಯನವಾಗಿ ಬೆಮ್ಮತ್ತೂರಿನಲ್ಲಿ ನೆಲೆಸುತ್ತಾನೆ.[87] ಕ್ರಿ.ಶ.1179ರ ಕಾಲಘಟ್ಟದಲ್ಲಿ ಕುಂತಳ ದೇಶ (ತುಂಗಾಭದ್ರಾ ನದಿಯ ಪ್ರದೇಶ) ಪ್ರಮುಖ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿದ್ದಿತು. ಈ ಪ್ರದೇಶದ ಮೇಲೆ ಕಲ್ಯಾಣದ ಕಳಚೂರಿಗಳು, ಚಾಳುಕ್ಯನು ಮತ್ತು ಯಾದವರು ಹಿಡಿತವನ್ನು ಸಾಧಿಸಲು ಪ್ರಯತ್ನಿಸುತ್ತಿದ್ದರು. ಇವುಗಳ ನಡುವೆ ನಡೆಯುತ್ತಿದ್ದ ಸಂಘರ್ಷವನ್ನು ಬಳಸಿಕೊಂಡ ಎರಡನೇ ಬಲ್ಲಾಳನು ಕಳಚೂರಿ ಅರಸ ಸೋವಿದೇವನ ಮಕ್ಕಳಾದ ಸಂಕಮ ಮತ್ತು ಅಹವಮಲ್ಲ ಹಾಗೂ ಕದಂಬ ಬ್ರಹ್ಮರಸನ ನೇತೃತ್ವದ ಮೈತ್ರಿ ಸೈನ್ಯವನ್ನು ಸೋಲಿಸಿ ಈ ಪ್ರದೇಶದ ಮೇಲೆ ಹಿಡಿತವನ್ನು ಸಾಧಿಸುತ್ತಾನೆ.[88] ಕಳಚೂರಿಗಳು ಮತ್ತು ಚಾಳುಕ್ಯರನ್ನು ಸೋಲಿಸಿದ ನಂತರ ತುಂಗಭದ್ರಾ ನದಿಯ ಪ್ರದೇಶವು ಹೊಯ್ಸಳರು ಮತ್ತು ದೇವಗಿರಿಯ ಯಾದವರ (ಸೇವುಣರು) ನಡುವಿನ ರಣರಂಗವಾಗಿ ಮಾರ್ಪಟ್ಟಿತು. ಈ ಪ್ರದೇಶದ ಮೇಲೆ ಹಿಡಿತ ಸಾಧಿಸಲು ಹೊಯ್ಸಳರು ಮತ್ತು ಸೇವುಣರು ಕ್ರಿ.ಶ.119ರಲ್ಲಿ ಧಾರವಾಡ ಜಿಲ್ಲೆಯ ಸೊರಟೂರಿನಲ್ಲಿ ಮುಖಾಮುಖಿಯಾದಾಗ ಈ ಯುದ್ಧದಲ್ಲಿ ಎರಡನೇ ಬಲ್ಲಾಳನು ಅಭೂತಪೂರ್ವ ವಿಜಯವನ್ನು ದಾಖಲಿಸಿದರೆ, ಸೇವುಣ ಐದನೇ ಬಿಲ್ಲಮನ ಸೈನ್ಯವು ಸೋಲನ್ನು ಒಪ್ಪಿಕೊಳ್ಳಬೇಕಾಗಿ ಬರಲಾಗಿ ತುಂಗಭದ್ರಾ ನದಿಯ ಪ್ರದೇಶದ ಬಹುಪಾಲು ಭಾಗವು ಹೊಯ್ಸಳ ಸುಪರ್ದಿಗೆ ಬಂದು ಬೀಳುತ್ತದೆ.[89] ಆದರೆ ಕ್ರಿ.ಶ.1195ರಲ್ಲಿ ಐದನೇ ಬಿಲ್ಲಮನ ಮಗನಾದ ಜೈಗುತಿಯು ಪನಃ ಹೊಯ್ಸಳರ ಮೇಲೆ ದಾಳಿ ಮಾಡಿದನಾದರೂ ಫಲ ಕಾಣದೇ ಎರಡನೇ ಬಲ್ಲಾಳನಿಂದ ಮತ್ತೊಮ್ಮೆ ಸೋಲಲ್ಪಟ್ಟನು.[90] ಈ ಯುದ್ಧದ ತರುವಾಯ ಬಲ್ಲಾಳನು ಲೊಕ್ಕಿಗುಂಡಿ (ಲಕ್ಕುಂಡಿ)ಯಲ್ಲಿ ಕೆಲವು ವರ್ಷ ನೆಲೆಸುತ್ತಾನೆ. ಈ ಲಕ್ಕುಂಡಿ ನಗರವು ಬಲ್ಲಾಳನು ಉತ್ತರದ ಪ್ರದೇಶಗಳ ಮೇಲೆ ದಾಳಿ ಮಾಡಲು, ಸೈನ್ಯವು ಬೀಡು

ಜೀಡುವುದಕ್ಕೆ ಪ್ರಮುಖ ಕೇಂದ್ರವಾಗಿದ್ದಿತು.[91] ಕ್ರಿ.ಶ.1212ರವರೆವಿಗೂ ಬೆಳ್ವೊಲ ಪ್ರಾಂತ್ಯದ ಮೇಲೆ ಎರಡನೇ ಬಲ್ಲಾಳನಿಗೆ ಹಿಡಿತವಿದ್ದರೂ ಸಹ, ನಂತರದ ಕಾಲಘಟ್ಟದಲ್ಲಿ ಸೇವುಣ ಅರಸ ಇಮ್ಮಡಿ ಸಿಂಘಣನು ಈ ಪ್ರದೇಶದ ಮೇಲೆ ತನ್ನ ಅಧಿಪತ್ಯವನ್ನು ಸ್ಥಾಪಿಸಿ ಹೊಯ್ಸಳರನ್ನು ತುಂಗಭದ್ರಾ ನದಿಯ ಕೆಳಭಾಗಕ್ಕೆ ಸೀಮಿತವಾಗಿಸಿದನು.[92] ಹೊಯ್ಸಳರ ಮೇಲಿನ ಈ ವಿಜಯನ ನೆನಪಿಗೆ ಸಿಂಘಣನು ಬೊಳ್ವೊಲ ಪ್ರಾಂತ್ಯದ ಗದಗಿನ ತ್ರಿಕೂಟೇಶ್ವರ ದೇವಾಲಯಕ್ಕೆ ದಾನವನ್ನೂ ಸಹ ನೀಡುತ್ತಾನೆ.[93] ಪುನಃ ಎರಡನೇ ಬಲ್ಲಾಳನು ತನ್ನ ಪತ್ನಿ ಉಮಾದೇವಿಯ ನೆರವಿನಿಂದ ಉತ್ತರಪ್ರದೇಶದ ಮೇಲೆ ಹಿಡಿತ ಸಾಧಿಸಲು ಪ್ರಯತ್ನಿಸಿದನಾದರೂ, ಇದೇ ಸಂದರ್ಭದಲ್ಲಿ ಸೇವುಣರೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದ ಬೆಳಗುತ್ತಿಯ ಸಿಂಧರು ಈತನ ಆಕಾಂಕ್ಷೆಗೆ ವಿರುದ್ಧವಾಗಿ ನಿಂತರು.[94] ಎರಡನೇ ಬಲ್ಲಾಳನು ತನ್ನ ಅಂತಿಮ ಕಾಲಘಟ್ಟದಲ್ಲಿ ಚೋಳರ ರಾಜಕೀಯದಲ್ಲಿ ತಲೆ ಹಾಕಬೇಕಾಯಿತು. ಕಾರಣ ಬಲ್ಲಾಳನು ಚೋಳರ ಅರಸಿ ಚೋಳ ಮಹಾದೇವಿಯನ್ನು ವಿವಾಹವಾಗಿದ್ದರ ಜೊತೆಗೆ ತನ್ನ ಮಗಳಾದ ಸೋಮಲದೇವಿಯನ್ನು ಮೂರನೇ ಕುಲೋತ್ತುಂಗ ಚೋಳನಿಗೆ ಕೊಟ್ಟು ವಿವಾಹ ನೆರವೇರಿಸಿದ್ದನು. ಇದೇ ಸಂದರ್ಭದಲ್ಲಿ ಪಾಂಡ್ಯರು ಚೋಳರಿಗೆ ಕಿರುಕುಳ ಕೊಡಲು ಪ್ರಾರಂಭಿಸಿ, ಚೋಳರನ್ನು ಅಧಿಕಾರದಿಂದ ದೂರವಿರಿಸುತ್ತಾರೆ. ಬಲ್ಲಾಳನು ಆಗ ತನ್ನ ಮಗ ಎರಡನೇ ನರಸಿಂಹನ ನೇತೃತ್ವದಲ್ಲಿ ಮಾರವರ್ಮ ಸುಂದರಪಾಂಡ್ಯನ ಮೇಲೆ ಯುದ್ಧ ಮಾಡಿಸಿ ಚೋಳರಿಗೆ ಪುನಃ ಅಧಿಕಾರ ಧಕ್ಕುವಂತೆ ಮಾಡುವುದರೊಂದಿಗೆ 'ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಧರಿಸಿದನು.[95] ಹೊಯ್ಸಳ ಅರಸರಲ್ಲಿಯೇ ಸಮರ್ಥ ಆಡಳಿತಗಾರನಾಗಿದ್ದ ವೀರಬಲ್ಲಾಳನ ಅಭೂತಪೂರ್ವ ಆಳ್ವಿಕೆಯ ಅವಧಿಯು ಕ್ರಿ.ಶ.1220ಕ್ಕೆ ಕೊನೆಗೊಳ್ಳುತ್ತದೆ, ನಂತರ ಈತನ ಮಗ ಎರಡನೇ ನರಸಿಂಹನು ಹೊಯ್ಸಳ ಸಿಂಹಾಸನವನ್ನು ಏರಿದನು.

ಹಾಸನ ತಾಲೂಕಿನಲ್ಲಿ ಎರಡನೇ ಬಲ್ಲಾಳನು ಆಳ್ವಿಕೆ ನಡೆಸಿ, ದೇವಾಲಯಗಳನ್ನು ನಿರ್ಮಿಸಿ, ದಾನ ದತ್ತಿಗಳನ್ನು ನೀಡಿರುವುದಕ್ಕೆ ಸಂಬಂಧಿಸಿದಂತೆ ಸಾಕಷ್ಟು ಸಂಖ್ಯೆಯ ಶಾಸನಗಳು ಲಭ್ಯವಾಗಿವೆ. ಹಾಸನ ತಾಲೂಕಿನ ಹೊನ್ನಾವರದಲ್ಲಿ ಕಂಡು ಬಂದಿರುವ ಕ್ರಿ.ಶ.1173ರ ಶಾಸನವು[96] ಮಹಾಪ್ರಧಾನ, ಸರ್ವಾಧಿಕಾರಿ, ಹೆಗ್ಗಡೆ ಲಕ್ಮಯ್ಯನು ಎರಡನೇ ಬಲ್ಲಾಳನಿಂದ ಪೋವಿಂಗಾವೆಯ ಅಸಗಟ್ಟವನ್ನು ಧಾರಾಪೂರ್ವಕವಾಗಿ ಪಡೆದು, ಇದರ ಕೆರೆಯ ಕೆಳಗಿನ ಭೂಮಿಯನ್ನು ಹೊನ್ನಾವರದ ಕೇಶವ ದೇವರಿಗೆ ಮತ್ತು ಹತ್ತು ಬ್ರಾಹ್ಮಣರಿಗೆ ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ. ಕ್ರಿ.ಶ.1173ರ ಕಿತ್ತನಕೆರೆ ಶಾಸನವು[97] ಇಮ್ಮಡಿ ಬಲ್ಲಾಳನ ಅರಸಿ ಉಮಾದೇವಿಯ ಹಿರಿಯ ಮನೆವೆರ್ಗ್ಗಡೆಯಾದ ಕೇಶಿಮಯ್ಯನು, ಉದ್ದಿಂಗಪಾಳದೇವನು ಕಟ್ಟಿಸಿದ ಸಿದ್ದೇಶ್ವರ ದೇವಾಲಯಕ್ಕೆ ದಾನ ನೀಡಿದ ವಿಚಾರವನ್ನು ದಾಖಲಿಸುತ್ತದೆ. ಈ

ದಾನವನ್ನು ಸ್ವೀಕರಿಸಿದ ಈಶ್ವರಜೀಯು ಉದ್ಧಿಂಗಪಾಳದೇವರ ಮಗ (ಶಿಷ್ಯ) ಎಂದು ತಿಳಿದು ಬರುತ್ತದೆ. ಈ ಶಾಸನವು ವೀರಬಲ್ಲಾಳನು ಸೇವುಣರು ಮತ್ತು ಪಾಂಡ್ಯರ ಮೇಲೆ ವಿಜಯ ಸಾಧಿಸಿದ ಅಂಶಗಳ ಜೊತೆಗೆ ಹೊಯ್ಸಳ ರಾಜ್ಯವು ಕಲ್ಯಾಣದವರೆಗೂ ವಿಸ್ತರಿಸಿತ್ತೆಂದು ಉಲ್ಲೇಖಿಸುತ್ತದೆ. ಬಲ್ಲಾಳನ ಬಿರುದುಗಳು ಮತ್ತು ಈತನವರೆಗಿನ ಹೊಯ್ಸಳ ಅರಸರನ್ನು ವರ್ಣಿಸುವ ಈ ಶಾಸನವು ಕಿತ್ತನಕೆರೆಯ ಗ್ರಾಮದ ಕೆರೆಯ ಕೆಳಗಿನ ಭೂಮಿಯನ್ನು ಹಾಗೂ ಒಂದು ಕೈಗಾಣವನ್ನು ಸಿದ್ದೇಶ್ವರ ದೇವಾಲಯಕ್ಕೆ ನೀಡಿದ ವಿಚಾರಗಳನ್ನು ಪ್ರಮುಖವಾಗಿ ಉಲ್ಲೇಖಿಸುತ್ತದೆ. ಕ್ರಿ.ಶ.1173ರ ಕೋರವಂಗಲದ ಶಾಸನವು[98] ಎರಡನೇ ಬಲ್ಲಾಳನ ಪಟ್ಟಾಭಿಷೇಕದ ದಿನದಂದೇ ಮಹಾಪ್ರಧಾನ ಶ್ರೀಕರಣ, ಹೆಗ್ಗಡೆ ಬೂಚಯ್ಯನು (ಬೂಚಿರಾಜ) ಅರಸನಿಂದ ಭೂಮಿಯನ್ನು ಕೊಂಡು ಬೂಚೇಶ್ವರ ದೇವಾಲಯಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಈ ಬೂಚಿರಾಜನು ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲೇ ಪ್ರಧಾನನಾಗಿದ್ದು, ಶ್ರೀವತ್ಸ ಗೋತ್ರದವನೂ, ತನ್ನ ಅರಸ ನರಸಿಂಹನ ಹೆಸರನ್ನೇ ತನ್ನ ಮಗನಿಗೂ ಇಟ್ಟನೆಂದೂ ತಿಳಿದು ಬರುತ್ತದೆ. ದಾನಿಯು ತನ್ನ ಅರಸ ವೀರಬಲ್ಲಾಳ ದೇವರಿಗೆ 200 ಸೇಸೆ ಗದ್ಯಾಣವನ್ನು ಕೊಟ್ಟು ಹಿರಿಯ ಅಗ್ರಹಾರವಾದ ಶಾಂತಿಗ್ರಾಮದ ಎರಡು ತೋಟ, ಕೋರವಂಗಲದ ಮೂರು ದಶಕದ ಬಳಿಯ ಗದ್ದೆ ಮತ್ತು ತೋಟವನ್ನು ಖರೀದಿಸಿ ಬೂಚೇಶ್ವರ ದೇವಾಲಯಕ್ಕೆ ದಾನದ ಪ್ರತಿಗ್ರಾಹಿಯಾಗಿ ದೋರಸಮುದ್ರದ ಕಪಿಲತೀರ್ಥದ ದೇವಶಕ್ತಿ ಪಂಡಿತರಿಗೆ ಧಾರಾಪೂರ್ವಕವಾಗಿ ದಾನ ನೀಡಿದ ವಿಚಾರ ಶಾಸನ ಪಠ್ಯದಿಂದ ತಿಳಿದು ಬರುತ್ತದೆ. ಮರ್ಕುಲಿ ಗ್ರಾಮದ ಕ್ರಿ.ಶ.1173ರ ಶಾಸನವು[99] ಇಮ್ಮಡಿ ಬಲ್ಲಾಳನ ಪಟ್ಟಾಭಿಷೇಕದ ಸಮಯದಲ್ಲಿ ಸಂಧಿವಿಗ್ರಹಿ ಬೂಚಿಮಯ್ಯನು ಮರಿಲಿ (ಮರ್ಕುಲಿ) ಗ್ರಾಮದಲ್ಲಿ ತ್ರಿಕೂಟ ಜಿನಾಲಯವನ್ನು ಕಟ್ಟಿಸಿ ದ್ರಮಿಳ ಸಂಘ ಮತ್ತು ಅರುಂಗಳಾನ್ವಯಕ್ಕೆ ಸೇರಿದ ಶ್ರೀಪಾಳತ್ರೈವಿದ್ಯದೇವನ ಶಿಷ್ಯನಾದ ವಾಸುಪೂಜ್ಯ ಸಿದ್ಧಾಂತದೇವನ ಕಾಲಂಕರ್ಚಿ ಸೀಗೆನಾಡಿನ ಮರಿಕಲಿ ಗ್ರಾಮವನ್ನು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಬಹುಮಟ್ಟಿಗೆ ಜೈನಮತದತ್ತ ಒಲವುಳ್ಳ ಈತನನ್ನು ವಾಚಕವಾಚಸ್ಪತಿ, ಕಾವ್ಯದಲ್ಲಿ ರಸಾಭಿವ್ಯಕ್ತಿ ಪರಿಣತ, ಸಂಸ್ಕೃತ ಹಾಗೂ ಕನ್ನಡ ಕಾವ್ಯರಚನೆಯಲ್ಲಿ ನಿಪುಣ ಎಂದು ವರ್ಣಿಸಲಾಗಿದೆ. ಕನ್ನಡ ಕುಲಕ್ಕೆ ಸೇರಿದ ಈತನ ಪತ್ನಿಯ ತಂದೆ ಭರತ ಮತ್ತು ದೊಡ್ಡಪ್ಪ ಮರಿಯಾನೆ ಎಂಬುದು ತಿಳಿದು ಬರುತ್ತದೆ. ಹೆರಗು ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1174ರ ಶಾಸನವು[100] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಜಕ್ಕವ್ವೆಯು ನಿರ್ಮಿಸಿದ ಬಸದಿಗೆ 24 ಗದ್ಯಾಣಗಳಿಗೆ ಸಮವಾಗುವ ಭೂಮಿಯನ್ನು ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ. ಜಕ್ಕೇನಹಳ್ಳಿ ಗ್ರಾಮದ ಕ್ರಿ.ಶ.1176ರ ಶಾಸನವು[101] ವೀರಬಲ್ಲಾಳನ ಹಿರಿಯ ಅರಸಿ ಕೇತಲಾದೇವಿಯ ಅಪ್ಪಣೆಯ ಮೇರೆಗೆ ಹೆಗ್ಗಡೆ ಬಿಟ್ಟಿಯಣ್ಣ

ಮತ್ತು ಹೆಗ್ಗಡೆ ಬಿಟ್ಟಿಯಣ್ಣ ಮತ್ತು ಹೆಗ್ಗಡೆ ಮಲ್ಲಯಣ್ಣನು ಕಾಳೇಶ್ವರ ದೇವಾಲಯದ ನಂದಾದೀವಿಗೆಗೆ ಕೈಗಾಣವನ್ನು ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ. ಕಬ್ಬಿನಹಳ್ಳಿ ಗ್ರಾಮದಲ್ಲಿರುವ ಕ್ರಿ.ಶ.1178ರ ವೀರಗಲ್ಲು ಶಾಸನವು[102] ಹೊಯ್ಸಳ ಬಿಟ್ಟಿದೇವನ ಕಾಲದಲ್ಲಿ ಏಚಗಾವುಂಡನ ಅಳಿಯ ಮಂಜಗಾವುಂಡನು ಮಡಿದಾಗ, ವೀರಬಲ್ಲಾಳನ ಕಾಲದಲ್ಲಿ ಮಲ್ಲಗಾವುಂಡನ ಮಗ ಮರಗಾವುಂಡ, ಮಾವಣ, ಏಚಣರು ವೀರಗಲ್ಲು ಶಾಸನವನ್ನು ಹಾಕಿಸಿದುದರ ಬಗ್ಗೆ ತಿಳಸುತ್ತದೆ. ಹೊನ್ನಮ್ಮನಹಳ್ಳಿಯಲ್ಲಿ ಕಂಡು ಬಂದಿರುವ ಕ್ರಿ.ಶ.1178ರ ಶಾಸನವು[103] ದುದ್ದದ ಹೊನ್ನುಡುಕೆ ದೇವಿಗೆ, ದುದ್ದದ ಹಿರಿಯ ಕೆರೆಯ ಕೆಳಗಿನ ಗದ್ದೆ, ಹಳೆಯ ತೂಬಿನ ಬಳಿಯ ಹೂದೋಟ, ಬಮ್ಮೆಯನಹಳ್ಳಿ ಸೀಮೆಯ ಗದ್ದೆ ಮತ್ತು ಹೊಲವನ್ನು ದಾನ ನೀಡಿದ ಬಗ್ಗೆ ತಿಳಸುತ್ತದೆ. ಹೆರಗು ಗ್ರಾಮದ ಕ್ರಿ.ಶ.1183ರ ಶಾಸನವು[104] ಮಾಚಿಸೆಟ್ಟಿಯು ಮಯ್ಯೆನಾಡ ಗವುಡರು ಮತ್ತು ಪ್ರಜೆಗಳ ಎದುರು ಸೋಮೇಶ್ವರ ದೇವಾಲಯಕ್ಕೆ 10 ಕೊಳಗಳಗೆ ಸಮವಾಗುವ ಜಮೀನನ್ನು ದಾನ ನೀಡಿದ ವಿಚಾರ ತಿಳದು ಬರುತ್ತದೆ. ಕ್ರಿ.ಶ.1194ರ ಕಾಲಮಾನದ ದೊಡ್ಡಗದ್ದವಳ್ಳಿಯ ಶಾಸನವು[105] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಜೇಡದೆರೆಯ ಹೆಗ್ಗಡೆ ಹೊಲ್ಲೆಯನಾಥನ ತಮ್ಮ ಹೆಗ್ಗಡೆ ನಾಗಯ್ಯನು ಲಕ್ಷ್ಮೀದೇವಿ, ಮಹಾಕಾಳೀದೇವಿ ಮತ್ತು ಶ್ರೀಭೂತನಾಥ ದೇವರ ಶ್ರೀಕಾರ್ಯಕ್ಕೆ ತಲಾ ಎರಡೆರಡು ಮಗ್ಗ ಹಾಗೂ ಭೂತನಾಥ ದೇವರ ಪೂಜಾರಿ ಲಕ್ಷ್ಮಯ್ಯನಿಗೆ ಒಂದು ಮಗ್ಗವನ್ನು ದಾನವಿತ್ತ ಅಂಶವನ್ನು ದಾಖಲಿಸುತ್ತದ. ಕಿತ್ತನಕೆರೆಯಲ್ಲಿ ಕಂಡು ಬಂದಿರುವ ಕ್ರಿ.ಶ.1196ರ ಶಾಸನವು[106] ಹಾರುವನಹಳ್ಳಿಯ ದಾರಿಯಲ್ಲಿ ಮೇಲೆರಗಿದ ಕಳ್ಳರಿಂದ ಸ್ತ್ರೀಯರನ್ನು ರಕ್ಷಿಸಲು ಮಾಳಯ್ಯನ ಮಗ ಸೋಮಯ್ಯನು ಮತ್ತು ಈತನ ಜೊತೆಗೂಡಿ ಹೋರಾಡಿದ ಬೆಚ್ಚೆಯಮಾವನು ಮರಣ ಹೊಂದಿದ ವಿಷಯವನ್ನು ತಿಳಸುತ್ತದೆ. ಮೃತವೀರ ಸೋಮಯ್ಯನ ಹಿರಿಯ ಸಹೋದರ ಕಲ್ಲಯ ಮತ್ತು ತಮ್ಮನಾದ ಬೆನಚೆಯರು ವೀರಗಲ್ಲನ್ನು ನಿಲ್ಲಿಸಿ, ಇದರ ಅಲಂಕರ ಮತ್ತು ನೈವೇದ್ಯಕ್ಕೆ ಭೂದಾನ ನೀಡಿದ ಅಂಶ ಶಾಸನ ಪಠ್ಯದಿಂದ ತಿಳದು ಬಂದಿದೆ. ಕ್ರಿ.ಶ.12ನೇ ಶತಮಾನದ ಕೋರವಂಗಲದ ವೀರಗಲ್ಲು ಶಾಸನವು[107] ವೀರಬಲ್ಲಾಳನ ಆಳ್ವಿಕೆಯನ್ನು ಉಲ್ಲೇಖಿಸಿದ್ದು, ಕೋರವಂಗಲ ಮತ್ತು ದುದ್ದದ ನಡುವಿನ ಗಡಿಕಾಳಗದಲ್ಲಿ ಬಿಟ್ಟಿಯೋಜನ ಮಕ್ಕಳಾದ ಬಮ್ಮೋಜ, ಮಸಣೋಜರು ಮರಣ ಹೊಂದಿದ ವಿಚಾರ ಮತ್ತು ಇವರ ಕುಟುಂಬಗಳ ಜೀವನಕ್ಕಾಗಿ ಶಾಂತಿಗ್ರಾಮ ಅಗ್ರಹಾರದ ಮಹಾಜನರು ಹಾಗೂ ಪ್ರಜಾಗಾವುಂಡರು ದತ್ತಿಯೊಂದನ್ನು ನೀಡಿರುವಂತೆ ತಿಳಸುತ್ತದೆ. ದೊಡ್ಡಗದ್ದವಳ್ಳಿಯ ಕ್ರಿ.ಶ.1200ರ ಶಾಸನವು[108] ವೀರಬಲ್ಲಾಳನು ತುಂಗಭದ್ರಾ ತೀರದಲ್ಲಿರುವಾಗಲೇ ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀದೇವಿ, ಮಹಾಕಾಳ ಮತ್ತು ಭೂತನಾಥ ದೇವರಿಗೆ ಜಾಗರವಳ್ಳಿ

ಗ್ರಾಮವನ್ನು ತೆರಿಗೆ ರಹಿತವಾದಿ ದಾನ ನೀಡಿದ ವಿಚಾರವನ್ನು ಉಲ್ಲೇಖಿಸುತ್ತದೆ. ದೊಡ್ಡಗದ್ದವಳ್ಳಿಯ ಕ್ರಿ.ಶ.1209ರ ಶಾಸನವು[109] ಸಂಕಾಧಿಕಾರಿ ಹೆಗ್ಗಡೆ ಸೋಮಯ್ಯನು ಶ್ರೀಮಹಾಲಕ್ಷ್ಮೀದೇವಿ, ಶ್ರೀಮಹಾಕಾಳ ಮತ್ತು ಭೂತನಾಥದೇವರಿಗೆ ಘಟ್ಟಡವಿಯ ಹಳ್ಳಿಗಳ ಆನೆ, ಕುದುರೆ, ಅಡಿಕೆ, ಅರಿಶಿಣ, ಮೆಣಸು, ಏಲಕ್ಕಿ ಮತ್ತು ಉಪ್ಪಿನ ತೆರಿಗೆಯನ್ನು ದಾನ ನೀಡಿದ ವಿಚಾರಗಳನ್ನು ತಿಳಿಸುತ್ತದೆ. ಕುದುರೆಗುಂಡಿ ಗ್ರಾಮದ ಕ್ರಿ.ಶ.1191ರ ವೀರಗಲ್ಲು ಶಾಸನದಿಂದ[110] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಭಂಡಿಮಿಟ್ಟೆಯ ಘಟ್ಟದಲ್ಲಿ ಮಸಣೋಜ ಎಂಬಾತನು ಕಳ್ಳರೊಡನೆ ಹೋರಾಡಿ ವೀರಮರಣವನ್ನು ಹೊಂದಿದಾಗ ಈತನ ಸಹೋದರ ಹೆಣ್ಣೋಜನು ವೀರಗಲ್ಲನ್ನು ನಿರ್ಮಿಸಿದನೆಂದು ತಿಳಿದು ಬಂದಿದೆ. ಶಾಂತಿಗ್ರಾಮದ ಕ್ರಿ.ಶ.1191ರ ಕಾಲಮಾನದ ಶಾಸನವು[111] ವೀರಬಲ್ಲಾಳನು ಶಾಂತಿಗ್ರಾಮದ ವರದನರಸಿಂಹ ದೇವಾಲಯಕ್ಕೆ ತಾಮ್ರಶಾಸನವೊಂದನ್ನು ನೀಡಿ, ಸಿದ್ಧಾಯದಿಂದ ಬರುವ ಹಣದ ಒಂದು ಭಾಗವನ್ನು ದಾನ ನೀಡಿದ ಉಲ್ಲೇಖವಿದೆ. ದಾನದ ಪ್ರತಿಗ್ರಾಹಿಗಳಾದ ಸ್ಥಳದ ಮಹಾಜನರು ಎರಡು ವೃತ್ತಿಗಳ ಭೂಮಿಯನ್ನು ಹಾಗೂ ಹಿರಿಯೂರನ್ನು ತಾವು ಪಡೆದ ಹಣಕ್ಕೆ ಪ್ರತಿಯಾಗಿ ಕೊಟ್ಟರು. ಅಲ್ಲದೇ ಸಂಗ್ರಹಿಸಲಾದ ತೆರಿಗೆಯ ಮೊತ್ತದಿಂದ ಹತ್ತು ಹೊನ್ನುಗಳನ್ನು ದೇವಾಲಯದ ಸ್ಥಾನಪತಿಯಾದ ಅಚಳಪ್ರಕಾಶಸ್ವಾಮಿಗೆ ನೀಡಿದರೆಂಬುದು ಶಾಸನ ಪಠ್ಯದಿಂದ ತಿಳಿದು ಬರುತ್ತದೆ. ಇಲ್ಲಿ ಉಲ್ಲೇಖಿತವಾಗಿರುವ ಅಚಳ ಪ್ರಕಾಶನು ಕಾಶಿಯಿಂದ ಬಂದವನೆಂದೂ, ಪರಮಹಂಸ ಮತ್ತು ಸರಸ್ವತಿ ಭಟ್ಟ ನಾರಾಯಣಸ್ವಾಮಿಯ ಶಿಷ್ಯನೂ ಆಗಿದ್ದನೆಂದೂ, ವೇದ ವೇದಾಂತಗಳಲ್ಲದೇ ಹಲವು ಶಾಸ್ತ್ರಗಳಲ್ಲಿ ಮತ್ತು ಹಿರಣ್ಯಗರ್ಭ, ಕಾಪಿಲ ಹಾಗೂ ಪಾತಂಜಲಿ ಮುಂತಾದ ಯೋಗ ವಿದ್ಯೆಗಳಲ್ಲೂ ವಿದ್ವಾಂಸರೂ ಪರಿಣಿತನೂ ಆಗಿದ್ದನೆಂದು ತಿಳಿದು ಬರುತ್ತದೆ.[112] ಹೆರಗು ಗ್ರಾಮದ ಕ್ರಿ.ಶ.1217ರ ಶಾಸನವು[113] ವೀರಬಲ್ಲಾಳನ ಬಿರುದಾವಳಿಗಳನ್ನು ವರ್ಣಿಸಿದ್ದು ಈತನು ಜಾನಾಮಮಹಾಗ್ರಹಾರಕ್ಕೆ ನಿಕಟವರ್ತಿಯಾಗಿ ಆಳ್ವಿಕೆ ಮಾಡುತ್ತಿರುವಾಗ ತಂತ್ರಾಧಿಷ್ಟಾಯಕ, ಮಹಾಪಸಾಯಿತ, ಪರಮವಿಶ್ವಾಸಿ, ಮಾಯಿದೇವೀವಲ್ಲಭ, ಆತ್ರೇಯ ಗೋತ್ರದ ಅವತಾರಭಟ್ಟಯ್ಯನಾಯಕನು ಲಕ್ಷ್ಮೀನಾರಾಯಣ ದೇವಾಲಯವನ್ನು ನಿರ್ಮಿಸಿ ಬಿಟ್ಟೆಯನಹಳ್ಳಿ ಮತ್ತು ಬಾಹುಬಲಿಹಳ್ಳಿ ಎಂಬ ಎರಡು ಗ್ರಾಮಗಳು ಮತ್ತು ಪಿಂಡದಾನವಾಗಿ 40 ಗದ್ಯಾಣಗಳನ್ನು ಅರಸನಿಂದ ಪಡೆದು ಹೆರಗಿನ ದೇವಾಲಯಕ್ಕೆ ಸಮಸ್ತ ಪ್ರಜೆಗಳ ಎದುರು ದಾನ ನೀಡಿದನೆಂಬುದನ್ನು ತಿಳಿಸುತ್ತದೆ. ಕ್ರಿ.ಶ.1218ರ ದೊಡ್ಡಗದ್ದವಳ್ಳಿಯ ಶಾಸನವು[114] ವೆಡ್ಡವ್ಯವಹಾರಿ ಗೊಲ್ಲೆಯನಾಯಕನ ತಂಗಿ ಸಿರಿಯಾದೇವಿಯು ಲಕ್ಷ್ಮೀದೇವಿ, ಮಹಾಕಾಳಿದೇವಿ ಮತ್ತು ಶ್ರೀಭೂತನಾಥ ದೇವರ ಶ್ರೀಕಾರ್ಯಕ್ಕೆ ಆಭರಣಗಳನ್ನು ಮಾಡುವವರ ಜೀವನಕ್ಕೆ ದೇವಿಹಳ್ಳಿಯ ಕೆಲವು ಭೂಮಿಯನ್ನು ದಾಣ ನೀಡಿದ್ದರ ಬಗ್ಗೆ ಉಲ್ಲೇಖಿಸುತ್ತದೆ. ಹೆರಗು ಗ್ರಾಮದ ಕ್ರಿಶ.1218ರ

ಶಾಸನವು[115] ವೀರಬಲ್ಲಾಳನ ಬಿರುದುಗಳನ್ನು ವರ್ಣಿಸುವುದರ ಜೊತೆಗೆ ಈತನು ನಿಡುಗಲ್ಲು ಪೆದೇಶದ ಗಿರಿದುರ್ಗ ಸ್ಥಳದಲ್ಲಿ ನಿಕಟವರ್ತಿಯಾಗಿ ಆಳ್ವಿಕೆ ಮಾಡುತ್ತಿರುವಾಗ ಶ್ರೀಮತ್ಸಾವಾಸಿ, ತಂತ್ರಾಧಿಷ್ಟಾಯಕ, ಮಹಾಪಸಾಯತ, ಪರಮವಿಶ್ವಾಸಿ ಜಯಭಟ್ಟಯ್ಯ ನಾಯಕನು ಶ್ರೀ ಜೈತನಾರಾಯಣ ದೇವಾಲಯವನ್ನು ನಿರ್ಮಿಸಿ ಅರಸನಿಂದ ಆನೆಹಳ್ಳಿ ಎಂಬ ಗ್ರಾಮ ಮತ್ತು 40 ಗದ್ಯಾಣವನ್ನು ಪಡೆದು ಜೈತನಾರಾಯಣ ದೇವರಿಗೆ ದಾನ ನೀಡಿದನೆಂದು ಹಾಗೂ ಈ ಶಾಸನವನ್ನು ಕೆತ್ತಿದ ರೂವಾರಿಗಳು ಪೆಮ್ಮೋಜ ಮತ್ತು ಮಸಣೋಜರು ಎಂಬುದನ್ನು ತಿಳಿಸುತ್ತದೆ. ಇದೇ ಗ್ರಾಮದಲ್ಲಿ ಕಂಡು ಬಂದಿರುವ ಶಾಸನವು[116] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಹೆರಗಿನ ಸುಂಕದ ಹೆಗ್ಗಡೆ ಬಾಚರಸನು ಅರ್ಕೇಶ್ವರ ದೇವಾಲಯದ ನಂದಾದೀವಿಗೆಗೆ ಎತ್ತು ಗಾಣವೊಂದನ್ನು ದಾನವಿತ್ತ ಅಂಶವನ್ನು ದಾಖಲಿಸುತ್ತದೆ. ಶಾಂತಿಗ್ರಾಮದಲ್ಲಿ ಕಂಡು ಬಂದಿರುವ ಶಾಸನದಲ್ಲಿ[117] ಇದನ್ನು ಕೆತ್ತಿಸಿದ ಕಾಲಮಾನದ ಉಲ್ಲೇಖ ಕಂಡು ಬರುವುದಿಲ್ಲ. ಆದರೂ ಇದರಲ್ಲಿ ಹೊಯ್ಸಳರ ಪ್ರಾರಂಭದ ಅರಸರಿಂದ ಎರಡನೇ ಬಲ್ಲಾಳನವರೆಗೂ ಇವರ ಆಳ್ವಿಕೆಯನ್ನು ವರ್ಣಿಸಿರುವುದರಿಂದ ಹಾಗೂ ಇದೇ ಗ್ರಾಮದಲ್ಲಿ ಕಂಡು ಬಂದಿರುವ ಎರಡನೇ ಬಲ್ಲಾಳನ ಕಾಲದ ಶಾಸನದಲ್ಲಿ[118] ಉಲ್ಲೇಖಿತವಾಗಿರುವ ಅಚಳ ಪ್ರಕಾಶ ಎಂಬ ವ್ಯಕ್ತಿಯ ಹೆಸರು ಇದೇ ಶಾಸನದಲ್ಲಿ ಪುನಃ ಪ್ರಸ್ತಾಪಿತವಾಗಿ ವಿಶೇಷವಾಗಿ ವರ್ಣಿಸಲ್ಪಟ್ಟಿರುವುದರಿಂದ ಈ ಶಾಸನ ಸ್ಪಷ್ಟವಾಗಿ ಎರಡನೇ ಬಲ್ಲಾಳನ ಆಳ್ವಿಕೆಯನ್ನು ಪ್ರತಿನಿಧಿಸುತ್ತದೆ. ಈ ಅಚಳ ಪ್ರಕಾಶ ಎಂಬ ವ್ಯಕ್ತಿಯು ಎರಡನೇ ಬಲ್ಲಾಳ ಮತ್ತು ಎರಡನೇ ನರಸಿಂಹನ ರಾಜಗುರುವಾಗಿ ಕಾಣಿಸಿಕೊಂಡಿದ್ದು ವೇದ-ಶಾಸ್ತ್ರಗಳಲ್ಲಿ ಪರಿಣಿತನೂ ಆಗಿದ್ದು ಶಾಂತಿಗ್ರಾಮದಲ್ಲಿ ಯೋಗನರಸಿಂಹ ದೇವಾಲಯವನ್ನು ನಿರ್ಮಿಸಿದಾಗ ವೀರಬಲ್ಲಾಳನು ತಾಮ್ರಶಾಸನವನ್ನು ನಿರ್ಮಿಸಿ ದಾನ ನೀಡಿದ ವಿಚಾರಗಳು ಈ ಶಾಸನ ಪಠ್ಯದಿಂದ ವಿಧಿತವಾಗುತ್ತದೆ. ಮಲ್ಲಿಗೆವಾಳು ಗ್ರಾಮದಲ್ಲಿ ಕಂಡು ಬಮದಿರುವ ವೀರಗಲ್ಲು ಶಾಸನವು[119] ವೀರಬಲ್ಲಾಳನ ಬಿರುದುಗಳನ್ನು ವರ್ಣಿಸುವುದರ ಜೊತೆಗೆ ಈತನ ಹಿರಿಯ ಅರಸಿ ಬೊಮ್ಮಲಾದೇವಿಯ ಹೆಸರನ್ನು ಉಲ್ಲೇಖಿಸುತ್ತದೆ.

ಎರಡನೇ ಬಲ್ಲಾಳನು ಹೊಯ್ಸಳ ಅರಸರಲ್ಲೇ ಅಪ್ರತಿಮ ಹಾಗೂ ಸಮರ್ಥ ಹೋರಾಟಗಾರನಾಗಿದ್ದು ಹೊಯ್ಸಳ ರಾಜ ಮನೆತನಕ್ಕೆ ಒಂದು ಸ್ವತಂತ್ರ ರಾಜ್ಯದ ಭೂಮಿಕೆಯನ್ನು ಹಾಕುವಲ್ಲಿ ಯಶಸ್ವಿಯಾದನು. ಈತನು ಕೇವಲ ಯುದ್ಧೋತ್ಸಾಹಿ. ಪರಾಕ್ರಮಿಯಾಗಿರದೇ ಉತ್ತಮ ಕಲಾಭಿರುಚಿಯುಳ್ಳ ವ್ಯಕ್ತಿಯೂ ಆಗಿದ್ದು ತನ್ನ ಆಳ್ವಿಕೆಯಲ್ಲಿ ಸರ್ವಧರ್ಮಸಹಿಷ್ಣುವಾಗಿ ಹಲವಾರು ಶೈವ ಮತ್ತು ವೈಷ್ಣವ ದೇವಾಲಯಗಳು ಹಾಗೂ ಜೈನ ಬಸದಿಗಳನ್ನು ನಿರ್ಮಿಸಿದನು. ಎರಡನೇ ಬಲ್ಲಾಳನಿಗೆ ಕುವರಲಕ್ಷ್ಮನ ನೇತೃತ್ವದ 'ಗರುಡ' ರೆಂಬ

ವಿಶೇಷ ಸೈನ್ಯಪಡೆಯೇ ಇದ್ದು, ಇದು ತನ್ನ ಅರಸನಿಗೋಸ್ಕರ ಎಂತಹ ತ್ಯಾಗ, ಬಲಿದಾನಕ್ಕೂ ಸಿದ್ಧವಾಗಿರುತ್ತಿತ್ತು. ಬಲ್ಲಾಳನು ಕ್ರಿ.ಶ.1220ರಲ್ಲಿ ಮಡಿದಾಗ ಗರುಡ ಕುವರಲಕ್ಷ್ಮ ಈತನ ಪತ್ನಿ ಸುಗ್ಗಲದೇವಿ ಸೇರಿದಂತೆ ಇತರೆ ಒಂದು ಸಾವಿರ ಗರುಡರು ತಮ್ಮ ಆತ್ಮಬಲಿದಾನ ಮಾಡಿಕೊಂಡರೆಂಬುದು ತಿಳಿದು ಬರುತ್ತದೆ.[120, 121] ಸುಮಾರು ಮೂರು ದಶಕಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದ ಎರಡನೇ ಬಲ್ಲಾಳನ ಆಳ್ವಿಕೆಯು ಕ್ರಿ.ಶ.1220ರಲ್ಲಿ ಈತನ ಮರಣದ ಮೂಲಕ ಅಂತ್ಯವಾದಾಗ ಇದೇ ವರ್ಷ ಇವನ ಮಗ ಎರಡನೇ ನರಸಿಂಹನು ಹೊಯ್ಸಳ ರಾಜ್ಯದ ಚುಕ್ಕಾಣಿಯನ್ನು ಹಿಡಿದನು.[122]

**ಎರಡನೇ ನರಸಿಂಹ (ಕ್ರಿ.ಶ.1220-1235)**

ಎರಡನೇ ಬಲ್ಲಾಳನ ನಂತರ ರಾಣಿ ಪದ್ಮಲಾದೇವಿಯ ಪುತ್ರ ಎರಡನೇ ನರಸಿಂಹನು ಹೊಯ್ಸಳ ಅಧಿಪತ್ಯವನ್ನು ವಹಿಸಿಕೊಳ್ಳುತ್ತಾನೆ. ಈತನು ಕೇವಲ ಆರು ವರ್ಷದ ಬಾಲಕನಾಗಿದ್ದಾಗಲೇ ತಂದೆ ಇಮ್ಮಡಿ ಬಲ್ಲಾಳನು ಈತನನ್ನು ಹೊಯ್ಸಳ ರಾಜ ಮನೆತನದ ಯುವರಾಜನನ್ನಾಗಿ ಘೋಷಿಸಿದ್ದನೆಂಬುದು ತಿಳಿದು ಬರುತ್ತದೆ.[123] ಎರಡನೇ ನರಸಿಂಹನು ತನ್ನ ತಂದೆ ವೀರಬಲ್ಲಾಳನಂತೆಯೇ ಸಮರ್ಥ ಆಡಳಿತಗಾರ ಮತ್ತು ಪರಾಕ್ರಮಿಯಾಗಿದ್ದು, ತಮಿಳುನಾಡಿನ ಕೆಲವು ಭಾಗಗಳ ಮೇಲೆ ಸಾರ್ವಭೌಮತ್ವವನ್ನು ಸ್ಥಾಪಿಸಿ ಹಲವು ವರ್ಷಗಳ ಕಾಲ ಆಡಳಿತ ನಡೆಸಿದ್ದು ಈತನ ವೈಶಿಷ್ಟ್ಯವಾಗಿದೆ. ಪ್ರಾರಂಭದ ಹೊಯ್ಸಳ ಅರಸರಿಂದ ವಿಷ್ಣುವರ್ಧನನವರೆಗೂ ಚೋಳರ ನಡುವೆ ವೈರತ್ವವಿದ್ದು, ಎರಡನೇ ಬಲ್ಲಾಳನು ಚೋಳ ಅರಸಿ ಮಹಾದೇವಿಯನ್ನು ವಿವಾಹವಾಗಿದ್ದರಿಂದ ಇವರ ನಡುವೆ ಸೌಹಾರ್ದಯುತ ವಾತಾವರಣವಿತ್ತು. ಇಂಥ ಸಂದರ್ಭದಲ್ಲಿ ಮಧುರೆಯ ಪಾಂಡ್ಯರು ಮೂರನೇ ಕುಲೋತ್ತುಂಗ ಚೋಳನಿಗೆ ಕಿರುಕುಳ ನೀಡಿ ಅಧಿಕಾರವನ್ನು ಕಿತ್ತುಕೊಂಡಾಗ ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲೇ ಎರಡನೇ ನರಸಿಂಹನು ಪಾಂಡ್ಯರನ್ನು ಸೋಲಿಸಿ ಚೋಳರಿಗೆ ಪುನಃ ಅಧಿಕಾರ ಸಿಗಲು ಕಾರಣಕರ್ತನಾಗಿದ್ದರಿಂದ ಈತನ ತಂದೆಗೆ ಚೋಳ ರಾಜ್ಯ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದು ಸಹ ದಕ್ಕುತ್ತದೆ.[124] ಎರಡನೇ ನರಸಿಂಹನು ತನ್ನ ತಂದೆ ವೀರಬಲ್ಲಾಳನ ಕಾಲದಲ್ಲೂ ಮತ್ತು ಈತನ ಮರಣಾನಂತರವೂ ತಮಿಳುನಾಡಿನ ರಾಜಕೀಯದಲ್ಲಿ ಸಕ್ರಿಯನಾಗಿರುವಾಗ ತುಂಗಭದ್ರಾ ನದಿಯ ಉತ್ತರದ ಬನವಾಸಿ ಪ್ರಾಂತ್ಯದಲ್ಲಿ ಸೇವುಣ ಸಿಂಘಣ ರಾಜ್ಯ ವಿಸ್ತರಣೆಯಲ್ಲಿ ತೊಡಗಿರುತ್ತಾನೆ. ಇಂತಹ ಸಂದರ್ಭದಲ್ಲಿ ನರಸಿಂಹನು ಕ್ರಿ.ಶ.1223ರಲ್ಲಿ ತುಂಭದ್ರ ನದಿಯ ದಂಡೆಯಲ್ಲಿ ಸೇವುಣ ಸೈನ್ಯವನ್ನು ಎದುರಿಸಲಾಗಿ, ಈ ಯುದ್ಧದಲ್ಲಿ ಸೇವುಣ ಸೈನ್ಯದ ದಂಡನಾಯಕರುಗಳಾದ ವಿಕ್ರಮಪಾಲ ಮತ್ತು ಪಾವುಸ ಸಾವನ್ನಪ್ಪುತ್ತಾರೆ. ಪುನಃ

ಸೇವುಣರಿಗೂ, ಹೊಯ್ಸಳರಿಗೂ ಕ್ರಿ.ಶ.1228ರಲ್ಲಿ ಮತ್ತು ಕ್ರಿ.ಶ.1231ರಲ್ಲಿ ಯುದ್ಧ ನಡೆಯಿತಾದರೂ, ಈ ಯುದ್ಧಗಳಿಂದ ಎರಡನೇ ನರಸಿಂಹನ ಹೊಯ್ಸಳ ಸೇನೆ ಏನನ್ನೂ ಸಾಧಿಸಲಾರದೇ ತುಂಗಭದ್ರಾ ನದಿಯ ಕೆಳಭಾಗಕ್ಕೆ ಸೀಮಿತವಾಗಿ, ತುಂಗಭದ್ರಾ ನದಿಯ ಉತ್ತರದ ಬನವಾಸಿ ಪ್ರಾಂತ್ಯವು ಸೇವುಣರ ಅಧಿಪತ್ಯಕ್ಕೆ ಒಳಪಟ್ಟಿತು.[125, 126] ಸೇವುಣರ ನಡುವೆ ಯುದ್ಧಗಳಲ್ಲಿ ತೊಡಗಿರುವಾಗಲೇ ನರಸಿಂಹನು ಕ್ರ.ಶ.1222 ರಿಂದ ಕ್ರಿ.ಶ.1230ರ ನಡುವಿನ ಕಾಲಘಟ್ಟದಲ್ಲಿ ಮೂರು ಬಾರಿ ಮೂರನೇ ರಾಜರಾಜಚೋಳನ ರಕ್ಷಣೆಗೆ ಬರಬೇಕಾಯಿತು. ವಿದ್ಯಾಚಕ್ರವರ್ತಿಯ 'ಗದ್ಯ ಕರ್ಣಾಮೃತ' ಮತ್ತು ಬಾಣನ 'ಹರ್ಷಚರಿತ' ಗ್ರಂಥಗಳೂ ಕೂಡ ಎರಡನೇ ನರಸಿಂಹ ಮತ್ತು ಪಾಂಡ್ಯರ ನಡುವೆ ನಡೆದ 90 ದಿನಗಳ ಯುದ್ಧಗಳ ಬಗ್ಗೆ ತಿಳಿಸುತ್ತವೆ.[127] ಕ್ರಿ.ಶ.1222ರಲ್ಲಿ ಮಕರ ರಾಜ ಕಾಡುವ ಕೊಪ್ಪೆರುಂಜಿಗನು ಮೂರನೇ ರಾಜರಾಜಚೋಳನನ್ನು ಬಂಧಿಸಿ ಕಂಚಿಯ ಸೆರೆಮನೆಯಲ್ಲಿಡುತ್ತಾನೆ. ಆಗ ನರಸಿಂಹನು ಕಂಚಿಯ ಮೇಲೆ ದಾಳಿ ಮಾಡಿ ರಾಜರಾಜಚೋಳನನ್ನು ರಕ್ಷಿಸಿ, ಚೋಳ ರಾಜನನ್ನಾಗಿ ಪ್ರತಿಷ್ಠಾಪಿಸಿ ರಾಮೇಶ್ವರದವರೆಗೂ ತನ್ನ ದಿಗ್ವಿಜಯವನ್ನು ಸಾಧಿಸಿದ್ದರ ಫಲವಾಗಿ ಮಕರ ದೇಶವು ನರಸಿಂಹನ ದಂಡನಾಯಕ ಕೇಶವ ದಣ್ಣಾಯಕನ ಸುಪರ್ದಿಗೆ ಒಳಪಟ್ಟು ಸೋಮೇಶ್ವರನು ಕಣ್ಣಾನೂರಿನ ಪ್ರಾಂತ್ಯಾಧಿಕಾರಿಯಾಗಿ ನೇಮಕವಾಗುತ್ತಾನೆ.[128] ಕ್ರಿ.ಶ.1231ರಲ್ಲಿ ಪುನಃ ಮಕರ ರಾಜ ಕಾಡವಕೊಪ್ಪೆರುಂಜಿಗನು ಮೂರನೇ ರಾಜರಾಜಚೋಳನನ್ನು ಸೆಂಡಮಂಗಲಂನಲ್ಲಿ ಬಂಧಿಸಿದಾಗ ನರಸಿಂಹನು ದೋರಸಮುದ್ರದಿಂದ ಶ್ರೀರಂಗಂಗೆ ಧಾವಿಸಿ ಚೋಳರಾಜನನ್ನು ರಕ್ಷಿಸಿ, ಕಾಡವಕೊಪ್ಪೆರುಂಜಿಗನ ಆನೆಗಳು, ಮಹಿಳೆಯರು ಮತ್ತು ಖಜಾನೆಯನ್ನು ವಶಪಡಿಸಿಕೊಳ್ಳುತ್ತಾನೆ.[129] ಈ ದಾಳಿಯಲ್ಲಿ ನರಸಿಂಹನ ದಂಡನಾಯಕರುಗಳಾದ ಅಪ್ಪಣ್ಣ ಮತ್ತು ಸಮುದ್ರ ಗೋಪಯ್ಯರು ಪ್ರಮುಖ ಪಾತ್ರ ವಹಿಸಿದ್ದರೆಂಬುದು ಸಾಹಿತ್ಯಾಧಾರಗಳಿಂದ ತಿಳಿದು ಬರುತ್ತದೆ.[130] ಎರಡನೇ ನರಸಿಂಹನು ವೀರಬಲ್ಲಾಳನ ನಂತರ ಹೊಯ್ಸಳರ ಪ್ರಬಲ ಅರಸನಾಗಿದ್ದು ಈತನ ಆಳ್ವಿಕೆಯ ಸುಮಾರು 15 ವರ್ಷಗಳ ಅವಧಿಯಲ್ಲಿ ಹೊಯ್ಸಳ ರಾಜ್ಯ ದಕ್ಷಿಣದಲ್ಲಿ ಹೆಚ್ಚು ವಿಸ್ತಾರಗೊಳ್ಳುವುದರ ಜೊತೆಗೆ ಪಾಂಡ್ಯರ ಅಧಿಪತ್ಯ ಮತ್ತು ರಾಜ್ಯವಿಸ್ತರಣೆಯ ದಾಹಕ್ಕೆ ಕೊಡಲಿ ಪೆಟ್ಟು ನೀಡಿತು.

ಹಾಸನ ತಾಲೂಕಿನಲ್ಲಿ ಎರಡನೇ ನರಸಿಂಹನು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ ಪ್ರಾರಂಭಿಕ ಶಾಸನ ನಿಟ್ಟೂರು ಗ್ರಾಂದಲ್ಲಿ ಕಂಡು ಬರುತ್ತದೆ. ಕ್ರಿ.ಶ.1221ರ ನಿಟ್ಟೂರು ಗ್ರಾಮದ ವೀರಗಲ್ಲು ಶಾಸನವು[131] ನರಸಿಂಹನ ಆಳ್ವಿಕೆಯಲ್ಲಿ ಮಾಧವ ದಂಡನಾಯಕನು ವಜ್ರದೇವನ ಮೇಲೆ ಕಾಳಗ ಮಾಡಿದಾಗ ಮಾಚಗೌಡನ ಮಗ ಬೊಮ್ಮೆಯನಾಯಕನು ಹೋರಾಡಿ ವೀರಮರಣವನ್ನು ಅಪ್ಪಿದ ವಿಚಾರವನ್ನು ಉಲ್ಲೇಖಿಸುತ್ತದೆ.

ದೊಡ್ಡಗದ್ದವಳ್ಳಿಯ ಕ್ರಿ.ಶ.1222ರ ಶಾಸನವು[132] ನಾರಸಿಂಘದೇವನ ರಾಜ್ಯದಲ್ಲಿ ಸಾಹಣಿತಿ ಜಕವ್ವೆಯು ಮಳಸೆಟ್ಟಿಯ ಕೆರೆಯ 10 ಕೊಳಗ ಗದ್ದೆಯನ್ನು ಅಭಿನವ ಕೊಲ್ಲಾಪುರದ (ಇಂದಿನ ದೊಡ್ಡಗದ್ದವಳ್ಳಿ) ಮಹಾಲಕ್ಷ್ಮೀ ದೇವಿಗೆ ದಾನವಿತ್ತ ವಿಚಾರವನ್ನು ಪ್ರಸ್ತಾಪಿಸಿದೆ. ಇದೇ ಗ್ರಾಮದಲ್ಲಿ ಕಂಡುಬಂದಿರುವ ಕ್ರಿ.ಶ.1227ರ ಶಾಸನವು[133] ಮಹಾಮಂಡಳೇಶ್ವರ ನಾರಸಿಂಘ ದೇವರ ಆಳ್ವಿಕೆಯನ್ನು ಉಲ್ಲೇಖಿಸಿದ್ದು ಅಭಿವನಕೊಲ್ಲಾಪುರದಲ್ಲಿ ಬಣ್ಣಿಗದೆರೆಯ ಹೆಗ್ಗಡೆ ಬಿಟ್ಟಿಯಣ್ಣ ಮತ್ತು ಈತನ ತಮ್ಮ ಸಾವಿಯಣ್ಣನ ಹೆಸರನ್ನು ತಿಳಿಸಿ ಅಷ್ಟಕ್ಕೆ ಮೊಟಕುಗೊಂಡಿರುತ್ತದೆ. ಶಾಂತಿಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1227ರ ಶಾಸನವು[134] ನರಸಿಂಹನವರೆಗಿನ ಹೊಯ್ಸಳ ವಂಶಾವಳಿಯನ್ನು ಮತ್ತು ನರಸಿಂಹನ ಬಿರುದುಗಳನ್ನು ವಿಶೇಷ ಪದಪುಂಜಗಳಿಂದ ವರ್ಣಿಸಿದ್ದು, ನರಸಿಂಹನು ಸೋಲಿಸಿದ ಕಾಡವ, ಮಗಧ ಮತ್ತು ಪಾಂಡ್ಯ ರಾಜ್ಯಗಳ ಹೆಸರುಗಳನ್ನು ಉಲ್ಲೇಖಿಸುತ್ತದೆ. ಶಾಂತಿಗ್ರಾಮದ ಅಚಳಪ್ರಕಾಶಸ್ವಾಮಿಗಳು ಪ್ರತಿಷ್ಠೆ ಮಾಡಿಸಿದ ಶ್ರೀವರದನರಸಿಂಹದೇವರ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಈ ಊರಿನ ಸಿದ್ಧಾಯದ ಮೂವತ್ತು ಗದ್ಯಾಣವನ್ನು ವ್ರಿತ್ತಿಗಳನ್ನಾಗಿ ವಿಂಗಡಿಸಿ ದಾನ ನೀಡುವ ಮೂಲಕ ಒಂದು ತಾಮ್ರ ಶಾಸನವನ್ನು ಅರಸನು ನೀಡಿದನೆಂಬ ಮಾಹಿತಿಯನ್ನು ಈ ಶಾಸನ ತಿಳಿಸುತ್ತದೆ. ಮುಖ್ಯವಾಗಿ ಈ ಶಾಸನ ಭೂದಾನವನ್ನು ವೃತ್ತಿಗಳಾಗಿ ಪಡೆದವರ ಹೆಸರುಗಳನ್ನು ತಿಳಿಸಿದ್ದು, ಲೊಕ್ಕಿಗುಂಡಿಗೆ (ಲಕ್ಕುಂಡಿ) ಸೇರುದ ಕೇಶಣ್ಣ ಮತ್ತು ಭಾಗವತದ ನಿರೂಪಕನಾದ ಲಕ್ಷ್ಮೀಧರ ಭಟ್ಟೋಪಾಧ್ಯಾಯನ ಹೆಸರನ್ನು ಪ್ರತಿಗ್ರಾಹಿಯಾಗಿ ಉಲ್ಲೇಖಿಸಿರುವುದು ಗಮನಾರ್ಹವಾದ ಅಂಶವಾಗಿದೆ. ದುದ್ದ ಗ್ರಾಮದ ಕ್ರಿ.ಶ.1173ರ ವೀರಗಲ್ಲು ಶಾಸನವು[135] ಕಾಲಾನುಸಾರ ಎರಡನೇ ಬಲ್ಲಾಳನ ಆಳ್ವಿಕೆಗೆ ಒಳಪಡುತ್ತಾದರೂ, ಇದರ ಪಠ್ಯವು ಎರಡನೇ ನರಸಿಂಹನಿಗೆ ಸಂಬಂಧಿತವಾಗಿರುತ್ತದೆ. ಇದರಲ್ಲಿ ಮಗರರಾಜ್ಯ ನಿರ್ಮೂಲನು, ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯನು, ಹೊಯ್ಸಳ ನಾರಸಿಂಗದೇವರು ಎಂದು ಪ್ರಸ್ತಾಪಿತವಾಗುವುದರಿಂದ ಇದು ಸ್ಪಷ್ಟವಾಗಿ ಎರಡನೇ ನರಸಿಂಹನ ಆಳ್ವಿಕೆಯನ್ನು ಸೂಚಿಸುತ್ತದೆ. ದುದ್ದ ಗ್ರಾಮದ ಚಟ್ಟಯನಾಯಕನ ಮೊಮ್ಮಗ ಕೂಸಕಾಳಿಯನು ಸ್ವಾಮಿಕಾರ್ಯಕ್ಕೆ ಆತ್ಮಾಹುತಿ ಮಾಡಿಕೊಂಡಾಗ ಈತನ ತಾಯಿ ಚಟ್ಟವ್ವೆಯು ವೀರಗಲ್ಲನ್ನು ನಿರ್ಮಿಸಿದಳೆಂಬುದು ಈ ಶಾಸನ ಪಠ್ಯದಿಂದ ತಿಳಿದು ಬರುತ್ತದೆ. ಮಲ್ಲಿಗೆವಾಳು ಗ್ರಾಮದ ಕ್ರಿ.ಶ.1234-35ರ ವೀರಗಲ್ಲು ಶಾಸನವು[136] ವೀರನಾರಸಿಂಗದೇವನ ಹೆಸರು ಮತ್ತು ಬಿರುದುಗಳನ್ನು ಉಲ್ಲೇಖಿಸಿದ್ದು ಶಾಸನ ಪಠ್ಯ ಅಸ್ಪಷ್ಟವಾಗಿದೆ. ಕ್ರಿ.ಶ.13ನೇ ಶತಮಾನಕ್ಕೆ ಸಲ್ಲುವ ಹಿರೇಕಡಲೂರು ಗ್ರಾಮದ ತಾಮ್ರ ಶಾಸನವು[137] ಎರಡನೇ ನರಸಿಂಹನನ್ನು ವಿವಿಧ ವಿಶೇಷಣಗಳಿಂದ ವರ್ಣಿಸಿದ್ದು, ಅರಸನು ಚಿಕ್ಕಕಡಲೂರು ಗ್ರಾಮವನ್ನು ಹಿರಿಯ ಅಗ್ರಹಾರವಾದ ಅರುಂಧತೀಪುರಕ್ಕೆ (ಹಿರಿಕಡಲೂರಿಗೆ)

ದಾನ ನೀಡಿದ ವಿಚಾರಗಳನ್ನು ಉಲ್ಲೇಖಿಸುತ್ತದೆ. ಕುದುರೆಗುಂಡಿ ಗ್ರಾಮದಲ್ಲಿ ಕಂಡು ಬರುವ ವೀರಗಲ್ಲು ಶಾಸನವು[138] ವೀರನಾರಸಿಂಹನು ದೋರಸಮುದ್ರದಿಂದ ಆಳ್ವಿಕೆ ಮಾಡುತ್ತಿದ್ದುದನ್ನು ಉಲ್ಲೇಖಿಸಿದ್ದು, ಶಾಸನದ ಮುಂದಿನ ಸಾಲುಗಳ ನಶಿಸಿಹೋಗಿವೆ. ಕ್ರಿ.ಶ.13ನೇ ಶತಮಾನದ ಕಾಲಘಟ್ಟಕ್ಕೆ ಹೊಂದಿಕೆಯಾಗುವ ಬೈಲಹಳ್ಳಿ ಗ್ರಾಮದ ವೀರಗಲ್ಲು ಶಾಸನವು[139] ಮಗರ ರಾಜ್ಯದ ನಿರ್ಮೂಲ ಮಾಡಿದ, ಚೋಳನ ರಾಜ್ಯ ಪ್ರತಿಪಾಳನ ಮಾಡಿದ ನಾರಸಿಂಹದೇವ ಎಂದು ಉಲ್ಲೇಖಿಸಿರುವುದರಿಂದ ಈ ಶಾಸನ ಎರಡನೇ ನರಸಿಂಹನ ಆಳ್ವಿಕೆಯನ್ನು ಪ್ರತಿನಿಧಿಸುತ್ತದೆ. ಅಹಿತಗೌಡನ ಮೊಮ್ಮಗ, ಕಾಚಕನ ಮಗ ಬಾಚಯನು ದೇವನಮಳಲೆಯಲ್ಲಿ ಮರಣ ಹೊಂದಿರಬಹುದೆಂಬ ಅಂಶವನ್ನು ಇದು ಪ್ರಸ್ತಾಪಿಸುತ್ತದೆ.

'ಚೋಳಕುಲೈಕ ರಕ್ಷಕ' ಎಂಬ ಬಿರುದನ್ನು ಹೊಂದಿದ್ದ ಎರಡನೇ ನರಸಿಂಹನು, ವಿಷ್ಣುವರ್ಧನ ಮತ್ತು ಎರಡನೇ ಬಲ್ಲಾಳನ ತರುವಾಯ ಹೊಯ್ಸಳ ರಾಜಮನೆತನವನ್ನು ಯಶಸ್ವಿಯಾಗಿ ಮುನ್ನಡೆಸಿದನು. ಈತನು ತುಂಗಭದ್ರಾ ನದಿಯ ಪ್ರದೇಶದ ಮೇಲೆ ಹಿಡಿತ ಸಾಧಿಸಲು ಭಾಗಶಃ ವಿಫಲನಾದರೂ ಸಹ, ತಮಿಳುನಾಡಿನಲ್ಲಿ ಹೊಯ್ಸಳ ಪ್ರಭುತ್ವವನ್ನು ವಿಸ್ತರಿಸುವಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸಿದನು. ಕ್ರಿ.ಶ.1234ರವರೆಗೂ ಹೊಯ್ಸಳ ರಾಜ್ಯವನ್ನು ಮುನ್ನಡೆಸಿದ ಎರಡನೇ ನರಸಿಂಹನ ಬಳಿಕ ಈತನ ಮಗ ಸೋಮೇಶ್ವರನು ಹೊಯ್ಸಳ ಸಿಂಹಾಸನವನ್ನು ಏರಿದನು.

**ಸೋಮೇಶ್ವರ (ಕ್ರಿ.ಶ.1235-1256)**

ಎರಡನೇ ನರಸಿಂಹನ ನಂತರ ಹೊಯ್ಸಳ ಸಿಂಹಾಸನವನ್ನು ಏರಿದ ಸೋಮೇಶ್ವರನು, ಯುವಕನಾಗಿದ್ದಾಗಿಂದಲೂ ತಮಿಳು ರಾಜ್ಯಗಳೊಡನೆ ನಿಕಟ ಸಂಬಂಧವನ್ನು ಹೊಂದಿದ್ದು, ಉತ್ತರದ ಭಾಗಗಳ ಬಗ್ಗೆ ಅಷ್ಟೇನೂ ಆಸಕ್ತಿ ಹೊಂದಿರಲಿಲ್ಲ.[140] ಆದರೆ ತನ್ನ ತಂದೆಯ ಮರಣಾನಂತರ ಹೊಯ್ಸಳ ರಾಜಮನೆತನ ಚುಕ್ಕಾಣಿ ಹಿಡಿದಾಗ ಅನಿವಾರ್ಯವಾಗಿ ಉತ್ತರದ ಭಾಗಗಳ ಬಗ್ಗೆಯೂ ಗಮನಹರಿಸಬೇಕಾಯಿತು. ಈ ಸಂದರ್ಭದಲ್ಲಿ ತುಂಗಭದ್ರಾ ನದಿಯ ಪ್ರದೇಶದಲ್ಲಿ ಕಲ್ಯಾಣದ ಚಾಳುಕ್ಯರು, ಕಳಚೂರಿಗಳು ಮತ್ತು ಕದಂಬರನ್ನು ಮೂಲೆಗುಂಪು ಮಾಡಿ ಸೇವುಣ ಸಿಂಘಣನು ಈ ಪ್ರದೇಶದ ಮೇಲೆ ಬಿಗಿ ಹಿಡಿತ ಹೊಂದಿದ್ದು, ಇಂತಹ ಕ್ಲಿಷ್ಟಕರ ಪರಿಸರದಲ್ಲಿ ಸೋಮೇಶ್ವರನು ಈ ಪ್ರದೇಶದ ಮೇಲೆ ಹಿಡಿತ ಸಾಧಿಸುವ ಉದ್ದೇಶದಿಂದ ಸೇವುಣರ ಪಂಡರಾಪುರದವರೆಗೂ ದಂಡೆತ್ತಿ ಹೋದನಾದರೂ ಯಾವುದೇ ಲಾಭವಾಗಲಿಲ್ಲ.[141] ಸೇವುಣ ಸಿಂಘಣದ ಸೇನಾಧಿಕಾರಿ ಕೃಷ್ಣ ಕಂದರನು ದಕ್ಷಿಣದ ಮೇಲೆ ದಾಳಿ ಮಾಡಿ ತುಂಗಭದ್ರಾ ನದಿಯ ಪ್ರದೇಶದ ಮೇಲೆ ಹಿಡಿತ ಸಾಧಿಸಲಾಗಿ ಸೋಮೇಶ್ವರನು ಕೇವಲ

ದಕ್ಷಿಣಕ್ಕೆ ಸೀಮಿತವಾಗುವ ಪರಿಸ್ಥಿತಿ ನಿರ್ಮಾಣವಾಯಿತು. ನಂತರ ಸೋಮೇಶ್ವರನು ಕಾವೇರಿ ಕಣಿವೆಯ ಕಡೆ ಹೆಚ್ಚು ಗಮನಹರಿಸಿ ಕಣ್ಣಾನೂರನ್ನು ಇನ್ನೊಂದು ಉಪರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿನಿಂದಲೇ ರಾಜ್ಯಭಾರ ಮಾಡಲಾರಂಭಿಸಿದನು. ಈತನು ತನ್ನ ಆಳ್ವಿಕೆಯ ಪ್ರಾರಂಭದಲ್ಲಿ ಚೋಳ ಮತ್ತು ಪಾಂಡ್ಯರ ಹಿಡಿತದಲ್ಲಿದ್ದ ಮಧುರೈ ಮತ್ತು ಗಂಗೈಕೊಂಡಚೋಳಪುರಂ ನಡುವಿನ ಫಲವತ್ತಾದ ಪ್ರದೇಶವನ್ನು ವಶಪಡಿಸಿಕೊಳ್ಳುತ್ತಾನೆ. ಇದರಿಂದ ಚೋಳ ಅರಸ ಮೂರನೇ ರಾಜರಾಜನಿಗೆ ದ್ವೇಷ ಬಂದಿತಾದರೂ ಇದನ್ನು ವ್ಯಕ್ತಪಡಿಸಲಾಗಲಿಲ್ಲ. ಕಾರಣ ಈತನು ಪ್ರಾರಂಭದಿಂದಲೂ ಹೊಯ್ಸಳರಿಗೆ ಅಧೀನನಾಗೇ ಆಡಳಿತ ನಡೆಸುತ್ತಿದ್ದನು. ಆದರೆ ಮೂರನೇ ರಾಜೇಂದ್ರ ಚೋಳನು ಅಧಿಕಾರ ವಹಿಸಿಕೊಂಡ ಮೇಲೆ ಹೊಯ್ಸಳರ ಮೇಲಿನ ನಿಷ್ಠೆ ಕಡಿಮೆಯಾಯಿತಾದರೂ, ಎರಡನೇ ಸುಂದರ ಪಾಂಡ್ಯನ ಮೇಲಿನ ದಾಳಿಗೆ ಸೋಮೇಶ್ವರನ ಸಹಾಯವನ್ನು ಬೇಡಿದನು. ಆದರೆ ಸೋಮೇಶ್ವರನು ಎರಡನೇ ಸುಂದರಪಾಂಡ್ಯನ ಪರವಾಗಿ ಹೋರಾಡಿದನಾದ್ದರಿಂದ 'ಪಾಂಡ್ಯಕುಲ ಸಂರಕ್ಷಣಾ ದಕ್ಷ ದಕ್ಷಿಣ ಭುಜ' ಎಂಬ ಬಿರುದನ್ನು ಧರಿಸಿದನು.[142] ಎರಡನೇ ಸುಂದರಪಾಂಡ್ಯನ ನಂತರ ಅಧಿಕಾರಕ್ಕೆ ಬಂದ ಜಟಾವರ್ಮ ಸುಂದರಪಾಂಡ್ಯನು ಸೋಮೇಶ್ವರನ ಬಗ್ಗೆ ತಾತ್ಸಾರ ಭಾವನೆ ಹೊಂದಿದ್ದು ಈತನ ಮೇಲೆ ದಾಳಿ ಮಾಡಿ ಶ್ರೀರಂಗಂ ಮತ್ತು ಕಣ್ಣಾನೂರು ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಾನೆ.[143] ಈ ಸೋಲಿನಿಂದ ಸೋಮೇಶ್ವರನು ಅಪಾರ ಪ್ರಮಾಣದ ಕಪ್ಪಕಾಣಿಕೆ ಮತ್ತು ಸಂಪತ್ತನ್ನು ಜಟಾವರ್ಮ ಸುಂದರಪಾಂಡ್ಯನಿಗೆ ಸಲ್ಲಿಸಬೇಕಾಯಿತು. ಸುಂದರಪಾಂಡ್ಯನು ಈ ಸಂಪತ್ತನ್ನು ಬಳಸಿಕೊಂಡು ಶ್ರೀರಂಗಂನಲ್ಲಿ ಎರಡು ದೇವಾಲಯಗಳನ್ನು ನಿರ್ಮಿಸಿ, ದೇವಾಲಯಗಳ ಕೆಲವು ಭಾಗಗಳಿಗೆ ಚಿನ್ನವನ್ನು ಅಳವಡಿಸಿದನು. ಶ್ರೀರಂಗಂನ ರಂಗನಾಥ ದೇವಾಲಯದ ಶಿಖರಕ್ಕೆ 18 ಲಕ್ಷ ಬೆಲೆ ಬಾಳುವ ಚಿನ್ನದ ಫಲಕಗಳನ್ನು ಅಳವಡಿಸಿದನೆಂಬುದು ಇತಿಹಾಸದ ಆಕರಗಳಿಂದ ತಿಳಿದು ಬರುತ್ತದೆ.[144] ಈ ರೀತಿ ಜಟಾವರ್ಮನು ಚಿನ್ನದ ಫಲಕಗಳನ್ನು ಅಳವಡಿಸಿದ್ದು ಸುಮಾರು 50 ವರ್ಷಗಳ ನಂತರ ಮುಸ್ಲಿಂ ದಾಳಿಕೋರರಿಗೆ ಈ ದೇವಾಲಯಗಳು ಪ್ರಮುಖ ಆಕರ್ಷಣೆಯಾದವು.[145] ಜಟಾವರ್ಮ ಸುಂದರಪಾಂಡ್ಯನ ಈ ದಾಳಿಯಿಂದ ಅಪಾರ ನಷ್ಟಕ್ಕೀಡಾದ ಸೋಮೇಶ್ವರನು ವಿಶಾಲವಾದ ಹೊಯ್ಸಳ ರಾಜ್ಯವನ್ನು ತಮಿಳುನಾಡಿನಿಂದ ಕುಳಿತು ಆಡಳಿತ ನಡೆಸುವುದು ಕಷ್ಟವೆಂದು ಅರಿತು ರಾಜ್ಯವನ್ನು ತನ್ನ ಇಬ್ಬರು ಮಕ್ಕಳಾದ ಮೂರನೇ ನರಸಿಂಹ ಮತ್ತು ರಾಮನಾಥನಿಗೆ ಹಂಚಿದನು. ಮೂರನೇ ನರಸಿಂಹನು ದೋರಸಮುದ್ರದಿಂದ ಆಳ್ವಿಕೆ ನಡೆಸಿದರೆ, ರಾಮನಾಥನು ಕಣ್ಣಾನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದಕ್ಷಿಣದ ಪ್ರದೇಶಗಳನ್ನು

ಆಳ್ವಿಕೆ ಮಾಡತೊಡಗಿದನು.[146] ಸ್ವತಃ ಸೋಮೇಶ್ವರನು ಕಣ್ಣಾನೂರಿನಲ್ಲಿಯೇ ಅಂತಿಮ ದಿನಗಳವರೆಗೆ ನೆಲೆಸಿದನು.

ಹಾಸನ ತಾಲೂಕಿನಲ್ಲಿ ಸೋಮೇಶ್ವರನ ಆಳ್ವಿಕೆಯನ್ನು ಉಲ್ಲೇಖಿಸಿ ಕೇವಲ ಎರಡು ಶಾಸನಗಳು ಮಾತ್ರ ಕಂಡು ಬರುತ್ತವೆ. ಕ್ರಿ.ಶ.1243-44ರ ಕಾಲಮಾನದ ಸೀಗೆ ಗ್ರಾಮದ ವೀರಗಲ್ಲು ಶಾಸನವು[147] ಪ್ರತಾಪ ಚಕ್ರವರ್ತಿ ಹೊಯ್ಸಳ ಶ್ರೀ ಸೋಮೇಶ್ವರ ದೇವರ ಆಳ್ವಿಕೆಯನ್ನು ಮಾತ್ರ ಉಲ್ಲೇಖಿಸುತ್ತದೆ. ಸಾಲಗಾಮೆ ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.1258ರ ಶಾಸನವು[148] ಪ್ರತಾಪ ಚಕ್ರವರ್ತಿ ಹೊಯ್ಸಳ ವೀರಸೋಮೇಶ್ವರನು ಕಣ್ಣಾನೂರಿನಲ್ಲಿ ಆಳ್ವಿಕೆ ಮಾಡುತ್ತಿದ್ದನೆಂಬ ಅಂಶವನ್ನು ಉಲ್ಲೇಖಿಸುತ್ತದೆ. ಸಾಲಗಾಮೆಯ ಬೋಗಯ್ಯನ ಉಪಟಳದಿಂದ ಕೆರೆಯೊಡೆದು ಕೇಶವ ದೇವರ ದೇವಾಲಯವು ನಾಶವಾಗಿ ಅಪಾರ ಕಾಲ ಪೂಜೆ ಪುನಸ್ಕಾರ ಮಾಡದೇ ಇದ್ದಾಗ ಮಾಯಣ್ಣ ನಾಯಕನು ಊರಿನಲ್ಲಿ ಕರುಕಂಬವನ್ನು ನಿಲ್ಲಿಸಿ ಶ್ರೀ ಚನ್ನಕೇಶವ ದೇವಾಲಯವನ್ನು ನಿರ್ಮಿಸಿದನೆಂಬುದು ಶಾಸನ ಪಠ್ಯದಿಂದ ತಿಳಿದು ಬರುತ್ತದೆ. ಈ ಶಾಸನವನ್ನು ಬರೆದ ಓಜ ಮಲಿತಮ್ಮನೆಂಬುದು ಗಮನಾರ್ಹ ಅಂಶವಾಗಿದೆ.

**ಮೂರನೇ ನರಸಿಂಹ (ಕ್ರಿ.ಶ.1254-1291)**

ಸೋಮೇಶ್ವರನ ನಂತರ ಈತನ ಮಗ ಮೂರನೇ ನರಸಿಂಹನು 37 ವರ್ಷಗಳ ಸುದೀರ್ಘ ಆಳ್ವಿಕೆಯನ್ನು ನಡೆಸಿದನು. ಜಟಾವರ್ಮ ಸುಂದರಪಾಂಡ್ಯನಿಂದಾದ ಸೋಲು ಮತ್ತು ಅಪಾರ ನಷ್ಟದಿಂದಾಗಿ ಹಾಗೂ ತುಂಗಭದ್ರಾ ನದಿಯಿಂದ ಮಧುರೆವರೆಗಿನ ಭೂಭಾಗವನ್ನು ಏಕಚಕ್ರಾಧಿಪತ್ಯದಲ್ಲಿ ಆಳ್ವಿಕೆ ಮಾಡುವುದು ಕಷ್ಟವೆಂದು ಅರಿತ ಸೋಮೇಶ್ವರನು ತನ್ನ ಇಬ್ಬರು ಮಕ್ಕಳಲ್ಲಿ ಒಬ್ಬನಾದ ಮೂರನೇ ನರಸಿಂಹನಿಗೆ ಉತ್ತರದ ಭಾಗವನ್ನು, ರಾಮನಾಥನಿಗೆ ದಕ್ಷಿಣದ ಭಾಗವಾದ ತಮಿಳುನಾಡು ಪ್ರಾಂತ್ಯ ಮತ್ತು ಕೋಲಾರ ಭಾಗವನ್ನು ವಹಿಸಿದನು.[149] ಉತ್ತರದ ಭಾಗವನ್ನು ವಹಿಸಿಕೊಂಡು ದೋರಸಮುದ್ರದಿಂದ ಮೂರನೇ ನರಸಿಂಹನು ಆಳ್ವಿಕೆ ನಡೆಸುತ್ತಿರುವಾಗ ತುಂಗಭದ್ರ ನದಿಯ ಪ್ರದೇಶದ ಮೇಲೆ ಸೇವುಣರು ಅಧಿಪತ್ಯವನ್ನು ಹೊಂದಿದ್ದು ದಾವಣಗೆರೆ ಸಮೀಪದ ಬೆತ್ತೂರನ್ನು ಹೊಸ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಿಸ್ತರಣೆಯಲ್ಲಿ ತೊಡಗಿರುತ್ತಾರೆ.[150] ಇದೇ ಸಂದರ್ಭದಲ್ಲಿ ನಿಡುಗಲ್ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದ ಇರುಂಗೋಳರು ಮತ್ತು ಸೇವುಣ ದಂಡನಾಯಕ ಸಾಳುವ ತಿಕ್ಕಮನ ಜಂಟಿ ಸೈನ್ಯವು ಕ್ರಿ.ಶ.1276ರಲ್ಲಿ ಹೊಯ್ಸಳರ ಹೃದಯ ಭಾಗವಾದ ಬೆಳವಾಡಿ ಮೇಲೆ ದಾಳಿ ಮಾಡಿ ದೋರಸಮುದ್ರದ ಕಡೆ ಧಾವಿಸುತ್ತಿರುವಾಗ ಹೊಯ್ಸಳ ಚಿಕ್ಕಕೇತೆಯ ದಂಡನಾಯಕನ

ನೇತೃತ್ವದ ಹೊಯ್ಸಳ ಸೈನ್ಯವು ಸೇವುಣರನ್ನು ಹಿಮ್ಮೆಟ್ಟಿಸುತ್ತದೆ.[151] ಹೀಗೆ ದೋರಸಮುದ್ರದ ಮೇಲಿನ ದಾಳಿಯು ವಿಫಲವಾದಾಗ ಸೇವುಣ ಸೈನ್ಯವು ಹಿಂತಿರುಗುವ ಸಂದರ್ಭದಲ್ಲಿ ಹೊಯ್ಸಳನಾಡಿನ ಸಿಕ್ಕ ಸಿಕ್ಕ ಹಳ್ಳಿಗಳನ್ನು ಲೂಟಿ ಮಾಡಿ, ಇದರಿಂದ ಕ್ರೋಢೀಕೃತವಾದ ಸಂಪತ್ತನ್ನು ಬಳಸಿಕೊಂಡು ಯಾದವಮಹಾದೇವನ ನೆನಪಿನಲ್ಲಿ, ಹರಿಹರದಲ್ಲಿ ಲಕ್ಷ್ಮೀನಾರಾಯಣ ದೇವಾಲಯವನ್ನು ನಿರ್ಮಿಸಿದರು.[152] ಕ್ರಿ.ಶ.1285ರಲ್ಲಿ ನರಸಿಂಹನೇ ಸೈನ್ಯವನ್ನು ಮುನ್ನಡೆಸಿ, ಸೇವುಣರಿಗೆ ಸಹಾಯ ಮಾಡಿದ್ದ ನಿಡುಗಲ್ ಪ್ರಾಂತ್ಯದ ಇರುಂಗಳರನ್ನು ಸೋಲಿಸಿ ಇವರ ಪ್ರದೇಶಗಳ ಮೇಲೆ ಪ್ರಭುತ್ವ ಸಾಧಿಸಿದನು.[153] ನರಸಿಂಹನು ಹೀಗೆ ಉತ್ತರದ ರಾಜರುಗಳ ದಾಳಿಯನ್ನು ಎದುರಿಸುವ ಸಂದರ್ಭದಲ್ಲಿಯೇ ತನ್ನ ಸಹೋದರ ರಾಮನಾಥನ ಕಿರುಕುಳವನ್ನು ಎದುರಿಸಬೇಕಾಯಿತು. ಜಟಾವರ್ಮ ಸುಂದರಪಾಂಡ್ಯನಿಂದ ಕಣ್ಣಾನೂರು ಪ್ರಾಂತ್ಯವನ್ನು ಕಳೆದುಕೊಂಡ ರಾಮನಾಥನು ತನ್ನ ಸಹೋದರ ನರಸಿಂಹನ ಕೋಲಾರ ಮತ್ತು ಬೆಂಗಳೂರಿನ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡನು.[154] ಮೂರನೇ ನರಸಿಂಹನು ಈ ಎಲ್ಲಾ ಅಡೆತಡೆಗಳನ್ನು ಎದುರಿಸಿ ಆಳ್ವಿಕೆ ನಡೆಸಿದರೂ ಕ್ರಿ.ಶ.1291ರಲ್ಲಿ ಮರಣ ಹೊಂದಲಾಗಿ ಈತನ ಆಡಳಿತ ಅಂತ್ಯವಾಯಿತು.

ಹಾಸನ ತಾಲೂಕಿನಲ್ಲಿ ಮೂರನೇ ನರಸಿಂಹನು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ ಈತನ ಹೆಸರನ್ನು ಉಲ್ಲೇಖಿಸಿರುವ 6 ಶಾಸನಗಳು ಕಂಡು ಬರುತ್ತವೆ. ಗೌಡಗೆರೆ ಗ್ರಾಮದಲ್ಲಿರುವ ಕ್ರಿ.ಶ.1258ರ ವೀರಗಲ್ಲು ಶಾಸನವು[155] ನರಸಿಂಹನು ದೋರಸಮುದ್ರದಿಂದ ಆಳ್ವಿಕೆ ನಡೆಸುತ್ತಿರುವಾಗ, ಗೌಡಗೆರೆಯ ಮುದ್ದಗಾವುಂಡನ ಮಗ ಬೊಮ್ಮಗೌಡನು ಗದುಬಳ್ಳಿಯಿಂದ ಬರುವಾಗ ನಡೆದ ಸಂಗ್ರಾಮದಲ್ಲಿ ಮರಣ ಹೊಂದಿದ ಅಂಶವನ್ನು ಉಲ್ಲೇಖಿಸಿದೆ. ಕೆಲವತ್ತಿ ಗ್ರಾಮದ ಕ್ರಿ.ಶ.1266-67ರ ಕಾಲಮಾನದ ಶಾಸನವು[156] ನರಸಿಂಹನ ಆಳ್ವಿಕೆಯ ಕಾಲದಲ್ಲಿ ಕೆಲವತ್ತಿ ಗ್ರಾಮದಲ್ಲಿ ನಿರ್ಮಾಣವಾದ ಅಲ್ಲಾಳಪೆರುಮಾಳ ದೇವಾಲಯಕ್ಕೆ ಇದೇ ಗ್ರಾಮದ ಕೆಲವು ಭೂಮಿಯನ್ನು ದಾನ ನೀಡಿದ ವಿಚಾರಗಳನ್ನು ಉಲ್ಲೇಖಿಸುತ್ತದೆ. ದುದ್ದ ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿಯಿರುವ ಕ್ರಿ.ಶ.1276ರ ವೀರಗಲ್ಲು ಶಾಸನವು[157] ವೀರನರಸಿಂಹನ ಆಳ್ವಿಕೆ ಕಾಲದಲ್ಲಿ ಸೇವುಣರಾಯನ ಪರವಾಗಿ ಬಂದ ಸಾಳುವ ತಿಕ್ಕಮನ ವಿರುದ್ಧದ ಕದನದಲ್ಲಿ ದುದ್ದದ ಬಯಿಚೆಯ ನಾಯಕನ ಮಗ ಅಂಕಣ್ಣನು ಮರಣ ಹೊಂದಲಾಗಿ ಈತನ ಅಣ್ಣ ಸಿತಗರಗಂಡ ದೇಕಯನು ಈ ವೀರಗಲ್ಲನ್ನು ನಿಲ್ಲಿಸಿದನೆಂಬುದನ್ನು ತಿಳಿಸುತ್ತದೆ. ಕುದುರೆಗುಂಡಿ ಗ್ರಾಮದ ಕ್ರಿ.ಶ.1283ರ ಶಾಸನವು[158] ವೀರನರಸಿಂಹನ ಆಳ್ವಿಕೆಯ ಕಾಲದಲ್ಲಿ ಕುದುರೆಗುಂಡಿಯ ಸೋಮನಾಥ ದೇವರಿಗೆ ನಂದಾದೀಪಕ್ಕಾಗಿ ಸಾಂತಣ್ಣನ ತಮ್ಮ ಗೋಪಯ್ಯನು ದಾನ ನೀಡಿದ ಅಂಶವನ್ನು ಪ್ರಸ್ತಾಪಿಸಿದೆ.

ಉಗನೆ ಗ್ರಾಮದಲ್ಲಿ ಕಂಡು ಬಂದಿರುವ ವೀರಗಲ್ಲು ಶಾಸನವು[159] ನರಸಿಂಹನ ಆಳ್ವಿಕೆ ಕಾಲದಲ್ಲಿ ಬಸಗೌಡ, ಮಾರಗೌಡ, ಮಸಣಗೌಡ ಮತ್ತು ಮಾದಗಾವುಂಡರು ಬೈಲಹಳ್ಳಿಯ ಗಡಿಯಲ್ಲಿ ಗೋವುಗಳನ್ನು ರಕ್ಷಿಸಿಕೊಂಡು ಬರುವ ಸಂದರ್ಭದಲ್ಲಿ ನಡೆದ ಕದನದಲ್ಲಿ ವೀರಮರಣವನ್ನಪ್ಪಿದ ಅಂಶಗಳನ್ನು ದಾಖಲಿಸುತ್ತದೆ. ಇದೇ ಗ್ರಾಮದಲ್ಲಿ ಕಂಡು ಬಂಧಿರುವ ಮತ್ತೊಂದು ವೀರಗಲ್ಲು ಶಾಸನವು[160] ನರಸಿಂಹನ ಆಳ್ವಿಕೆಯ ಕಾಲದಲ್ಲಿ ಬೈಲಹಳ್ಳಿಯ ಗಡಿಯಲ್ಲಿ ಮಾದಗೌಂಡ ಎಂಬಾತನು ಮರಣ ಹೊಂದಿದ ವಿಚಾರವನ್ನು ಉಲ್ಲೇಖಿಸುತ್ತದೆ. ಮೂರನೇ ನರಸಿಂಹನು ಹೊಯ್ಸಳ ವಂಶವನ್ನು ಮುನ್ನಡೆಸಿದ ಕೊನೆಯ ಕಾಲಘಟ್ಟದ ಪ್ರಮುಖ ಅರಸನಾಗಿದ್ದು ತನ್ನ ತಂದೆ ಸೋಮೇಶ್ವರನು ಹಂಚಿಕೆ ಮಾಡಿದ್ದ ದೋರಸಮುದ್ರದ ಪ್ರಾಂತ್ಯವನ್ನು ತನ್ನ ಸಹೋದರ ರಾಮನಾಥನ ಕಿರುಕುಳದ ನಡುವೆಯು ಸೇವುಣರು, ಇರುಂಗಳರು ಇನ್ನೂ ಮುಂತಾದವರಿಂದ ರಕ್ಷಿಸಿದನು. ಉತ್ತಮ ಕಲಾಭಿರುಚಿಯುಳ್ಳ ಈತನ ಆಳ್ವಿಕೆಯ ಕಾಲದಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ ಸೋಮನಾಥಪುರದಲ್ಲಿ ಸುಂದರ ಮತ್ತು ಆಕರ್ಷಣೀಯವೂ ಆದ ಸೋಮನಾಥ ದೇವಾಲಯ ನಿರ್ಮಾಣವಾಯಿತು.[161]

**ರಾಮನಾಥ (ಕ್ರಿ.ಶ.1251–1295)**

ರಾಮನಾಥನು ತನ್ನ ತಂದೆ ಸೋಮೇಶ್ವರನು ಹಂಚಿಕೆ ಮಾಡಿದ್ದ ದಕ್ಷಿಣದ ತಮಿಳುನಾಡಿನ ಕೆಲವು ಭಾಗಗಳನ್ನು ಒಳಗೊಂಡ ಪ್ರಾಂತ್ಯವನ್ನು ಕಣ್ಣಾನೂರಿನಿಂದ ಆಳ್ವಿಕೆ ನಡೆಸುತ್ತಿದ್ದನು. ಆದರೆ ಈ ಸಂದರ್ಭದಲ್ಲಿ ತಮಿಳುನಾಡಿನ ಬಹುಪಾಲು ಪ್ರದೇಶವು ಜಟಾವರ್ಮ ಸುಂದರಪಾಂಡ್ಯನ ಅಧೀನದಲ್ಲಿದ್ದು, ಪಾಂಡ್ಯನು ಶೀಘ್ರದಲ್ಲೇ ಕಣ್ಣಾನೂರು ಮತ್ತು ಶ್ರೀರಂಗಂ ಭಾಗಗಳನ್ನು ವಶಪಡಿಸಿಕೊಂಡನು. ಜೊತೆಗೆ ಕಾಡವರು ಮತ್ತು ಬಾಣವಂಶಗಳ ಸಾಮಂತರೂ ಸಹ ಈತನಿಂದ ಸದೆಬಡಿಯಲ್ಪಟ್ಟರು.[162] ಈ ರೀತಿಯ ಸಂದಿಗ್ಧ ಪರಿಸ್ಥಿತಿಯಿಂದ ರಾಜ್ಯವನ್ನು ಕಳೆದುಕೊಂಡ ರಾಮನಾಥನು ತನ್ನ ರಾಜಧಾನಿಯನ್ನು ಕಣ್ಣಾನೂರಿನಿಂದ ಕುಂದಾನೆಗೆ ಬದಲಾಯಿಸಿ ಇಲ್ಲಿಂದಲೇ ಆಳ್ವಿಕೆ ಮುಂದುವರೆಸಿದನು.[163] ತನ್ನ ಸಹೋದರ ಮೂರನೇ ನರಸಿಂಹನ ಬಗ್ಗೆ ದ್ವೇಷಾಸೂಯೆಗಳನ್ನು ಹೊಂದಿದ್ದ ರಾಮನಾಥನು ನರಸಿಂಹನ ಭೂಪ್ರದೇಶಗಳನ್ನು ಆಕ್ರಮಿಸಲು ಪ್ರಾರಂಭಿಸಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಕೆಲವು ಭಾಗಗಳನ್ನು ವಶಪಡಿಸಿಕೊಂಡನು. ಕ್ರಿ.ಶ.1280ರಲ್ಲಿ ರಾಮನಾಥನು ಒರಿಸ್ಸಾದ ಗಜಪತಿಗಳನ್ನೊಳಗೊಂಡ ಒಕ್ಕೂಟ ಸೈನ್ಯದೊಂದಿಗೆ ನರಸಿಂಹನ ಸೈನ್ಯದ ಮೇಲೆ ಸೊಲೆಯೂರು ಎಂಬಲ್ಲಿ ಯುದ್ಧ ಸಂಘಟಿಸಿ ನರಸಿಂಹನನ್ನು ಸೋಲಿಸಿ ಇಂದಿನ ತುಮಕೂರು, ತಿಪಟೂರು ಮತ್ತು ಬೆಂಗಳೂರು ತಾಲೂಕುಗಳನ್ನು ವಶಪಡಿಸಿಕೊಂಡನು. ಈ ಯುದ್ಧದ

ತರುವಾಯ ನರಸಿಂಹ ಮತ್ತು ರಾಮನಾಥನ ನಡುವೆಶಾಂತಿ ಒಪ್ಪಂದವೇರ್ಪಟ್ಟರೂ ಸಹ ರಾಮನಾಥನು ಪುನಃ 1290ರಲ್ಲಿ ದ್ವಾರಸಮುದ್ರದ ಹೆಬ್ಬಾಗಿಲಿನವರೆಗೂ ದಾಳಿ ಮುಂದುವರೆಸಿದನು. ಕ್ರಿ.ಶ.1291ರಲ್ಲಿ ನರಸಿಂಹನು ಮರಣ ಹೊಂದಲಾಗಿ ರಾಮನಾಥನ ಕಣ್ಣು ರಾಜ್ಯದ ಉತ್ತರಾಧಿಕಾರತ್ವದ ಕಡೆ ಹರಿದು ಕೆಲವು ವರ್ಷಗಳ ಕಾಲ ಮೂರನೇ ಬಲ್ಲಾಳನಿಗೂ ತೊಂದರೆ ನೀಡಿದನಾದರೂ ಇವೆಲ್ಲವನ್ನು ಮೆಟ್ಟಿನಿಂತು ಬಲ್ಲಾಳನು ಹೊಯ್ಸಳ ಸಿಂಹಾಸನವನ್ನು ಏರಿದನು.[164] ಕ್ರಿ.ಶ.1295ರಲ್ಲಿ ರಾಮನಾಥನು ಮರಣ ಹೊಂದಲಾಗಿ ಈತನ ಮಗ ವಿಶ್ವನಾಥನು ಅಧಿಕಾರಕ್ಕೆ ಬಂದನಾದರೂ ಅಸಮರ್ಥನಾದ ಈತನನ್ನು ಮೂಲೆಗುಂಪು ಮಾಡಿ ಮೂರನೇ ಬಲ್ಲಾಳನು ಹೊಯ್ಸಳ ರಾಜಮನೆತನವನ್ನು ಮತ್ತೊಮ್ಮೆ ಏಕಚಕ್ರಾಧಿಪತ್ಯಕ್ಕೆ ಒಳಪಡಿಸಿದನು.[165]

**ಮೂರನೇ ಬಲ್ಲಾಳ (ಕ್ರಿ.ಶ.1291-1342)**

ಹೊಯ್ಸಳ ರಾಜಮನೆತನದ ಇತಿಹಾಸದಲ್ಲೇ ವಿಷ್ಣುವರ್ಧನ, ಎರಡನೇ ಬಲ್ಲಾಳನ ತರುವಾಯ ಏಕಚಕ್ರಾಧಿಪತ್ಯದ ಅಡಿಯಲ್ಲಿ ಆಳ್ವಿಕೆ ನಡೆಸಿದ ಕೀರ್ತಿ ಮೂರನೇ ಬಲ್ಲಾಳನಿಗೆ ಸಲ್ಲುತ್ತದೆ. ತನ್ನ ತಂದೆ ಮೂರನೇ ನರಸಿಂಹನ ಮರಣದ ತರುವಾಯ ಪಟ್ಟಕ್ಕೆ ಬಂದ ಬಲ್ಲಾಳನು ಪ್ರಾರಂಭದಲ್ಲಿ ತನ್ನ ಚಿಕ್ಕಪ್ಪನಾದ ರಾಮನಾಥನ ಕಿರುಕುಳವನ್ನು ಎದುರಿಸಬೇಕಾಯಿತು. ಆದರೂ ಸಮರ್ಥನಾದ ಬಲ್ಲಾಳನು ರಾಮನಾಥನನ್ನು ಎದುರಿಸಿ ಈತನು ಕ್ರಿ.ಶ.1295ರಲ್ಲಿ ಮರಣ ಹೊಂದಿದಾಗ ವಿಶಾಲವಾದ ಹೊಯ್ಸಳ ಸಾಮ್ರಾಜ್ಯದ ಪಟ್ಟಾಭಿಷಕ್ತ ದೊರೆಯಾಗುತ್ತಾನೆ. ಬಲ್ಲಾಳನು ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ ಹೊಯ್ಸಳ ರಾಜ್ಯವನ್ನೂ ಒಳಗೊಂಡಂತೆ ಅಕ್ಕಪಕ್ಕದ ರಾಜ್ಯಗಳಲ್ಲಿ ಬಹಳ ಕ್ಲಿಷ್ಟಕರವಾದ ಪರಿಸ್ಥಿತಿ ಇರುತ್ತದೆ. ತುಂಗಭದ್ರಾ ನದಿಯ ಪ್ರದೇಶದ ಮೇಲೆ ಹಿಡಿತ ಹೊಂದಿದ್ದ ಸೇವುಣರ ಮೇಲೆ ಅಲ್ಲಾವುದ್ದೀನ್ ಖಿಲ್ಜಿಯು ದಾಳಿ ಮಾಡಿ ಅಪಾರ ಸಂಪತ್ತನ್ನು ಲೂಟಿ ಮಾಡಿ, ಕಪ್ಪಕಾಣಿಕೆಗಳನ್ನು ಪಡೆಯುತ್ತಿರುತ್ತಾನೆ. ಪಾಂಡ್ಯ ಸಹೋದರರಾದ ಸುಂದರಪಾಂಡ್ಯ ಮತ್ತು ವೀರ ಪಾಂಡ್ಯರು ಒಳಜಗಳದಲ್ಲಿ ತಲೀನರಾಗಿದ್ದರೆ, ಚೋಳರು ಮೂಲೆಗುಂಪಾಗಿದ್ದು, ಇತರ ಸಣ್ಣಪುಟ್ಟ ರಾಜ್ಯಗಳು ಮತ್ತು ಸಾಮಂತರು ತಮ್ಮ ಅಸ್ತಿತ್ವಕ್ಕಾಗಿ ಸೆಣೆಸುತ್ತಿರುತ್ತಾರೆ.[166] ಕ್ರಿ.ಶ.1294ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ದಾಳಿಯಿಂದ ಕಂಗಾಲಾಗಿದ್ದ ಸೇವುಣ ರಾಮಚಂದ್ರನು ಪುನಃ ತುಂಗಭದ್ರಾ ನದಿಯ ಪ್ರದೇಶದ ಮೇಲೆ ಹಿಡಿತ ಸಾಧಿಸುವ ಉದ್ದೇಶದಿಂದ ಕ್ರಿ.ಶ.1303ರಲ್ಲಿ ಹೊಯ್ಸಳರ ಮೇಲೆ ದಾಳಿ ಮಾಡಿದಾಗ ಬೆಮ್ಮತ್ತೂರು ದುರ್ಗದ ಆಡಳಿತಾಧಿಕಾರಿಯಾದ ಸೋಮೇಯ ದಂಡನಾಯಕನು ಹೊಳಲ್ಕೆರೆಯಲ್ಲಿ ಹೋರಾಡಿ ಮರಣ ಹೊಂದಿದನು. ಇದರಿಂದ ಕುಪಿತನಾದ ಬಲ್ಲಾಳನು ಕ್ರಿ.ಶ.1305ರಲ್ಲಿ ಸೇವುಣರ ಮೇಲೆ ದಾಳಿ ಮಾಡಿದನಾದರೂ

ಯಾವುದೇ ಪ್ರಯೋಜನವಾಗಲಿಲ್ಲ.[167] ಕ್ರಿ.ಶ.1306ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ಸೇನಾನಿ ಮಲ್ಲಿಕಾಫರ್ ಪುನಃ ದೇವಗಿರಿಯ ಮೇಲೆ ದಾಳಿ ಮಾಡಲಾಗಿ ಸೇವುಣ ರಾಮಚಂದ್ರನು ಆತನಿಗೆ ಅಪಾರ ಪ್ರಮಾಣದ ಕಪ್ಪಕಾಣಿಕೆಗಳನ್ನು ಸಲ್ಲಿಸಿ ಆತನ ವಿಶ್ವಾಸಕ್ಕೆ ಪಾತ್ರನಾದನು. ಸೇವುಣರ ಮೇಲೆ ಮಹಮ್ಮದೀಯ ದಾಳಿಯಿಂದ ಉಂಟಾದ ರಾಜಕೀಯ ಅಸ್ಥಿರತೆಯನ್ನು ಬಳಸಿಕೊಂಡು ಕೆಲವು ಸಾಮಂತ ರಾಜ್ಯಗಳು ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದರೆ ಬಲ್ಲಾಳನು ಈ ಸಾಮಂತರ ಮೇಲೆ ಅಧಿಪತ್ಯ ಏರಲು ನಿರ್ಧರಿಸಿ ಯಶಸ್ವಿಯಾದನು. ಶಾಂತಾರರ ಸಹಾಯದಿಂದ ಸೇವುಣ ಕಂಪಿಲನನ್ನು ಸೋಲಿಸಿ ತುಂಗಭದ್ರಾ ನದಿಯ ಪ್ರದೇಶದ ಮೇಲೆ ಹಿಡಿತ ಸಾಧಿಸಿ ನಂತರ ಕಾಡವರು, ತೆಲುಗು ಚೋಡರು ಮತ್ತು ಪಾಂಡ್ಯರನ್ನು ಸೋಲಿಸಿದನು. ಎರಡನೇ ಬಲ್ಲಾಳನ ಆಳ್ವಿಕೆಯ ಕಾಲಘಟ್ಟದಲ್ಲಿ ಯಾವ ರೀತಿ ಹೊಯ್ಸಳ ಸಾಮ್ರಾಜ್ಯ ವಿಸ್ತಾರವಾಗಿತ್ತೋ ಅದೇ ರೀತಿಯಲ್ಲಿ ಮೂರನೇ ಬಲ್ಲಾಳನು ರಾಜ್ಯವನ್ನು ವಿಸ್ತರಿಸಿ, ತನ್ನ ದಂಡನಾಯಕರು ಮತ್ತು ಪ್ರಧಾನರಿಗೆ ಸ್ವತಂತ್ರ ಸ್ಥಾನಮಾನವನ್ನು ನೀಡಿ ಆಡಳಿತವನ್ನು ವಹಿಸಿಕೊಟ್ಟನು.[168] ಮಾಧವ ದಣ್ಣಾಯಕನು ಪದಿನಾಲ್ಕು ನಾಡನ್ನು ತೆರಕಣಾಂಬಿಯಿಂದ, ಮಾಚೇಯ ದಣ್ಣಾಯಕನು ಪೆನುಕೊಂಡವನ್ನು, ಬಲ್ಲಪ್ಪ ದಣ್ಣಾಯಕನು ಮಾಲೂರನ್ನು, ಮಹಾಸ್ಥಾನಪತಿ ಮಾಲೇಯ ನಾಯಕನು ಕುಕ್ಕಲನಾಡನ್ನು, ಅಲ್ಲಪ್ಪ ದಣ್ಣಾಯಕನು ಯಲಹಂಕ ನಾಡನ್ನು ಮತ್ತು ನಾಯಕ್ಕರಸನು ಸುಗುನಿಯನ್ನು ಬಲ್ಲಾಳನ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿರುತ್ತಾರೆ.[169] ಇಂತಹ ಸಂದರ್ಭದಲ್ಲಿ ಪಾಂಡ್ಯ ಸಹೋದರರು ಅಧಿಕಾರಕ್ಕಾಗಿ ಕಿತ್ತಾಟದಲ್ಲಿ ತೊಡಗಿದ್ದಾಗ ಅಲ್ಲಾವುದ್ದೀನ್ ಖಿಲ್ಜಿಯ ಸೇನಾನಿ ಮಲ್ಲಿಕಾಫರನು ದಕ್ಷಿಣದ ಮೇಲೆ ದಂಡಯಾತ್ರೆಗೆ ಸಿದ್ಧನಾಗುತ್ತಾನೆ. ಮೊದಲು ಸೇವುಣ ರಾಮಚಂದ್ರನ ಸಹಾಯ ಪಡೆದು ಕ್ರಿ.ಶ.1311ರಲ್ಲಿ ಮಲ್ಲಕಾಫರನು ದೋರಸಮುದ್ರದ ಮೇಲೆ ದಾಳಿ ಮಾಡಿ 312 ಆನೆಗಳು, 20,000 ಕುದುರೆಗಳು, 96 ಚಿನ್ನದ ಗಟ್ಟಿಗಳು, ಹಲವಾರು ಪೆಟ್ಟಿಗೆಗಳಷ್ಟು ಮುತ್ತುರತ್ನಗಳನ್ನು ವಶಪಡಿಸಿಕೊಂಡನು. ಇಡೀ ದೋರಸಮುದ್ರವನ್ನು ಲೂಟಿ ಮಾಡಿದ ಮಹಮ್ಮದನ ಸೈನ್ಯ ಸಿಕ್ಕ ಸಿಕ್ಕ ದೇವಾಲಯಗಳನ್ನು ನಾಶ ಮಾಡಿತು.[170] ಈ ಘಟನೆಯಿಂದ ಬಲ್ಲಾಳನು ಮುಂದಿನ ಕೆಲವು ವರ್ಷಗಳಲ್ಲಿ ರಾಜಧಾನಿಯನ್ನು ದೋರಸಮುದ್ರದಿಂದ ಬೇಲೂರು, ತೊಂಡನೂರು ಮತ್ತು ಅರುಣ ಸಮದ್ರಗಳಿಗೆ ಬದಲಾಯಿಸಿದನು. ದೋರಸಮುದ್ರದ ದಾಳಿಯ ನಂತರ ಮಲ್ಲಿಕಾಫರ್‌ನು ಕಣ್ಣಾನೂರು, ಚಿದಂಬರಂ ಮತ್ತು ವೀರದವಳಂ ನಗರಗಳನ್ನು ಲೂಟಿ ಮಾಡಿ ರಾಮೇಶ್ವರದಲ್ಲಿ ಒಂದು ಮಸೀದಿಯನ್ನು ನಿರ್ಮಾಣ ಮಾಡಿದನು.[171] ಮಲ್ಲಿಕಾಫರ್‌ನ ಸೈನ್ಯ ದೆಹಲಿಗೆ ಹಿಂದಿರುಗಿದ ನಂತರ ಬಲ್ಲಾಳನು ಹೊಯ್ಸಳ ರಾಜ್ಯಕ್ಕಾಗಿದ್ದ ನಷ್ಟವನ್ನು ಭರಿಸುವ ಉದ್ದೇಶದಿಂದ ಅಕ್ಕಪಕ್ಕದ ಸಣ್ಣಪುಟ್ಟ ರಾಜ್ಯಗಳನ್ನು ವಶಪಡಿಸಿಕೊಂಡು ಕ್ರಿ.ಶ.1316ರಲ್ಲಿ

ದೋರಸಮುದ್ರವನ್ನು ಪುನರ್‌ನಿರ್ಮಾಣ ಮಾಡಿದನು. ದೋರವಾಡಿ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದ ಕಂಪಿಲ ದೇವನನ್ನು ಸೋಲಿಸಿದ ಬಲ್ಲಾಳನು ಚಿತ್ರದುರ್ಗ, ಬಳ್ಳಾರಿ, ರಾಯಚೂರು ಮತ್ತು ಶಿವಮೊಗ್ಗ ಜಿಲ್ಲೆಯ ಭಾಗಗಳನ್ನು ವಶಪಡಿಸಿಕೊಂಡು, ಪಾಂಡ್ಯ ಸಹೋದರರ ಒಳಜಗಳವನ್ನು ಬಳಸಿಕೊಂಡು ಅರುಣ ಸಮುದ್ರ ಮತ್ತು ತಿರುವಣ್ಣಾಮಲೈ ಸುತ್ತಲಿನ ಪ್ರದೇಶಗಳನ್ನು ತನ್ನ ಅಧೀನಕ್ಕೆ ಒಳಪಡಿಸಿದನು.[172] ಈ ಸಂದರ್ಭದಲ್ಲಿ ಬಲ್ಲಾಳನು ಪುನಃ ಮುಸ್ಲಿಂರ ದಾಳಿಯನ್ನು ಎದುರಿಸಬೇಕಾಯಿತು. ದೆಹಲಿಯಲ್ಲಿ ಖಿಲ್ಜಿ ಮನೆತನದಿಂದ ತುಘಲಕ್ ಮನೆತನಕ್ಕೆ ವರ್ಗಾವಣೆಯಾಗಿ ಘಿಯಾಸುದ್ದೀನನು ಆಳ್ವಿಕೆ ನಡೆಸುತ್ತಿದ್ದು ತನ್ನ ಮಗನಾದ ಮಹಮದ್-ಬಿನ್-ತುಘಲಕ್‌ನನ್ನು ದಕ್ಷಿಣದ ದಂಡಯಾತ್ರೆಗೆ ಕಳುಹಿಸಿದನು. ಈ ಬಾರಿ ಈ ದಾಳಿಕೋರರ ಉದ್ದೇಶ ಕೇವಲ ಲೂಟಿ ಮಾಡುವುದಲ್ಲದೇ ದೇಶವನ್ನು ವಶಪಡಿಸಿಕೊಂಡು ಅಧಿಕಾರ ಸ್ಥಾಪಿಸುವುದಾಗಿತ್ತು.[173] ಕ್ರಿ.ಶ.1327ರಲ್ಲಿ ಮಹಮದ್-ಬಿನ್-ತುಘಲಕ್‌ನು ದಕ್ಷಿಣದ ಮೇಲೆ ದಂಡಯಾತ್ರೆ ಮಾಡಿ ದೋರಸಮುದ್ರವನ್ನು ಲೂಟಿ ಮಾಡಿ ಸಂಪೂರ್ಣವಾಗಿ ನಾಶ ಮಾಡಿದನು. ನಂತರ ಈತನ ಸೈನ್ಯ ಮಧುರೆಯನ್ನು ವಶಪಡಿಸಿಕೊಂಡು ಅಲ್ಲಿ ಒಬ್ಬ ಮುಸ್ಲಿಂ ಆಡಳಿತಾಧಿಕಾರಿಯನ್ನು ನೇಮಿಸಲಾಯಿತು. ಲೂಯಿ ರೈಸ್‌ರವರು ಅಭಿಪ್ರಾಯ ಪಡುವಂತೆ ಇತ್ತ ದೋರಸಮುದ್ರ ಸಂಪೂರ್ಣವಾಗಿ ನಾಶವಾಗಿದ್ದರೆ ಬಲ್ಲಾಳನು ತೊಂಡನೂರಿನಲ್ಲಿ ಅಸಮರ್ಥನಾಗಿ ವಿಶ್ರಾಂತಿ ಪಡೆಯುತ್ತಿದ್ದು ಕ್ರಿ.ಶ.1338ರಲ್ಲಿ ರಾಜಧಾನಿಯಲ್ಲಿ ಬಂದು ನೆಲೆಸಿದನು.[174] ಬಲ್ಲಾಳನು ತನ್ನ ಕೊನೆಯ ಕಾಲಘಟ್ಟದಲ್ಲಿ ಸಣ್ಣಪುಟ್ಟ ರಾಜ್ಯಗಳು, ಸಾಮಂತರನ್ನು ಒಗ್ಗೂಡಿಸಿ ಸಹಕಾರ ಯತ್ನದಿಂದ ದೇಶದ ಸಂಸ್ಕೃತಿಯನ್ನು ಉಳಿಸುವ ನಿರ್ಧಾರ ಕೈಗೊಂಡು ಆಂಧ್ರಪ್ರದೇಶದ ಪ್ರೋಲಯ ನಾಯಕ ಮತ್ತು ಕಾಪಯ ನಾಯಕರಿಗೆ ನೆರವು ನೀಡಿ ತೆಲಂಗಾಣದ ಪ್ರಾಂತ್ಯಾಧಿಕಾರಿ ಮಲಿಕ್ ಮಕ್ಬೂಲ್‌ನನ್ನು ದೆಹಲಿಗೆ ಓಡಿಸಿದರು. ಸ್ವತಃ ಬಲ್ಲಾಳನೇ ಮಲಬಾರಿನಲ್ಲಿದ್ದ ಮುಸ್ಲಿಂ ಸೈನ್ಯವನ್ನು ನಾಶಗೊಳಿಸಿ ಈ ಪ್ರದೇಶವನ್ನು ಶಂಭುವರಾಯನ ಅಧೀನದಲ್ಲಿಟ್ಟನು.[175] ಈ ಸಂದರ್ಭದಲ್ಲಿ ಮಧುರೆಯಲ್ಲಿ ಆಳ್ವಿಕೆ ಮಾಡುತ್ತಿದ್ದ ಸುಲ್ತಾನ ಅಲ್ಲಾವುದ್ದೀನ್ ಉದಾಜಿಯು ಕ್ರಿ.ಶ.1340ರಲ್ಲಿ ಹೊಯ್ಸಳರ ಮೇಲೆ ದಾಳಿ ಮಾಡಿದನು. ಕ್ರಿ.ಶ.1342ರಲ್ಲಿ ಬಲ್ಲಾಳನಿಗೂ ಮತ್ತು ಮಧುರೆಯ ಸುಲ್ತಾನನಿಗೂ 'ಕಬ್ಬಂ' ಎಂಬಲ್ಲಿ ಯುದ್ಧ ನಡೆದು ಬಲ್ಲಾಳನು ಗೆಲುವನ್ನು ಸಾಧಿಸಿದನಾದರೂ ಸುಲ್ತಾನನ ಕುತಂತ್ರದಿಂದ ಸೆರೆಯಿಡಿಯಲ್ಪಟ್ಟು ಕೊನೆಯಲ್ಲಿ ದುರಂತವಾಗಿ ಕೊಲ್ಲಲ್ಪಟ್ಟನು.[176] ಮುಸ್ಲಿಂ ಬರಹಗಾರ ಇಬ್ಬನ್ ಬತೂತನು ತನ್ನ ಬರವಣಿಗೆಯಲ್ಲಿ 20,000 ಮುಸಲ್ಮಾನ ಸೈನಿಕರನ್ನು ಒಳಗೊಂಡ ಒಂದು ಲಕ್ಷ ಸೈನಿಕರ ಸೈನ್ಯದೊಂದಿಗೆ ಬಲ್ಲಾಳನು ಕೇವಲ ಆರು ಸಾವಿರ ಸೈನಿಕರಿದ್ದ ಮಧುರೆಯ ಸುಲ್ತಾನನ ಸೈನ್ಯವನ್ನು ಕಬ್ಬಂ ಎಂಬಲ್ಲಿ ಸೋಲಿಸಿದನು. ವಿಶ್ರಾಂತಿಯ ನೆಪದಲ್ಲಿ ಕಾಲಾವಕಾಶ

ಕೋರಿದ ಸುಲ್ತಾನ ನಂತರ ಹೊಯ್ಸಳ ಸೈನ್ಯದ ಮೇಲೆ ದಾಳ ಮಾಡಿ ಬಲ್ಲಾಳನನ್ನು ಸೆರೆಹಿಡಿದು ವಿಕೃತವಾಗಿ ಕೊಂದು, ಆತನ ಚರ್ಮವನ್ನು ಸುಲಿದು ಅದರೊಳಗೆ ಹುಲ್ಲನ್ನು ತುಂಬಿ ಮಧುರೆಯ ಕೋಟೆಯ ಗೋಡೆಯ ಮೇಲೆ ಪ್ರದರ್ಶನಕ್ಕೆ ಇಟ್ಟನೆಂದು ದಾಖಲು ಮಾಡಿದ್ದಾನೆ.[177] ಐದು ದಶಕಗಳಲ್ಲಿ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದ ಮೂರನೇ ಬಲ್ಲಾಳನ ಈ ರೀತಿಯ ದುರಂತ ಅಂತ್ಯದ ನಂತರ ಇವನ ಮಗ ವಿರೂಪಾಕ್ಷ ಬಲ್ಲಾಳನು ಕ್ರಿ.ಶ.1346ರವರೆಗೆ ಆಳ್ವಿಕೆ ನಡೆಸಿದನಾದರೂ ಈತನು ಅಸಮರ್ಥನಾದುದರಿಂದ ಹೊಯ್ಸಳ ವಂಶದ ಆಳ್ವಿಕೆ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಅಂತ್ಯವಾಗುತ್ತದೆ.

ಹಾಸನ ತಾಲೂಕಿನಲ್ಲಿ ಮೂರನೇ ಬಲ್ಲಾಳನು ಆಳ್ವಿಕೆ ಮಾಡಿರುವುದಕ್ಕೆ ಸಂಬಂಧಿಸಿದಂತೆ ಒಟ್ಟು 08 ಶಾಸನಗಳು ಕಂಡು ಬರುತ್ತವೆ. ಕ್ರಿ.ಶ.1295ರ ದೊಡ್ಡಗದ್ದವಳ್ಳಿಯ ಶಾಸನವು[178] ಬಲ್ಲಾಳದೇವನ ಆಳ್ವಿಕೆಯಲ್ಲಿ ಪನ್ನಾಯದ ಹೆಗ್ಗಡೆ ಮಸಣಯ್ಯನ ಮಗ ಕೇತಮಲ್ಲಕೋಟೆಯ ಮಾಚೆಯನು ಶ್ರೀಮಹಾಲಕ್ಷ್ಮೀದೇವಿಯ ವೀಳ್ಯಕ್ಕೆ ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ. ಕ್ರಿ.ಶ.1310ರ ದುದ್ದ ಗ್ರಾಮದ ವೀರಗಲ್ಲು ಶಾಸನವು[179] ವೀರಬಲ್ಲಾಳನ ಆಳ್ವಿಕೆಯ ಕಾಲಘಟ್ಟದಲ್ಲಿ ತುರುಕರು (ಮುಸ್ಲೀಮರು) ದೋರಸಮುದ್ರದ ಮೇಲೆ ದಾಳ ಮಾಡಿದಾಗ ದುದ್ದದ ನಡೆಗೋಡೆಯ ಮಾಚಯ ನಾಯಕನ ಮಗ ಬಯಿಚೆಯನಾಯಕನು ಹೋರಾಡಿ ಮಡಿದಾಗ ಮಾಚಯನು ವೀರಗಲ್ಲನ್ನು ನಿಲ್ಲಿಸಿದನೆಂಬುದನ್ನು ತಿಳಸುತ್ತದೆ. ಈ ಶಾಸನವನ್ನು ಬರೆದವನು ಇಟಕೆನಾಯಕನ ಮಗ ನಂಗೋಜ ಎಂಬುದೂ ಸಹ ಸ್ಪಷ್ಟವಾಗುತ್ತದೆ. ಇದೇ ಗ್ರಾಮದ ಮತ್ತೊಂದು ವೀರಗಲ್ಲು ಶಾಸನವು[180] ವೀರಬಲ್ಲಾಳನ ಆಳ್ವಿಕೆಯಲ್ಲಿ ತುರುಕನು ದೋರಸಮುದ್ರಕ್ಕೆ ದಾಳ ಮಾಡಲು ಬಂದಾಗ ಬಯಿಚಯನಾಯಕನ ಮಗ ಹಿರಿಯ ತಮ್ಮಣ್ಣ ಮರಣ ಹೊಂದಿದ ಅಂಶವನ್ನು ಉಲ್ಲೇಖಿಸುತ್ತದೆ. ಅವ್ವೇರಹಳ್ಳಿ ಗ್ರಾಮದ ಕ್ರಿ.ಶ.1314ರ ಶಾಸನವು[181] ಮೂರನೇ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಅಂಕೆಯ ದಣ್ಣಾಯಕರ ಅಳಯ ಮಾಚಯದಣ್ಣಾಯಕನು ದೊಡ್ಡ ಅಗ್ರಹಾರ ಮತ್ತು ಚನ್ನಕೇಶವನ ಪುರವಾದ ಗೊರವೂರಿನ ಸಮೀಪದ ಕಾಲುವಳ್ಳಿ, ದಾವರಹಳ್ಳಿಯ ದಕ್ಷಿಣ ದಿಕ್ಕಿನ ಬಡಗಣ ಹಳ್ಳವನ್ನು ಈ ಹಳ್ಳಿಯ ಜನರಿಂದ ಕ್ರಯ ಮಾಡಿಸಿಕೊಂಡು ತಮ್ಮ ತಾಯಿ ಮಾಯಕ್ಕನ ಹೆಸರಿನಲ್ಲಿ ಮೂನಾಱ್ಲು ಸಾವಿರ ಹಣವನ್ನು ಖರ್ಚು ಮಾಡಿ ಕೆರೆಯನ್ನು ನಿರ್ಮಿಸಿದಾಗ ಅಲ್ಲಿಯ ಮಹಾಜನರು ಮಾಚಯ ದಣ್ಣಾಯಕನ ಕುಟುಂಬಕ್ಕೆ 140 ವ್ರಿತ್ತಿಯನ್ನು ಸ್ವಯಿಚ್ಛೆಯಿಂದ ಕೆರೆಗುಡುಗೆಯಾಗಿ ದಾನ ನೀಡಿದ ಅಂಶಗಳನ್ನು ತಿಳಸುತ್ತದೆ. ನಂತರ ಈ ಭೂಮಿಯು ದೇವದಾನದ ಹೆಸರಿನಲ್ಲಿ ದೇವಾಲಯಕ್ಕೆ ಉಡುಗೊರೆಯಾಗಿ ಸಲ್ಲುತ್ತದೆ. ಈ ಶಾಸನವನ್ನು ಬರೆದ ಓಜ ಮಾದಣ್ಣನ ಮಗ ಸೇನಬೋವ ನೀಲಕಂಠದೇವ ಎಂಬುದು ತಿಳದು ಬಂದಿದೆ. ಕ್ರಿ.ಶ.1314ರ ಬನವಾಸೆ ಗ್ರಾಮದ

ಶಾಸನವು[182] ಮದನಾದಿಯಾಗ್ರಹರವಾದ ಗೊರೂರಿನ ವ್ರಿತ್ತಿಯೊಳಗೆ ಪ್ರಯಾಗಿ ಮಲ್ಲೈಯಾಂಡಿದೇವನ ತಮ್ಮ ನಲ್ಲವಣ್ಣ, ಅಲ್ಲಾಳಭಟ್ಟಯನ ಮಗ ಕಾಲಿಯಣ್ಣ, ಎಜ್ಜಪುರುಷದೇವನ ಮಗ ಮತ್ತು ಈತನ ತಮ್ಮ ನಿಂಗಣ್ಣ ಇವರುಗಳು ಬನವಾಸೆ ಗ್ರಾಮದ ಮೂಡಣ ದಿಕ್ಕಿನ ಬಳ್ಳಗಟ್ಟದಲು ತಮ್ಮ ಗದ್ದೆ ಮತ್ತು ಹೊಲಗಳನ್ನು ನಾಲ್ಕು ದಿಕ್ಕಿನಲ್ಲಿ ತೋರಣವನ್ನು ನಿಲ್ಲಿಸಿ, ಕ್ರಯ ಮಾಡಿಕೊಟ್ಟು ಮಾಚಯದಂಡನಾಯಕರ ಮಕ್ಕಳಿಗೆ ಧಾರಾಪೂರ್ವಕವಾಗಿ ದಾನ ನೀಡಿದ ವಿಚಾರಗಳನ್ನು ಪ್ರಸ್ತಾಪಿಸುತ್ತದೆ. ಕ್ರಿ.ಶ.1314ರ ಬ್ಯಾಡರಹಳ್ಳಿ ಗ್ರಾಮದ ಶಾಸನವು[183] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಮಹಾಪ್ರಧಾನ ಅಂಕೆಯು ದಣ್ಣಾಯಕನ ಅಳಿಯ, ಮಾಚಯ ದಣ್ಣಾಯಕನ ತಾಯಿ ಅಕ್ಕಯ್ಯಮ್ಮನವರು ಅಗ್ರಹಾರವಾದ ಹಳೆಯ ಗೊರೂರಿನ ಪಕ್ಕದ ಬ್ಯಾಡರಹಳ್ಳಿಯ ಮಹಾಜನಗಳ ಕೈಯಲ್ಲಿ ಈ ಹಳ್ಳಿಯ ಉತ್ತರ ದಿಕ್ಕಿನ ಹಳ್ಳವನ್ನು ಕೆರೆ ನಿವೇಶನಕ್ಕಾಗಿ ಕ್ರಯಪತ್ರ ಮಾಡಿ, ತನ್ನ ಮಗ ಮಾಚಯದಣ್ಣಾಯಕನ ಹೆಸರಿನಲ್ಲಿ 3500 ಹೊನ್ನನ್ನು ನೀಡಿ ಮಾಚಸಮುದ್ರ ಎಂಬ ಕೆರೆಯನ್ನು ನಿರ್ಮಿಸಿದಾಗ, ಗೊರೂರಿನ 140 ವ್ರಿತ್ತಿಯನ್ನು ಹೊಂದಿದ್ದ ಮಹಾಜನಗಳು ಸರ್ವರೂ ಒಪ್ಪಿ ಹರಿವೂರಳ್ಳಿಯ ಸಮಸ್ತ ಪ್ರಜೆಗಳ ಮುಂದೆ, ಈ ಮಾಚಸಮುದ್ರದ ಕೆಳಗಿನ ಗದ್ದೆ ಮತ್ತು ಹೊಲವನ್ನು ಮಾಚಯ ದಂಡನಾಯಕರ ಕುಟುಂಬಕ್ಕೆ ಧಾರಾಪೂರ್ವಕವಾಗಿ ದಾನ ನೀಡಿದ ಅಂಶಗಳನ್ನು ದಾಖಲಿಸಿದೆ. ಅಮ್ಮಗೌಡನ ಹಳ್ಳಿ ಗ್ರಾಮದ ವೀರಗಲ್ಲು ಶಾಸನವು[184] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಅಮ್ಮಗೋಡಿಯ ಮಗ ದುದ್ದದಲ್ಲಿ ತುರುಗೋಳ್ ಕಾಳಗದಲ್ಲಿ ಗೋವನ್ನು ರಕ್ಷಿಸಲು ಹೋರಾಡಿ ಮಡಿದನೆಂಬುದನ್ನು ತಿಳಿಸುತ್ತದೆ. ಆದರೆ ಸ್ಪಷ್ಟ ಕಾಲಮಾನವಿಲ್ಲದ ಈ ಶಾಸನವು ವೀರಬಲ್ಲಾಳನ ಹೆಸರು ಉಲ್ಲೇಖಿಸಿದ್ದು, ಇವನು ಎರಡನೇ ಬಲ್ಲಾಳನೋ ಅಥವಾ ಮೂರನೇ ಬಲ್ಲಾಳನೋ ಎಂಬುದು ಅಸ್ಪಷ್ಟವಾಗಿದೆ. ಉಡುವಾರೆ ಗ್ರಾಮದ ಕ್ರಿ.ಶ.13-14ನೇ ಶತಮಾನದ ಕಾಲಘಟ್ಟಕ್ಕೆ ಹೊಂದಿಕೆಯಾಗುವ ಶಾಸನವು[185] ಅಪೂರ್ಣವಾಗಿದ್ದು ದಂಮಾಗೆಯ ಮಾದಿಯಣ್ಣನ ಆಳ್ವಕೆಯನ್ನು ಮತ್ತು ಉಡುವಾರೆಯ ಬಾಚೆಯನಾಯಕನ ಹೆಸರನ್ನು ಉಲ್ಲೇಖಿಸುತ್ತದೆ. ವೀರಬಲ್ಲಾಳನ ಆಳ್ವಕೆಯನ್ನು ಉಲ್ಲೇಖಿಸುವ ಈ ಶಾಸನವು ಎರಡನೇ ಬಲ್ಲಾಳನ ಕಾಲಘಟ್ಟದ್ದೋ ಅಥವಾ ಮೂರನೇ ಬಲ್ಲಾಳನ ಕಾಲಘಟ್ಟದ್ದೋ ಎಂಬುದು ಅಸ್ಪಷ್ಟ. ಆದರೆ ಈ ಶಾಸನ ಕಂಡು ಬಂದಿರುವ ಉಡುವಾರೆ ಗ್ರಾಮದ ಅಕ್ಕಪಕ್ಕದ ಗ್ರಾಮಗಳಾದ ಅವ್ವೇರಹಳ್ಳಿ, ಬನವಾಸೆ ಮತ್ತು ಬ್ಯಾಡರಹಳ್ಳಿ ಗ್ರಾಮಗಳಲ್ಲಿ ಮೂರನೇ ಬಲ್ಲಾಳನ ಆಳ್ವಿಕೆಯ ಕಾಲದ ಶಾಸನಗಳು ಕಂಡು ಬಂದಿರುವುದರಿಂದ ಬಹುಶಃ ಈ ಶಾಸನವನ್ನು ಮೂರನೇ ಬಲ್ಲಾಳನ ಕಾಲಘಟ್ಟಕ್ಕೆ ಅನ್ವಯಿಸಬಹುದಾಗಿದೆ.

ಹಾಸನ ತಾಲೂಕು ಹೊಯ್ಸಳರ ನೇರ ಆಳ್ವಿಕೆಗೆ ಒಳಪಟ್ಟಿದ್ದಂತಹ ಪ್ರಮುಖ ಕಾರ್ಯಕ್ಷೇತ್ರವಾಗಿದ್ದು ಹೊಯ್ಸಳರ ಪ್ರಾರಂಭಿಕ ಅರಸರುಗಳಾದ ನೃಪಕಾಮ ಮತ್ತು ಎರೆಯಂಗ ಹಾಗೂ ಕೊನೆಯ ಕಾಲಘಟ್ಟದ ರಾಮನಾಥ, ವಿಶ್ವನಾಥ ಮತ್ತು ವಿರೂಪಾಕ್ಷ ಬಲ್ಲಾಳನನ್ನು ಹೊರತುಪಡಿಸಿ ಉಳಿದ ಎಲ್ಲಾ ಅರಸರ ಆಳ್ವಿಕೆಗೆ ಒಳಪಟ್ಟಿತ್ತೆಂಬುದು ಈ ತಾಲೂಕಿನಲ್ಲಿ ಕಂಡು ಬಂದಿರುವ ಇವರ ಕಾಲದ ಶಾಸನಗಳಿಂದ ತಿಳಿದು ಬರುತ್ತದೆ. ಹೆಚ್ಚು ಶಾಸನಗಳು ಎರಡನೇ ಬಲ್ಲಾಳ, ಒಂದನೇ ನರಸಿಂಹ ಮತ್ತು ವಿಷ್ಣುವರ್ಧನನ ಆಳ್ವಿಕೆಯ ಬಗ್ಗೆ ತಿಳಿಸಿದರೆ, ಅತೀ ಕಡಿಮೆ ಸಂಖ್ಯೆಯ ಶಾಸನಗಳು ವಿನಯಾದಿತ್ಯ, ಒಂದನೇ ಬಲ್ಲಾಳ, ಸೋಮೇಶ್ವರ ಮತ್ತು ಮೂರನೇ ಬಲ್ಲಾಳನ ಆಳ್ವಿಕೆಯನ್ನು ಪ್ರತಿನಿಧಿಸುತ್ತವೆ. ಇಲ್ಲಿ ಕಂಡು ಬಂದಿರುವ ಬಹುಪಾಲು ಶಾಸನಗಳು ದಾನ ಶಾಸನಗಳಾಗಿದ್ದು ಇವು ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ದೇವಾಲಯದ ಶ್ರೀಕಾರ್ಯಗಳಿಗೆ, ಸ್ಥಾನಪತಿಗಳಿಗೆ ಮತ್ತು ಅಗ್ರಹಾರಗಳಿಗೆ, ದಾನ-ದತ್ತಿಗಳನ್ನು ನೀಡಿರುವ ಬಗ್ಗೆ ಉಲ್ಲೇಖಿಸುತ್ತವೆ. ಇನ್ನೂ ಕೆಲವು ಶಾಸನಗಳು ಯುದ್ಧಗಳಲ್ಲಿ, ಗೋಗ್ರಹಣ ಕಾಲದಲ್ಲಿ, ಗಡಿಕಾಳಗದಲ್ಲಿ ಮತ್ತು ಸ್ತ್ರೀಯರ ರಕ್ಷಣೆಯಲ್ಲಿ ಹೋರಾಡಿ ಮಡಿದವರ ಬಗ್ಗೆ ಪ್ರಸ್ತಾಪಿಸುತ್ತವೆ. ಹೊಯ್ಸಳರ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ನೀರ್ಗುಂದ ನಾಡು ಪ್ರಮುಖವಾಗಿದ್ದು ಇದರ ವ್ಯಾಪ್ತಿಯೊಳಗೆ ಬರುವ ಹಾಸನ ತಾಲೂಕಿನ ಸಾಲಗಾಮೆ, ಗೊರೂರು, ಕೆಲವತ್ತಿ, ಶಾಂತಿಗ್ರಾಮ, ಕೋರವಂಗಲ, ಹೊನ್ನಾವರ ಮತ್ತು ಹಿರೇಕಡಲೂರು ಪ್ರದೇಶಗಳು ಪ್ರಮುಖ ಅಗ್ರಹಾರ ಕೇಂದ್ರಗಳಾಗಿದ್ದವು. ಹೊಯ್ಸಳರ ರಾಜಧಾನಿ ಮತ್ತು ಹೃದಯ ಭಾಗವಾದ ದೋರಸಮುದ್ರಕ್ಕೆ ಈ ಭೂಪ್ರದೇಶಗಳು ಬಹಳ ಸನಿಹದಲ್ಲೇ ಇದ್ದುದರಿಂದ ಸ್ವಾಭಾವಿಕವಾಗಿ ಹೆಚ್ಚಿನ ರಾಜಾಶ್ರಯವನ್ನು ಪಡೆಯುವ ಮೂಲಕ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳೂ ಸಹ ಆಗಿದ್ದವು. ಒಟ್ಟಿನಲ್ಲಿ ಇತಿಹಾಸದ ಮೂಲಾಧಾರಗಳ ಅಧ್ಯಯನದಿಂದ ಆಳ್ವಿಕೆಯ ಕಾಲಘಟ್ಟದಲ್ಲಿ ಹಾಸನ ತಾಲೂಕು ಪ್ರಮುಖ ರಾಜಕೀಯ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆದ ಪ್ರದೇಶವಾಗಿತ್ತೆಂದು ಅಭಿಪ್ರಾಯಿಸಬಹುದಾಗಿದೆ.

## ಅಡಿ ಟಿಪ್ಪಣಿಗಳು

1. ಹಾಸನ ಜಿಲ್ಲಾ ಗೆಜೆಟಿಯರ್, 1971, ಪುಟ ಸಂಖ್ಯೆ, 40

2. ಕೃಷ್ಣಸ್ವಾಮಿ ಅಯ್ಯಂಗಾರ್.ಬಿ.ಎಸ್, ಆಂಜನ್ ಆಫ್ ದಿ ಹೊಯ್ಸಳಾಸ್ ಇನ್ ಹೊಯ್ಸಳ ಡೈನಾಸ್ಟಿ, ಪು.ಸಂ.38, 43

3. ಸುಬ್ರಮಣಿಯನ್. ಎನ್, ಆಂಜನ್ ಆಫ್ ದಿ ಹೊಯ್ಸಳಾಸ್ ಇನ್ ಹೊಯ್ಸಳ ಡೈನಾಸ್ಟಿ, ಪು.ಸಂ.44-53

4. ಎ.ಕ.ಸಂ.11, ಶಾ.ಸಂ. ಚಿ.ಮ. 14, 15, 16, 73, ಪು.ಸಂ.10-11, 42

5. ಎ.ಕ.ಸಂ.11, ಶಾ.ಸಂ. ಚಿ.ಮ. 15, ಪು.ಸಂ.11

6. ಎ.ಕ.ಸಂ.11, ಶಾ.ಸಂ. ಚಿ.ಮ. 16, ಪು.ಸಂ.11

7. ಷೇಕ್ ಆಲಿ, ಬಿ, ಹೊಯ್ಸಳ ಡೈನಾಸ್ಟಿ, ಪು.ಸಂ.33

8. ಕನ್ನಡ ವಿಷಯ ವಿಶ್ವಕೋಶ, ಸಂಪುಟ,2, ಪು.ಸಂ.1386

9. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ,1, ಪು.ಸಂ.4

10. ಷೆಟ್ಟರ್. ಎಸ್. ದಿ ಹೊಯ್ಸಳ ಟೆಂಪಲ್ಸ್, ಸಂಪುಟ,1, ಪು.ಸಂ.4

11. ವಿಲಿಯಂ ಕೊಹಿಲೋ, ದಿ ಹೊಯ್ಸಳ ವಂಶ, ಪು.ಸಂ.26

12. ವಿಲಿಯಂ ಕೊಹಿಲೋ, ದಿ ಹೊಯ್ಸಳ ವಂಶ, ಪು.ಸಂ.26

13. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.66

14. ಮುದ್ದಾಚಾರಿ, ಬಿ. ಹೊಯ್ಸಳ-ಚಾಳುಕ್ಯ ರಿಲೇಷನ್ಸ್ ಇನ್ ಹೊಯ್ಸಳ ಡೈನಾಸ್ಟಿ, ಪು.ಸಂ.56

15. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984 ಪು.ಸಂ.209

16. ವಿಲಿಯಂ ಕೊಹಿಲೋ, ದಿ ಹೊಯ್ಸಳ ವಂಶ, ಪು.ಸಂ.44

17. ಎ.ಕ.ಸಂ.8, ಹಾಸನ, ಶಾ.ಸಂ,71, ಪು.ಸಂ.283-284

18. ವಿಲಿಯಂ ಕೊಹಿಲೋ, ದಿ ಹೊಯ್ಸಳ ವಂಶ, ಪು.ಸಂ.47

19. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984 ಪು.ಸಂ.209

20. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.67

21. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984 ಪು.ಸಂ.209

22. ಎ.ಕ.ಸಂ.11, ಚಿ.ಮ.210, ಪು.ಸಂ.131-136

23. ಎ.ಕ.ಸಂ.7, ನಾಗಮಂಗಲ.72, ಪು.ಸಂ.53-60

24. ಎ.ಕ.ಸಂ.8, ಹಾಸನ, 177, ಪು.ಸಂ.413

25. ಎ.ಕ.ಸಂ.8, ಹಾಸನ, 178, ಪು.ಸಂ.413-414

26. ಎ.ಕ.ಸಂ.8, ಪ್ರಸ್ತಾವನೆ, ಪು.ಸಂ.1

27. ಗೋಪಾಲ್.ಬಾ.ರಾ, ಮೈನರ್ ಡೈನಾಸ್ಟೀಸ್ ಆಫ್ ಸೌತ್ ಇಂಡಿಯಾ, ಕರ್ನಾಟಕ, ಸಂಪುಟ-1, ಪು.ಸಂ.182

28. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.13

29. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ.210

30. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.13

31. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ.210

32. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.68

33. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.19

34. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.19

35. ಎ.ಕ.ಸಂ.8, ಹಾಸನ, 36, ಪು.ಸಂ.263-264

36. ಎ.ಕ.ಸಂ.8, ಹಾಸನ, 4, ಪು.ಸಂ.217

37. ಎ.ಕ.ಸಂ.8, ಹಾಸನ, 121, ಪು.ಸಂ.337-338

38. ಎ.ಕ.ಸಂ.8, ಪ್ರಸ್ತಾವನೆ, ಪು.ಸಂ.1

39. ಎ.ಕ.ಸಂ.8, ಹಾಸನ, 167, ಪು.ಸಂ.401-404

40. ಎ.ಕ.ಸಂ.8, ಹಾಸನ, 76, ಪು.ಸಂ.286-287

41. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.99

42. ಎ.ಕ.ಸಂ.8, ಹಾಸನ, 88, ಪು.ಸಂ.301-302

43. ಎ.ಕ.ಸಂ.8, ಹಾಸನ, 66, ಪು.ಸಂ.277–280

44. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.112

45. ಎ.ಕ.ಸಂ.8, ಹಾಸನ, 67, ಪು.ಸಂ. 280–281

46. ಎ.ಕ.ಸಂ.8, ಹಾಸನ, 80, ಪು.ಸಂ. 290

47. ಎ.ಕ.ಸಂ.8, ಹಾಸನ, 14, ಪು.ಸಂ. 427–250

48. ಎ.ಕ.ಸಂ.8, ಹಾಸನ, ಪ್ರಸ್ತಾವನೆ, ಪು.ಸಂ. ಐ 11

49. ಎ.ಕ.ಸಂ.8, ಹಾಸನ, 95, ಪು.ಸಂ. 306–309

50. ಎ.ಕ.ಸಂ.8, ಹಾಸನ, 19, ಪು.ಸಂ. 254

51. ಎ.ಕ.ಸಂ.8, ಹಾಸನ, 24, ಪು.ಸಂ. 257

52. ಎ.ಕ.ಸಂ.8, ಹಾಸನ, 85, ಪು.ಸಂ. 300

53. ಎ.ಕ.ಸಂ.8, ಹಾಸನ, 90, ಪು.ಸಂ.303–304

54. ಎ.ಕ.ಸಂ.8, ಹಾಸನ, 92, ಪು.ಸಂ.304–305

55. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–1, 1984, ಪು.ಸಂ.211

56. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.118

57. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.120

58. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.71

59. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.122

60. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.71

61. ಎ.ಕ.ಸಂ.8, ಹಾಸನ, 72, ಪು.ಸಂ. 284

62. ಎ.ಕ.ಸಂ.8, ಹಾಸನ, 73, ಪು.ಸಂ. 284–285

63. ಎ.ಕ.ಸಂ.8, ಹಾಸನ, 146. ಪು.ಸಂ. 376–378

64. ಎ.ಕ.ಸಂ.8, ಹಾಸನ, 142, ಪು.ಸಂ. 361–366

65. ಎ.ಕ.ಸಂ.8, ಹಾಸನ, 98, ಪು.ಸಂ. 310

66. ಎ.ಕ.ಸಂ.8, ಹಾಸನ, 149, ಪು.ಸಂ. 380

67. ಎ.ಕ.ಸಂ.8, ಹಾಸನ, 102, ಪು.ಸಂ. 312-313

68. ಎ.ಕ.ಸಂ.8, ಹಾಸನ, 129, ಪು.ಸಂ. 347-351

69. ಎ.ಕ.ಸಂ.8, ಹಾಸನ, 196, ಪು.ಸಂ. 422

70. ಎ.ಕ.ಸಂ.8, ಹಾಸನ, 198, ಪು.ಸಂ. 423

71. ಎ.ಕ.ಸಂ.8, ಹಾಸನ, 197, ಪು.ಸಂ. 422-423

72. ಎ.ಕ.ಸಂ.8, ಹಾಸನ, 199, ಪು.ಸಂ.423-424

73. ಎ.ಕ.ಸಂ.8, ಹಾಸನ, 200, ಪು.ಸಂ. 424

74. ಎ.ಕ.ಸಂ.8, ಹಾಸನ, 21, ಪು.ಸಂ. 255

75. ಎ.ಕ.ಸಂ.8, ಹಾಸನ, 116, ಪು.ಸಂ. 331-335

76. ಎ.ಕ.ಸಂ.8, ಹಾಸನ, 22, ಪು.ಸಂ. 256

77. ಎ.ಕ.ಸಂ.8, ಹಾಸನ, 118, ಪು.ಸಂ. 336

78. ಎ.ಕ.ಸಂ.8, ಹಾಸನ, 133, ಪು.ಸಂ. 352-357

79. ಎ.ಕ.ಸಂ.8, ಹಾಸನ, 162, ಪು.ಸಂ. 398

80. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ.211

81. ಕನ್ನಡ ವಿಷಯ ವಿಶ್ವಕೋಶ, ಸಂಪುಟ-2, ಪು.ಸಂ.1388

82. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ.211

83. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.135

84. ಷೆಟ್ಟರ್.ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.22

85. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.71

86. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.140

87. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.142

88. ಷೆಟ್ಟರ್.ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.22

89. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.72

90. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.156

91. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.157

92. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ.211

93. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.159

94. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ.213

95. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.72

96. ಎ.ಕ.ಸಂ.8, ಹಾಸನ, 96, ಪು.ಸಂ. 309

97. ಎ.ಕ.ಸಂ.8, ಹಾಸನ, 106, ಪು.ಸಂ. 314-316

98. ಎ.ಕ.ಸಂ.8, ಹಾಸನ, 128, ಪು.ಸಂ. 343-347

99. ಎ.ಕ.ಸಂ.8, ಹಾಸನ, 174, ಪು.ಸಂ. 408-411

100. ಎ.ಕ.ಸಂ.8, ಹಾಸನ, 147, ಪು.ಸಂ. 378-379

101. ಎ.ಕ.ಸಂ.8, ಹಾಸನ, 117, ಪು.ಸಂ. 336

102. ಎ.ಕ.ಸಂ.8, ಹಾಸನ, 120, ಪು.ಸಂ. 337

103. ಎ.ಕ.ಸಂ.8, ಹಾಸನ, 140, ಪು.ಸಂ. 360-361

104. ಎ.ಕ.ಸಂ.8, ಹಾಸನ, 154, ಪು.ಸಂ. 383-384

105. ಎ.ಕ.ಸಂ.8, ಹಾಸನ, 29, ಪು.ಸಂ. 259

106. ಎ.ಕ.ಸಂ.8, ಹಾಸನ, 105, ಪು.ಸಂ. 313-314

107. ಎ.ಕ.ಸಂ.8, ಹಾಸನ, 127, ಪು.ಸಂ. 342

108. ಎ.ಕ.ಸಂ.8, ಹಾಸನ, 41, ಪು.ಸಂ. 266-267

109. ಎ.ಕ.ಸಂ.8, ಹಾಸನ, 35, ಪು.ಸಂ. 262-267

110. ಎ.ಕ.ಸಂ.8, ಹಾಸನ, 81, ಪು.ಸಂ. 290-291

111. ಎ.ಕ.ಸಂ.8, ಹಾಸನ, 160, ಪು.ಸಂ. 390-393

112. ಎ.ಕ.ಸಂ.8, ಹಾಸನ, 158, ಪು.ಸಂ. 386-390

113. ಎ.ಕ.ಸಂ.8, ಹಾಸನ, 144, ಪು.ಸಂ. 367–371

114. ಎ.ಕ.ಸಂ.8, ಹಾಸನ, 28, ಪು.ಸಂ. 358–359

115. ಎ.ಕ.ಸಂ.8, ಹಾಸನ, 145, ಪು.ಸಂ. 371–376

116. ಎ.ಕ.ಸಂ.8, ಹಾಸನ, 150, ಪು.ಸಂ. 380–381

117. ಎ.ಕ.ಸಂ.8, ಹಾಸನ, 158, ಪು.ಸಂ. 386–390

118. ಎ.ಕ.ಸಂ.8, ಹಾಸನ, 160, ಪು.ಸಂ. 390–393

119. ಎ.ಕ.ಸಂ.8, ಹಾಸನ, 211, ಪು.ಸಂ. 430

120. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.160–161

121. ಷೆಟ್ಟರ್.ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1, ಪು.ಸಂ.25

122. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.160

123. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.169

124. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.72

125. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.73

126. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–1, ಪು.ಸಂ.213

127. ಷೇಕ್ ಆಲಿ. ಬಿ, ಹೊಯ್ಸಳ ಡೈನಾಸ್ಟಿ, ಪು.ಸಂ.68–69

128. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1, ಪು.ಸಂ. 28–29

129. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.178–179

130. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1, ಪು.ಸಂ. 29

131. ಎ.ಕ.ಸಂ.8, ಹಾಸನ, 70, ಪು.ಸಂ. 282–283

132. ಎ.ಕ.ಸಂ.8, ಹಾಸನ, 25, ಪು.ಸಂ. 257–258

133. ಎ.ಕ.ಸಂ.8, ಹಾಸನ, 26, ಪು.ಸಂ. 258

134. ಎ.ಕ.ಸಂ.8, ಹಾಸನ, 161, ಪು.ಸಂ. 393–398

135. ಎ.ಕ.ಸಂ.8, ಹಾಸನ, 137, ಪು.ಸಂ. 358–359

136. ಎ.ಕ.ಸಂ.8, ಹಾಸನ, 210, ಪು.ಸಂ. 429–430

137. ಎ.ಕ.ಸಂ.8, ಹಾಸನ, 112, ಪು.ಸಂ. 319–323

138. ಎ.ಕ.ಸಂ.8, ಹಾಸನ, 82, ಪು.ಸಂ. 291–292

139. ಎ.ಕ.ಸಂ.8, ಹಾಸನ, 17, 253–254

140. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–1, ಪು.ಸಂ.213

141. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1, ಪು.ಸಂ.30

142. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–1, ಪು.ಸಂ.213

143. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.191–192

144. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.191–192

145. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1, ಪು.ಸಂ.31

146. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–1, ಪು.ಸಂ.214

147. ಎ.ಕ.ಸಂ.8, ಹಾಸನ, 63, ಪು.ಸಂ. 276

148. ಎ.ಕ.ಸಂ.8, ಹಾಸನ, 58, ಪು.ಸಂ. 273

149. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.198

150. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಪು.ಸಂ.32

151. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.202

152. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಪು.ಸಂ.32

153. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.75

154. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–1, 1984, ಪು.ಸಂ.214

155. ಎ.ಕ.ಸಂ.8, ಹಾಸನ, 23, ಪು.ಸಂ. 256–257

156. ಎ.ಕ.ಸಂ.8, ಹಾಸನ, 75, ಪು.ಸಂ. 285–286

157. ಎ.ಕ.ಸಂ.8, ಹಾಸನ, 136, ಪು.ಸಂ. 358

158. ಎ.ಕ.ಸಂ.8, ಹಾಸನ, 78, ಪು.ಸಂ. 288–289

159. ಎ.ಕ.ಸಂ.8, ಹಾಸನ, 47, ಪು.ಸಂ. 269

160. ಎ.ಕ.ಸಂ.8, ಹಾಸನ, 48, ಪು.ಸಂ. 270

161. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.75

162. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ. 214

163. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.214-215

164. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.215-216

165. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ. 214

166. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.222

167. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.75

168. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.35

169. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.35

170. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.231

171. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.36

172. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ. 215

173. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ. 217

174. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.239

175. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984, ಪು.ಸಂ. 217

176. ಷೆಟ್ಟರ್. ಎಸ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ-1, ಪು.ಸಂ.36-37

177. ವಿಲಿಯಂ ಕೊಹಿಲೋ, ಹೊಯ್ಸಳ ವಂಶ, ಪು.ಸಂ.249-250

178. ಎ.ಕ.ಸಂ.8, ಹಾಸನ, 31, ಪು.ಸಂ.260

179. ಎ.ಕ.ಸಂ.8, ಹಾಸನ, 138, ಪು.ಸಂ.259

180. ಎ.ಕ.ಸಂ.8, ಹಾಸನ, 139, ಪು.ಸಂ.359-360

181. ಎ.ಕ.ಸಂ.8, ಹಾಸನ, 187, ಪು.ಸಂ.416-417

182. ಎ.ಕ.ಸಂ.8, ಹಾಸನ, 188, ಪು.ಸಂ.418

183. ಎ.ಕ.ಸಂ.8, ಹಾಸನ, 206, ಪು.ಸಂ.427-428

184. ಎ.ಕ.ಸಂ.8, ಹಾಸನ, 175, ಪು.ಸಂ.412

185. ಎ.ಕ.ಸಂ.8, ಹಾಸನ, 189, ಪು.ಸಂ.418-419

## ಅಧ್ಯಾಯ–ಮೂರು

## ಹೊಯ್ಸಳರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳು

ಭಾರತದ ವಾಸ್ತು ಮತ್ತು ಶಿಲ್ಪಕಲಾ ಪರಂಪರೆಯಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳು ಮತ್ತು ಬಸದಿಗಳು ತಮ್ಮದೇ ಆದಂತಹ ವಿಶಿಷ್ಟ ಸ್ಥಾನವನ್ನು ಪಡೆದಿವೆ. ಕ್ರಿ.ಶ.11ನೆಯ ಶತಮಾನದಿಂದ 14ನೆಯ ಶತಮಾನದ ಮಧ್ಯಭಾಗದವರೆಗಿನ ಮೂರು ಶತಮಾನಗಳಿಗೂ ಹೆಚ್ಚುಕಾಲ ಆಳ್ವಿಕೆ ನಡೆಸಿದ ಹೊಯ್ಸಳರು ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ಉತ್ಕೃಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಇವರು ತಮ್ಮ ಹಿಂದಿನ ರಾಜವಂಶಗಳಾದ ಕದಂಬ, ಗಂಗ, ರಾಷ್ಟ್ರಕೂಟ, ಬಾದಾಮಿ ಚಾಲುಕ್ಯ ಹಾಗೂ ಕಲ್ಯಾಣಿ ಚಾಳುಕ್ಯರ ಶೈಲಿಗಿಂತ ವಿಭಿನ್ನವಾಗಿ ಅತಿ ಸುಂದರ ಮತ್ತು ವೈವಿದ್ಯತೆಗಳಿಂದ ಕೂಡಿದ ವಾಸ್ತುಶಿಲ್ಪ ಪರಂಪರೆಗೆ ನಾಂದಿ ಹಾಡಿದರು. ಕಲ್ಯಾಣಿ ಚಾಳುಕ್ಯರ ಸಾಮಂತರಾಗಿ ತಮ್ಮ ರಾಜಕೀಯ ಜೀವನ ಆರಂಭಿಸಿದ ಹೊಯ್ಸಳರು ಪ್ರಾರಂಭದಲ್ಲಿ ಚಾಳುಕ್ಯರ ಶೈಲಿಯನ್ನು ಮತ್ತು ದಕ್ಷಿಣದ ಚೋಳ–ಪಾಂಡ್ಯರ ಪ್ರಭಾವದಿಂದ ದ್ರಾವಿಡ ಶೈಲಿಯನ್ನು ಅಳವಡಿಸಿಕೊಂಡು, ಇವೆರಡನ್ನೂ ಒಂದು ಪ್ರಯೋಗ ಪ್ರಕ್ರಿಯೆಗೆ ಒಳಪಡಿಸಿ ವೇಸರ ಶೈಲಿಯನ್ನು ಬೆಳೆಸಿದರು. ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ಮತ್ತು ಶಿಲ್ಪಗಳಿಂದ ಕರ್ನಾಟಕದ ವಾಸ್ತುಶಿಲ್ಪ ಪರಂಪರೆ ಬಹಳ ಉಚ್ಛ್ರಾಯ ಸ್ಥಿತಿಯನ್ನು ತಲುಪಿತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಕರ್ನಾಟಕ ಇತಿಹಾಸವನ್ನು ಅಧ್ಯಯನ ಮಾಡಿದರೆ ಬಾದಾಮಿ ಚಾಳುಕ್ಯರ ಕಾಲದಲ್ಲಿ ವಾಸ್ತು ನಿರ್ಮಾಣ ಪ್ರಾರಂಭವಾಯಿತು ಎಂಬ ಅಂಶ ನಮಗೆ ತಿಳಿಯುತ್ತದೆ. ಇವರು ನಿರ್ಮಾಣ ಮಾಡಿದ ದೇವಾಲಯಗಳಲ್ಲಿ ದ್ರಾವಿಡ ಮತ್ತು ನಾಗರ ವಾಸ್ತು ಶೈಲಿಯ ದೇವಾಲಯಗಳು ಒಟ್ಟೊಟ್ಟಿಗೆ ಒಂದೇ ಸ್ಥಳದಲ್ಲಿ ನಿರ್ಮಾಣವಾಗಿರುವುದೇ ವಿಶೇಷತೆಯಾಗಿದೆ. ಇವರ ಕಾಲದಲ್ಲಿಯೇ ಗಜಪೃಷ್ಠಾಕೃತಿಯ ತಳವಿನ್ಯಾಸದ ಬಳಕೆ, ಜಾಲಾಂಧ್ರಗಳು, ಒಳಪ್ರದಕ್ಷಿಣಾ ಪಥ ಮತ್ತು ಕಟ್ಟಡ ಶೈಲಿಯ ತ್ರಿಕೂಟ ದೇವಾಲಯಗಳು ನಿರ್ಮಾಣವಾದವು.[1] ಚಾಳುಕ್ಯರು ನಾಗರ ಮತ್ತು ದ್ರಾವಿಡ ವಾಸ್ತುಶೈಲಿಗಳನ್ನು ಪೋಷಿಸಿದರಾದರೂ ಇವರ ಹೆಚ್ಚಿನ ಒಲವು ದ್ರಾವಿಡ ವಾಸ್ತುವಿನ ಕಡೆಯೇ ಇದ್ದಿತು. ಐಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲು, ಪ್ರದೇಶಗಳು ಬಾದಾಮಿ ಚಾಳುಕ್ಯರ ವಾಸ್ತುಶಿಲ್ಪದ 'ದೇವಾಲಯಗಳ ತೊಟ್ಟಿಲು' ಎಂದು ಗಂಗೂಲಿ, ಓ.ಸಿ. ಅವರು ಹೇಳಿದ್ದಾರೆ.[2] ಇವರ ನಂತರ ರಾಷ್ಟ್ರಕೂಟರ ಕಾಲದಲ್ಲಿಯೂ ದ್ರಾವಿಡ ವಾಸ್ತುಶೈಲಿಯ

ಒಲವು ಇದ್ದುದನ್ನು ಅವರ ದೇವಾಲಯಗಳ ಕಲೆ ವಾಸ್ತು ಶಿಲ್ಪದಲ್ಲಿ ಕಾಣಬರುತ್ತದೆ. ಹಾಗೆಯೇ ದಕ್ಷಿಣದಲ್ಲಿ ಆಳುತ್ತಿದ್ದ ಗಂಗರು, ನೊಳಂಬರು ಸಹ ದ್ರಾವಿಡ ವಾಸ್ತುಶೈಲಿಯನ್ನು ಸುಮಾರು ಎರಡು ಶತಮಾನಗಳ ಕಾಲ ಪೋಷಿಸಿದರು. ಉತ್ತರ ಕರ್ನಾಟಕ ತುಂಗಭದ್ರ ನದಿಯ ಆಚೆಗ ದ್ರಾವಿಡ ವಾಸ್ತುವಿನಿಂದ ಪ್ರೇರಿತವಾಗಿ ವೈಭವೀಕೃತವಾದಂತಹ ಕಲೆ ಕಲ್ಯಾಣಿ ಚಾಳುಕ್ಯರ ಶೈಲಿ ಬಳಕೆಯಲ್ಲಿತ್ತು. ಇವರ ವಾಸ್ತುಶೈಲಿಯು ಹೆಚ್ಚು ವೈಭವೀಕರಿಸಲ್ಪಟ್ಟ ದ್ರಾವಿಡ ಶೈಲಿಯಾಗಿತ್ತು. ಇದಕ್ಕೆ ಕಾರಣ ಇವರೂ ಸಹ ಬಳಸಿದಂತಹ ಮಾಧ್ಯಮ ಸೋಪುಗಲ್ಲು.[3] ಈ ಕಲ್ಲು ಮೃದುತ್ವವಾಗಿದ್ದು ಹೆಚ್ಚು ಸೂಕ್ಷ್ಮವಾದ ಕೆತ್ತನೆ ಮತ್ತು ಅಲಂಕರಣಗಳಿಗೆ ಸೂಕ್ತವಾಗಿರುವುದು. ಇವರ ಕಾಲದಲ್ಲಿ ಸ್ವಲ್ಪ ಮಟ್ಟಿನ ನಕ್ಷತ್ರಾಕಾರದ ತಳವಿನ್ಯಾಸ, ಕಡೆದ ಅಲಂಕೃತ ಕಂಬಗಳು, ಹಾಗೂ ದ್ವಿಕೂಟ ಮತ್ತು ತ್ರಿಕೂಟ ದೇವಾಲಯಗಳು ನಿರ್ಮಾಣಗೊಂಡವು.[4] ಇಂಥ ರಚನೆಗಳಿಂದ ಚಾಳುಕ್ಯ ಶೈಲಿಗೆ ದ್ರಾವಿಡ ಶೈಲಿಯಲ್ಲಿ ಒಂದು ಪ್ರತ್ಯೇಕವಾದ ಸ್ಥಾನ ದೊರೆಯಲು ಬಹುಮುಖ್ಯ ಕಾರಣವಾಯಿತು.

ಹೊಯ್ಸಳರ ಕಾಲದಲ್ಲಿ ದಕ್ಷಿಣ ಕರ್ನಾಟಕದ ದ್ರಾವಿಡ ಶೈಲಿಯ ಪ್ರಭಾವ ಮತ್ತು ಉತ್ತರ ಕರ್ನಾಟಕದ ಕಲ್ಯಾಣಿ ಚಾಳುಕ್ಯರ ಶೈಲಿಯ ಪ್ರೇರಣೆಯಾಗಿರುವುದು. ಚಾಳುಕ್ಯ ಶೈಲಿಯ ಮುಂದಿನ ಬೆಳವಣಿಗೆಯೇ ಹೊಯ್ಸಳ ಶೈಲಿಯಲ್ಲಿ ಪರ್ಯಾವಸಾನಗೊಂಡಿದ್ದು, ಚಾಳುಕ್ಯ-ಹೊಯ್ಸಳ ಶೈಲಿಗಳನ್ನು ಅವಿಭಾಜ್ಯವೆಂದು ಫರ್ಗ್ಯೂಸನ್, ವಿನ್ಸೆಂಟ್ ಅಭಿಪ್ರಾಯಿಸಿದ್ದಾರೆ. ಮತ್ತೊಬ್ಬ ವಿದ್ವಾಂಸರಾದ ಪರ್ಸಿಬ್ರೌನ್‌ರವರು ಚಾಳುಕ್ಯ ಶೈಲಿ ಅವರ ಸಾಮಂತರಾಗಿದ್ದ ಹೊಯ್ಸಳ ದೊರೆಗಳ ಆಶ್ರಯದಲ್ಲಿ ಪರಿಪಕ್ವತೆಯನ್ನು ಸಾಧಿಸಿತು ಎಂಬುದನ್ನು ತಿಳಿಸಿದ್ದಾರೆ.[5] ಕಸಿನ್ಸ್‌ರವರು ಹೊಯ್ಸಳ ಶೈಲಿಯನ್ನು ಪ್ರತ್ಯೇಕ ಶೈಲಿಯೆಂದು ಪರಿಗಣಿಸದೆ ಹೊಯ್ಸಳ ದೇವಾಲಯಗಳನ್ನೆಲ್ಲಾ ಚಾಳುಕ್ಯ ಶೈಲಿಯಲ್ಲಿಯೇ ಸೇರಿಸಿಬಿಟ್ಟಿದ್ದಾರೆ.[6] ಆದರೆ ಚಾಳುಕ್ಯ ಶೈಲಿಗಿಂತ ಕೆಲವು ವಿಶಿಷ್ಟ ಅಂಶಗಳನ್ನು ಹೊಯ್ಸಳ ವಾಸ್ತು ಶಿಲ್ಪಗಳಲ್ಲಿ ಕಾಣಬಹುದಾಗಿದೆ. ಇವರು ದೇವಾಲಯಗಳನ್ನು ನಿರ್ಮಿಸುವಾಗ ನಕ್ಷತ್ರಾಕಾರ, ಚೌಕಾಕಾರ ಮತ್ತು ಆಯಾತಾಕಾರದ ತಲವಿನ್ಯಾಸಗಳ ಜೊತೆಗೆ ದ್ರಾವಿಡ ಮತ್ತು ನಾಗರ ಶೈಲಿಗಳ ಸಮ್ಮಿಶ್ರಿತವಾದ ವೇಸರ ಶೈಲಿಯನ್ನು ಪ್ರಚುರಪಡಿಸಿದರು.

ಹೊಯ್ಸಳರು ಪ್ರಾರಂಭದ ಕಾಲದಲ್ಲಿ ದೇವಾಲಯಗಳನ್ನು ಕಣಶಿಲೆ(ಕ್ಲೋರೂಶಿಶ್ಟ್)ಯಲ್ಲಿ ನಿರ್ಮಿಸಿದರಾದರೂ, ಕೆಲವು ಕಡೆ ಗ್ರಾನೈಟ್ ಶಿಲೆಯನ್ನು ಬಳಸಿರುವುದನ್ನು ಕಾಣಬಹುದು ಇದಕ್ಕೆ ಅಲ್ಲಿನ ಭೌಗೋಳಿಕ ಪರಿಸರದಲ್ಲಿ ದೊರೆತ ಕಲ್ಲಿನಿಂದಾಗಿದೆ. ಆದರೆ ಇವರು ತಮ್ಮ ಕಲಾಭಿರುಚಿಯನ್ನು ಅಭಿವ್ಯಕ್ತಿಸಲು ಸೋಪುಗಲ್ಲು ಮೃದುವಾಗಿದ್ದರಿಂದ ಯಥೇಚ್ಛವಾಗಿ

ಬಳಸಿದರು. ಈ ಕಲ್ಲಿನ ವೈಶಿಷ್ಟ್ಯವೆಂದರೆ ಭೂಮಿಯೊಳಗಿನಿಂದ ಇದನ್ನು ಅಗೆದು ತೆಗೆದಾಗ ತೇವಾಂಶ ಮತ್ತು ಮೃದುತ್ವದಿಂದ ಕೂಡಿದ್ದು ಹೊರಗಿನ ವಾತಾವರಣದ ಪ್ರಭಾವದಿಂದ ತನ್ನೊಳಗಿನ ತೇವಾಂಶವನ್ನು ಕಳೆದುಕೊಂಡು ಗಟ್ಟಿಯಾಗುತ್ತದೆ. ಆದುದರಿಂದ ಹೊಯ್ಸಳ ಶಿಲ್ಪಿಗಳು ಈ ಮಾಧ್ಯಮದ ಪೂರ್ಣ ಉಪಯೋಗ ಪಡೆದುಕೊಂಡು ಸುಂದರವಾದ ದೇವಾಲಯಗಳನ್ನು, ಸೂಕ್ಷ್ಮ ಕುಸುರಿ ಕೆತ್ತನೆಯಿರುವ ಅತ್ಯಾಕರ್ಷಕ ಶಿಲ್ಪಗಳನ್ನು ನಿರ್ಮಿಸಿದರು.[7] ಬೇಲೂರು, ಹಳೇಬೀಡು, ಸೋಮನಾಥಪುರ, ದೊಡ್ಡಗದ್ದವಳ್ಳಿ, ಗೋವಿಂದನಹಳ್ಳಿ, ಮೊಸಳೆ, ಕೋರವಂಗ, ನುಗ್ಗೇಹಳ್ಳಿ, ಗದಗ್, ತಲಕಾಡು, ಹೊಸಹೊಳಲು, ಬೆಳವಾಡಿ, ಬಸರಾಳು, ಅಮೃತಾಪುರ, ಜಾವಗಲ್ಲು, ಹಾರ್ನಳ್ಳಿ ಇನ್ನೂ ಮುಂತಾದ ಸ್ಥಳಗಳಲ್ಲಿ ನಿರ್ಮಾಣಗೊಂಡ ಹೊಯ್ಸಳರ ದೇವಾಲಯಗಳು ತಮ್ಮ ಅಪೂರ್ವ ಸೌಂದರ್ಯದಿಂದ ಜಗದ್ವಿಖ್ಯಾತಿಯನ್ನು ಪಡೆದಿವೆ.

ಹೊಯ್ಸಳ ಅರಸರು ಕಲೆ ಮತ್ತು ವಾಸ್ತುಶಿಲ್ಪ ರಂಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದರಿಂದ ಇವರು ಆಳ್ವಿಕೆ ನಡೆಸಿದ ಪ್ರದೇಶಗಳಲ್ಲೆಲ್ಲಾ ದೇವಾಲಯಗಳು ನಿರ್ಮಾಣವಾದವು. ಸರ್ವಧರ್ಮ ಸಹಿಷ್ಣುಗಳಾಗಿದ್ದ ಇವರು ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳು ಏಕಕಾಲದಲ್ಲಿ ನಿರ್ಮಾಣವಾಗುವಂತೆ ನೋಡಿಕೊಂಡಿರುವುದು ವಿಶೇಷ. ಅಲ್ಲದೇ ಇವರ ಕಾಲಘಟ್ಟದಲ್ಲಿ ಕೇವಲ ರಾಜರೇ ದೇವಾಲಯಗಳನ್ನು ನಿರ್ಮಾಣ ಮಾಡಲು ಕಾರಣಕರ್ತರಾಗದೇ ರಾಣಿಯರು, ಸಾಮಂತರು, ದಂಡನಾಯಕರು, ಪ್ರಧಾನರು ಮತ್ತು ಅಧಿಕಾರಗಿಳಗು ಹಾಗೂ ಕೆಲವೊಮ್ಮೆ ಗ್ರಾಮದ ಮಹಾಜನಗಳು ಕೂಡ ದೇವಾಲಯಗಳನ್ನು ಮತ್ತು ಬಸದಿಗಳನ್ನು ನಿರ್ಮಿಸಿರುವುದಕ್ಕೆ ಇವರ ಕಾಲದ ಶಾಸನಗಳಂದ ತಿಳಿದು ಬರುತ್ತದೆ. ಈ ದೇವಾಲಯಗಳು ಇವರ ಆಡಳಿತ ಕೇಂದ್ರವಾದ ರಾಜಧಾನಿಯ ಸುತ್ತಲೂ ಕೇಂದ್ರೀಕೃತವಾಗಿರದೇ ಇವರ ಆಡಳಿತದ ಭೌಗೋಳಿಕ ವ್ಯಾಪ್ತಿಯೆಲ್ಲೆಡೆ ನಿರ್ಮಾಣವಾದವು. ನಂತರ ಕಾಲಕಾಲಕ್ಕೆ ದಾನದತ್ತಿಗಳನ್ನು ಪಡೆಯುವ ಮೂಲಕ ಸ್ಥಳೀಯ ಜನರ ಕಲಾಸಂವೇದನೆ ಮತ್ತು ಭಾರತೀಯ ಸಂಸ್ಕೃತಿಯ ಭಾಗವಾಗಿ ಉಳಿದು ಬಂದಿವೆ.

ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಜಗತಿ, ನಕ್ಷತ್ರಾಕಾರದ ತಳವಿನ್ಯಾಸ, ಗರ್ಭಗೃಹಗಳ ಸಂಖ್ಯೆ, ಭಿತ್ತಿ ಶಿಲ್ಪಗಳು, ವೇಸರ ಶೈಲಿಯ ಶಿಖರಗಳು ಮತ್ತು ಕಂಬಗಳ ನಿರ್ಮಾಣದಲ್ಲಿ ವಿಶೇಷ ಲಕ್ಷಣಗಳನ್ನು ಗುರುತಿಸಬಹುದಾಗಿದ್ದು ಇದರಲ್ಲಿ ಕಂಡು ಬರುವ ಕುಶಲತೆ, ವಾಸ್ತು ಮತ್ತು ಶಿಲ್ಪಕಲಾ ಕೃತಿಯಲ್ಲಿ ಹಲವಾರು, ಅಂಶಗಳನ್ನು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿಚರ್ಚಿಸಲಾಗಿದೆ.

**ಹೊಯ್ಸಳ ವಾಸ್ತುಶೈಲಿಯ ಪ್ರಮುಖ ಅಂಶಗಳು**

**ತಳವಿನ್ಯಾಸ**: ಹೊಯ್ಸಳ ದೇವಾಲಯಗಳ ತಳವಿನ್ಯಾಸವು ಬಹುಕೋನಾಕಾರ ಅಂದರೆ ನಕ್ಷತ್ರಾಕಾರವಾಗಿರುತ್ತದೆ. ಇದನ್ನು ಅಧಿಷ್ಠಾನದಿಂದ ಶಿಖರದವರೆಗೂ ಗುರುತಿಸಬಹುದು. ನಕ್ಷತ್ರಾಕಾರದ ತಳವಿನ್ಯಾಸದಲ್ಲಿ ಅನೇಕ ಉಪಪ್ರಭೇದಗಳನ್ನು ರಚಿಸಿ ಹೊಯ್ಸಳ ಶಿಲ್ಪಿಗಳು ತಮ್ಮ ನಿಪುಣತೆಯನ್ನು ತೋರ್ಪಡಿಸಿದ್ದಾರೆ. ನಾಲ್ಕು, ಆರು, ಎಂಟು, ಹನ್ನೆರಡು, ಹದಿನಾರು ಕೋನಗಳುಳ್ಳ ಅಥವಾ ಶಾಖೆಗಳುಳ್ಳ ತಳವಿನ್ಯಾಸಗಳು ಕಂಡು ಬಂದಿದ್ದು, ನಕ್ಷತ್ರಾಕಾರದ ಜೊತೆಗೆ ಚತುರ್ರಸ ಮತ್ತು ದೀರ್ಘಚತುರ್ರಸ ಅಥವಾ ಅಷ್ಟಮುಖ ತಳವಿನ್ಯಾಸಗಳಿರುವ ದೇವಾಲಯಗಳು ಇದೆ.[8] ಇವರ ದೇವಾಲಯಗಳನ್ನು ತಳವಿನ್ಯಾಸದಲ್ಲಿ ಹೊಂದಿರುವ ಗರ್ಭಗುಡಿಗಳ ಸಂಖ್ಯೆಗಳ ಆಧಾರದ ಮೇಲೆ ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟಗಳೆಂದು ವಿಂಗಡಿಸಲಾಗಿದೆ. ಅಂದರೆ ಒಂದು ಗರ್ಭಗುಡಿಯನ್ನು ಹೊಂದಿದ್ದರೆ ಏಕಕೂಟ, ಎರಡು ಗರ್ಭಗೃಹವಿದ್ದರೆ ದ್ವಿಕೂಟ, ಮೂರು ಗರ್ಭಗೃಹವಿದ್ದರೆ ತ್ರಿಕೂಟ, ನಾಲ್ಕು ಗರ್ಭಗೃಹವಿದ್ದರೆ ಚತುಷ್ಕೂಟ ಮತ್ತು ಐದು ಗರ್ಭಗೃಹವಿದ್ದರೆ ಪಂಚಕೂಟವೆಂದು ವಿಂಗಡಿಸಬಹುದಾಗಿದೆ. ಏಕಕೂಟ ಬೇಲೂರು ಚನ್ನಕೇಶವ ದೇವಾಲಯ, ದ್ವಿಕೂಟ ಹಳೇಬೀಡು ಹೊಯ್ಸಳೇಶ್ವರ ದೇವಾಲಯ, ತ್ರಿಕೂಟ ಸೋಮನಾಥಪುರದ ಕೇಶವ ದೇವಾಲಯ, ಚತುಷ್ಕೂಟ ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ದೇವಾಲಯ ಮತ್ತು ಪಂಚಕೂಟ ಗೋವಿಂದನಹಳ್ಳಿಯ ಪಂಚಲಿಂಗೇಶ್ವರ ದೇವಾಲಯಗಳು ಉದಾಹರಣೆಯಾಗಿವೆ.

**ಜಗತಿ**: ದೇವಾಲಯಗಳ ತಳವಿನ್ಯಾಸವನ್ನು ಅನುಸರಿಸಿ ಅದೇ ಆಕಾರದಲ್ಲಿ ಎತ್ತರವಾದ ಜಗತಿಯನ್ನು ನಿರ್ಮಿಸಲಾಗಿದ್ದು ಇದು ಸಾಮಾನ್ಯವಾಗಿ ಮೂರೂವರೆ ಅಡಿಯಿಂದ ಐದೂವರೆ ಅಡಿ ಎತ್ತರವಿರುತ್ತದೆ. ಹೊಯ್ಸಳ ದೇವಾಲಯಗಳು ನಿರಾಂಧಾರ ಮಾದರಿಯದಾಗಿದ್ದು ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣಾಪಥವಿರುವುದಿಲ್ಲ. ಆದ್ದರಿಂದ ಈ ಜಗತಿಯೇ ದೇವಾಲಯಕ್ಕೆ ಪ್ರದಕ್ಷಿಣಾ ಪಥವಾಗಿದ್ದು, ಹೊರಗಿನಿಂದ ಪ್ರದಕ್ಷಿಣೆ ಹಾಕಲು ಸಹಕಾರಿಯಾಗುತ್ತದೆ.[9] ಜಗತಿ ಎಂಬುದು ಎತ್ತರವಾದ ವೇದಿಕೆಯಾಗಿದ್ದು, ಈ ವೇದಿಕೆಯ ಮೇಲೆ ದೇವಾಲಯವನ್ನು ನಿರ್ಮಿಸಲಾಗಿರುತ್ತದೆ. ಎಲ್ಲಾ ಹೊಯ್ಸಳ ದೇವಾಲಯಗಳು ಜಗತಿಯನ್ನು ಹೊಂದಿರಬೇಕೆಂಬ ನಿಯಮವಿಲ್ಲದಿರುವುದರಿಂದ ಕೆಲವು ದೇವಾಲಯಗಳಲ್ಲಿ ಮಾತ್ರ ಜಗತಿಯನ್ನು ಕಾಣಬಹುದು. ಕೆಲವು ಜಗತಿಯ ಮೂಲೆಗಳಲ್ಲಿ ಆನೆಯ ಶಿಲ್ಪಗಳನ್ನು ಕೆತ್ತಿರುತ್ತಾರೆ. ಉದಾಹರಣೆಗೆ ಸೋಮನಾಥಪುರದ ದೇವಾಲಯದ ಆನೆಯ ಈ ಶಿಲ್ಪವು ಜಗತಿಯ ಬಲಿಷ್ಠತೆಯನ್ನು ಬಿಂಬಿಸುವ ಸಂಕೇತವಾಗಿರುತ್ತದೆ.

**ಅಧಿಷ್ಠಾನ**: ಹೊಯ್ಸಳರ ದೇವಾಲಯದ ಅಧಿಷ್ಠಾನ ಅಥವಾ ಗೋಡೆಯ ತಳಭಾಗದ ತಳಹದಿಯು ಅತ್ಯಂತ ಸುಂದರವಾದ ಹಾಗೂ ಆಕರ್ಷಕವಾದ ವಾಸ್ತುಭಾಗ. ಹೊಯ್ಸಳ ದೇವಾಲಯಗಳಲ್ಲಿ ನಾವು ಎರಡು ರೀತಿಯ ಅಧಿಷ್ಠಾನಗಳನ್ನು ಕಾಣುತ್ತೇವೆ. 1) ಅತ್ಯಂತ ಸರಳವಾದ ಅಧಿಷ್ಠಾನಗಳು, 2) ಅಲಂಕೃತ ಅಧಿಷ್ಠಾನಗಳು. ಸಾಮಾನ್ಯವಾಗಿ ಅಧಿಷ್ಠಾನಗಳಲ್ಲಿ ಐದರಿಂದ ಎಂಟು ಪಟ್ಟಿಕೆಗಳು ಕಂಡುಬರುತ್ತವೆ. ಇವುಗಳನ್ನು ತಳಭಾಗದಿಂದ ಊರ್ಧ್ವ ಮುಖವಾಗಿ ಉಪಾನ, ಜಗತಿ, ಪದ್ಮ, ಕುಮುದ, ಅಂತರೀತ, ಗಳ, ಪಟ್ಟಿಕಾ ಮತ್ತು ದಂತಪಂಕ್ತಿಗಳೆಂದು ಹೆಸರಿಬಹುದಾಗಿದೆ. ಕೆಲವು ದೇವಾಲಯಗಳ ಅಧಿಷ್ಠಾನದಲ್ಲಿ ಎರಡು ಹಂತದ ದಂತಪಂಕ್ತಿಯನ್ನು ಮಾಡಲಾಗಿರುತ್ತದೆ.[10] ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯದ ಅಧಿಷ್ಠಾನದ ದಂತಪಂಕ್ತಿಯ ರೀತಿಯಲ್ಲಿರುವ ಒಂದು ಪಟ್ಟಿಕೆಯಲ್ಲಿ ವ್ಯಾಘ್ರ ಶಿಲ್ಪ, ಅಲ್ಲಲ್ಲಿ ದೇವತೆಗಳ ಶಿಲ್ಪ ಮತ್ತು ಮಿಥುನ ಶಿಲ್ಪಗಳನ್ನು ಚಿತ್ರಿಸಿದ್ದಾರೆ.[11] ಅಲಂಕೃತ ಅಧಿಷ್ಠಾನಗಳಲ್ಲಿ ನಾವು ಆರರಿಂದ ಎಂಟು ಶಿಲ್ಪಪಟ್ಟಿಕೆಗಳ ಸಾಲುಗಳನ್ನು ಕಾಣುತ್ತೇವೆ. ಉದಾಹರಣೆಗೆ ಬೇಲೂರು, ಹಳೇಬೀಡು ಇನ್ನೂ ಮುಂತಾದ ದೇವಾಲಯಗಳಲ್ಲಿ ಕೆಳಭಾಗದಿಂದ ಮೊದಲ ಪಟ್ಟಿಕೆಯಲ್ಲಿ ಆನೆಗಳ ಸಾಲು, ಎರಡನೆಯ ಪಟ್ಟಿಕೆಯಲ್ಲಿ ಕುದುರೆಗಳ ಸಾಲು, ಮೂರನೆಯ ಪಟ್ಟಿಕೆಯಲ್ಲಿ ಬಳ್ಳಿ ಸುರುಳಿಗಳ ಅಲಂಕರಣಗಳಿದ್ದು ಇದು ಸಾಮಾನ್ಯವಾಗಿ ಕಂಡು ಬರುತ್ತವೆ. ಜೊತೆಗೆ ಬಳ್ಳಿಗಳು ಸಿಂಹ ಅಥವಾ ಕೀರ್ತಿಮುಖದ ಬಾಯಿಯಿಂದ ನಾಲಗೆ ಹೊರಬರುತ್ತಿರುವಂತೆ ಕೆತ್ತಲಾಗಿದ್ದು, ಇದನ್ನು ವ್ಯಾಳ ಅಥವಾ ಮಕರ ಎಂಬುದಾಗಿ ವಿದ್ವಾಂಸರೊಬ್ಬರು ಗುರುತಿಸುತ್ತಾರೆ.[12] ನಾಲ್ಕನೇ ಪಟ್ಟಿಕೆಯು ಅತ್ಯಂತ ಪ್ರಮುಖ ಪಟ್ಟಿಕೆ ಎಂದು ಭಾವಿಸಬಹುದು, ಏಕೆಂದರೆ ಈ ಪಟ್ಟಿಕೆಯಲ್ಲಿ ಭಾರತದ ಸಾಂಸ್ಕೃತಿಕ ಪರಂಪರೆಯನ್ನು ಬಿಂಬಿಸುವ ರಾಮಾಯಣ, ಮಹಾಭಾರತ, ಭಾಗವತದ ಕಥೆಗಳು ಮತ್ತು ಪೌರಾಣಿಕ ಕಥಾನಕಗಳನ್ನು ಅತ್ಯಂತ ವಿಸ್ತಾರವಾಗಿ ನಮೂದಿಸಲಾಗಿದೆ. ಇದರ ಮೇಲಿನ ಐದನೆಯ ಪಟ್ಟಿಕೆಯಲ್ಲಿ ಹಂಸಗಳ ಉದ್ದವಾದ ಸಾಲನ್ನು ಕಾಣುತ್ತೇವೆ. ಈ  ಹಂಸಾಲಂಕರಣ ಪಟ್ಟಿಕೆಯ ಮೇಲ್ಭಾಗದಲ್ಲಿ ಕೆಲವೊಮ್ಮೆ ಪೌರಾಣಿಕ ಮೂರ್ತಿ ಶಿಲ್ಪಗಳು ಮತ್ತು ಭರತನಾಟ್ಯದ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ಅಧಿಷ್ಠಾನದ ಎತ್ತರದ ಅವಶ್ಯಕತೆಯನ್ನು ಆಧರಿಸಿ ಎಷ್ಟು ಶಿಲ್ಪಪಟ್ಟಿಕೆಗಳು ಇರಬೇಕೆಂಬುದನ್ನು ನಿರ್ಧರಿಸಲಾಗುತ್ತಿತ್ತು ಎಂದು ಹೇಳಬಹುದು. ಆದ್ದರಿಂದ ಹಲವು ದೇವಾಲಯಗಳಲ್ಲಿ ಈ ಪಟ್ಟಿಕೆಗಳ ಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಮುಖ್ಯವಾಗಿ ಈ ಶಿಲ್ಪಪಟ್ಟಿಕೆಗಳ ಅಲಂಕರಣ ಮತ್ತು ಕ್ರಮಾನುಕರಣಿಕೆ ಎಲ್ಲಾ ದೇವಾಲಯಗಳಲ್ಲಿ ಕಡ್ಡಾಯವಾಗಿ ಕಂಡುಬರುವುದಿಲ್ಲ.

**ಭಿತ್ತಿ**: ಸಂಸ್ಕೃತದಲ್ಲಿ ಭಿತ್ತಿ ಎಂದರೆ ಕನ್ನಡದಲ್ಲಿ ಗೋಡೆ ಎಂದರ್ಥ. ಭಿತ್ತಿಯು ಅಧಿಷ್ಠಾನದ ಮೇಲಿನಿಂದ ಪ್ರಾರಂಭವಾಗುತ್ತದೆ. ಹೊಯ್ಸಳರ ದೇವಾಲಯದ ಪ್ರಧಾನ ಆಕರ್ಷಣೆಯ ಭಾಗವೆಂದರೆ ಆ ದೇವಾಲಯದ ಗೋಡೆಗಳು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಇವರ ಕಾಲದ ಭಿತ್ತಿಯ ಸ್ವರೂಪವು ಸಾಂಪ್ರದಾಯಿಕ ದ್ರಾವಿಡ ಮಾದರಿಯನ್ನೇ ಹೊಂದಿರುತ್ತದೆ. ಹೊರಭಿತ್ತಿಯಲ್ಲಿ ಮಾತ್ರ ಅಲಂಕರಣೆಗಳನ್ನು ಗುರುತಿಸಬಹುದಾಗಿದ್ದು ದೇವಾಲಯದ ಒಳಭಿತ್ತಿಯಲ್ಲಿ ಅಲಂಕರಣೆಗಳು ಕಂಡು ಬರುವುದಿಲ್ಲ. ಸರಳವಾದ ದೇವಾಲಯಗಳ ಭಿತ್ತಿಯಲ್ಲಿ ಉತ್ತಮ ವಾಸ್ತುವಿನ್ಯಾಸಗಳನ್ನು ಗುರುತಿಸಬಹುದಾಗಿದ್ದು ಶಿಲ್ಪ ಮತ್ತು ಇತ್ಯಾದಿಗಳ ಅಲಂಕರಣಗಳಿರುವುದಿಲ್ಲ. ಇಲ್ಲಿ ಕೇವಲ ಅರೆಗಂಬಗಳು ಅಥವಾ ಕುಡ್ಯ ಸ್ತಂಭಗಳನ್ನು ಮತ್ತು ಬೋದಿಗೆಗಳನ್ನು ಗುರುತಿಸಬಹುದು.[13] ಈ ಮಾದರಿಯ ಭಿತ್ತಿಗಳನ್ನು ನಾವು ಹೊಯ್ಸಳರ ಕಾಲದ ಕೆಲವು ಜೈನಬಸದಿಗಳಲ್ಲಿ ಕಾಣಬಹುದಾಗಿದೆ. ಕೆಲವು ದೇವಾಲಯಗಳ ಭಿತ್ತಿಯಲ್ಲಿ ಕೋಷ್ಠಗಳನ್ನು, ಸ್ತಂಭ ಪಂಜರಗಳನ್ನು, ಕೋಷ್ಠ ಮತ್ತು ಸ್ತಂಭ ಪಂಜರಗಳ ನಡುವೆ ಗೋಡೆಯ ಮೇಲೆ ಸೂಕ್ಷ್ಮವಾದ ಸುರುಳಿ ಬಳ್ಳಿಗಳ ಕೆತ್ತನೆಗಳನ್ನು ಸಹ ನೋಡಬಹುದಾಗಿದ್ದು, ಈ ವಿಧದ ಭಿತ್ತಿಗಳನ್ನು ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯ, ಮೊಸಳೆಯ ನಾಗೇಶ್ವರ ಮತ್ತು ಚನ್ನಕೇಶವ ದೇವಾಲಯ ಹಾಗೂ ಕೋರವಂಗಲದ ಗೋವಿಂದೇಶ್ವರ ದೇವಾಲಯಗಳಲ್ಲಿ ಕಾಣಬಹುದಾಗಿದೆ. ಹೊಯ್ಸಳರ ಕೆಲವು ಮುಖ್ಯ ದೇವಾಲಯಗಳಲ್ಲಿ ಅಲಂಕರಣಗಳಿಂದ ಕೂಡಿದ ಕೋಷ್ಠಗಳು, ಸ್ತಂಭಿಕೆಗಳು ಮತ್ತು ಆಕರ್ಷಕವಾದ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳ ಕೆತ್ತನೆಯಲ್ಲಿ ಶೈವ, ವೈಷ್ಣವ ಬೇಧ ಭಾವವಿಲ್ಲದೆ ಎರಡೂ ಪಂಥದ ದೇವತೆಗಳು ಹಾಗೂ ಅವತಾರ ಶಿಲ್ಪಗಳನ್ನು ಕೆತ್ತಲಾಗಿದೆ. ಆದರೂ ಸಹ ಶೈವ ದೇವಾಲಯಗಳಲ್ಲಿ ಶೈವ ಪರಂಪರೆಯ ಶಿಲ್ಪಗಳು ಹೆಚ್ಚಾಗಿ ಕಂಡು ಬಂದರೆ, ವೈಷ್ಣವ ದೇವಾಲಯಗಳಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳ ಹಾಗೂ ದಶಾವತಾರದ ಶಿಲ್ಪಗಳು ಹೆಚ್ಚಾಗಿ ಕಂಡು ಬರುತ್ತವೆ. ಈ ದೈವೀ ಶಿಲ್ಪಗಳ ನಡುವೆ ಚಾಮರಧಾರಿಣಿಯರು, ಪರಿಚಾರಕಿಯರು, ವಾದ್ಯ ವೃಂದದವರು ಮತ್ತು ನೃತ್ಯಗಾರ್ತಿಯರು ಹೀಗೆ ಹತ್ತು ಹಲವಾರು ಉಬ್ಬುಶಿಲ್ಪಗಳನ್ನು ಹಾಗೂ ಸುರುಳಿ ಬಳ್ಳಿಗಳನ್ನು ಕೆತ್ತಲಾಗಿರುತ್ತದೆ. ಕೆಲವು ದೇವಾಲಯಗಳಲ್ಲಿ ಎರಡು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದ್ದು ಎರಡನೆಯ ಹಂತದ ಶಿಲ್ಪಗಳು ಕೆಳಹಂತದ ಶಿಲ್ಪಗಳಿಗಿಂತ ಚಿಕ್ಕದಾಗಿರುತ್ತದೆ. ಈ ರೀತಿಯ ಲಕ್ಷಣಗಳನ್ನು ನುಗ್ಗೇಹಳ್ಳಿಯ ಲಕ್ಷ್ಮೀನಾರಾಯಣ, ಕಿಕ್ಕೇರಿಯ ಬ್ರಹ್ಮೇಶ್ವರ ಮತ್ತು ಜನಾರ್ಧನ ದೇವಾಲಯಗಳಲ್ಲಿ ನೋಡಬಹುದು. ಕೆಲವು ದೇವಾಲಯಗಳ ಭಿತ್ತಿಯಲ್ಲಿ ಕೋಷ್ಠಗಳ ರೂಪದಲ್ಲಿ ರಚನೆ ಮಾಡಿ ಅದರ ಮಧ್ಯಭಾಗದಲ್ಲಿ ಶಿಲ್ಪಗಳನ್ನು ಸಹ ಚಿತ್ರಿಸಿರುತ್ತಾರೆ. ಭಿತ್ತಿಯ ವಿಗ್ರಹಗಳ ಮೇಲೆ ಕೆಲವು

ದೇವಾಲಯಗಳಲ್ಲಿ ಅಡ್ಡಲಾಗಿ ಕಪೋತವನ್ನು ವಿನ್ಯಾಸಗೊಳಿಸಲಾಗಿರುತ್ತದೆ. ಇದು ಆಂಗ್ಲ ಭಾಷೆಯ ಎಸ್ ಅಕ್ಷರದಂತಿದ್ದು, ಸೂಕ್ಷ್ಮ ಅಲಂಕರಣಗಳನ್ನು ಹೊಂದಿರುವುದರ ಜೊತೆಗೆ ಶಿಲ್ಪಗಳನ್ನು ಮಳೆಯಿಂದ ರಕ್ಷಿಸಿ ದೇವಾಲಯಕ್ಕೆ ಇನ್ನೂ ಹೆಚ್ಚಿನ ಸೌಂದರ್ಯ ಒದಗಿಸುತ್ತದೆ.

**ಕಪೋತ**: ಭಿತ್ತಿಯ ಮೇಲ್ತುದಿಯಲ್ಲಿ ನಿರ್ಮಿಸುತ್ತಿದ್ದ ಕಪೋತವು ವಾಸ್ತು ಭಾಗದಲ್ಲಿ ಒಂದು ಪ್ರಮುಖವಾದ ಅಂಗವಾಗಿದ್ದು ಇದನ್ನು ಹೊಯ್ಸಳರು ಬಹಳ ನಾಜೂಕಾಗಿಯೂ, ನವಿರಾಗಿಯೂ ರೂಪಿಸುತ್ತಿದ್ದರು. ಇವು ತೆಳುವಾಗಿಯೂ ಹೆಚ್ಚು ಅಗಲವಾಗಿಯೂ ಎರಡು ಭಾಗಗಳನ್ನು ಹೊಂದಿದ್ದು, ಕೆಲವೊಮ್ಮೆ ಪಟ್ಟಿಕೆಗಳಿಂದ ಮತ್ತು ಅಲಂಕಾರಿಕ ತೂಗುಗಳಿಂದ ಕೂಡಿರುತ್ತದೆ. ಕಪೋತದ ಕೆಳಮುಖ ಆಳವಾಗಿದ್ದು, ಸಾಮಾನ್ಯವಾಗಿ ಹಂಚಿನ ಛಾವಣಿಯ ಸೂರಿನ ಕೆಳಭಾಗದ ವಿನ್ಯಾಸವನ್ನು ಹೊಂದಿರುತ್ತದೆ. ಇದರ ಮೇಲ್ಭಾಗವು ಇಳಿಜಾರಾಗಿದ್ದು, ಮಳೆ ನೀರಿನಿಂದ ಭಿತ್ತಿಯನ್ನು ರಕ್ಷಿಸುತ್ತದೆ. ಹೆಚ್ಚು ವಿಶಾಲವಾದ ಕಪೋತಗಳನ್ನು ನಾವು ಮಹಾಮಂಟಪದ ಮೇಲ್ಭಾಗದಲ್ಲಿ ಕಾಣಬಹುದಾಗಿರುತ್ತದೆ. ಇವುಗಳು ಬಹಳ ಸರಳವಾಗಿದ್ದರೂ ಸಹ ವಿಶಾಲವಾಗಿದ್ದು ಮಂಟಪದ ಸುತ್ತಲೂ ಜೋಡಿಸಲಾಗಿರುತ್ತದೆ.

**ಶಿಖರ**: ಶಿಖರಗಳು ದೇವಾಲಯಕ್ಕೆ ಒಂದು ರೀತಿಯ ವಿಶಿಷ್ಟವಾದ ಸೌಂದರ್ಯವನ್ನು ನೀಡುತ್ತವೆ. ಇದು ಗರ್ಭಗೃಹದ ಮೇಲ್ಭಾಗದಲ್ಲಿ ಕಂಡು ಬರುವ ಭಾಗವಾಗಿದೆ.14 ಹೊಯ್ಸಳ ಶಿಖರವು ದೇವಾಲಯದ ಸೌಂದರ್ಯವನ್ನು ಇಮ್ಮಡಿಗೊಳಿಸುವ ಭಾಗವಾಗಿದ್ದು ಇದು ಅನೇಕ ತಲಗಳನ್ನು ಹೊಂದಿರುತ್ತದೆ. ಇವರು ಪ್ರಾರಂಭದಲ್ಲಿ ದ್ರಾವಿಡ ಮಾದರಿಯ ಶಿಖರಗಳನ್ನು ನಿರ್ಮಿಸಿರಾದರೂ ಕಾಲಾನಂತರದಲ್ಲಿ ಇದರಲ್ಲಿ ಕೆಲ ಮಾರ್ಪಾಡುಗಳನ್ನು ತರುವ ಮೂಲಕ ವೇಸರ ಶೈಲಿಯ ಶಿಖರವನ್ನು ನಿರ್ಮಿಸಿದರು. ಗರ್ಭಗುಡಿಯ ಶಿಖರವು ಭಿತ್ತಿಯ ವಿನ್ಯಾಸಕ್ಕನುಗುಣವಾಗಿ ಅಥವಾ ನಕ್ಷತ್ರಾಕಾರವಾಗಿ ಮೆಟ್ಟಿಲು ಮೆಟ್ಟಿಲಾಗಿ ಊರ್ಧ್ವಮುಖವಾಗಿ ಹೋಗುತ್ತದೆ. ಊರ್ಧ್ವಮುಖವಾಗಿ ಹೋದಂತೆ ತಲಗಳು ಸಣ್ಣದಾಗುತ್ತಾ ನಂತರದಲ್ಲಿ ಕುತ್ತಿಗೆಯಾಕಾರದ ಗ್ರೀವವಿದ್ದು ಅದರ ಮೇಲೆ ಛತ್ರಾಕಾರದ ಕಲ್ಲಿನಲ್ಲಿ ಅಥವಾ ಬೋರಲು ಹಾಕಿದ ಕಮಲದ ಹೂವಿನಂತಿರುವ (ಅದೋಪದ್ಮ) ರಚನೆಯಲ್ಲಿ ಕೊನೆಗೊಂಡು, ಇದರ ಮೇಲ್ಭಾಗದಲ್ಲಿ ಅಮೃತ ಕಳಶದಿಂದ ಕೊನೆಗೊಳ್ಳುತ್ತದೆ. ಶಿಖರದ ಏರಿಕೆಯ ತಲಗಳಲ್ಲಿ ನಾವು ಕರ್ಣಕೂಟ, ಶಾಲಾ, ಭದ್ರಶಾಲಾ, ನಾಸೀ ಮುಂತಾದ ವಾಸ್ತುಭಾಗಗಳನ್ನು ನೋಡಬಹುದಾಗಿದ್ದು ನಾಸಿಗಳಲ್ಲಿ ದೇವಾಲಯದ ಮುಖ್ಯ ದೇವತೆಯ ಪರಂಪರೆಗೆ ಅನುಗುಣವಾಗಿ ಅಂದರೆ ಶೈವ, ವೈಷ್ಣವ ಮತ್ತು ಶಾಕ್ತ ಪರಂಪರೆಗನುಗುಣವಾಗಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ಶೈವ ದೇವಾಲಯವಾದರೆ ಭೈರವ, ನಟರಾಜ,

ದಕ್ಷಿಣಾಮೂರ್ತಿ, ಪಾರ್ವತಿ, ಉಮಾಮಹೇಶ್ವರ, ಗಣೇಶ, ಗಜಾಸುರ ಸಂಹಾರಮೂರ್ತಿ ಹೀಗೆ ಇನ್ನೂ ಅನೇಕ ಉಬ್ಬುಶಿಲ್ಪಗಳಿರುತ್ತವೆ. ವೈಷ್ಣವ ದೇವಾಲಯಗಳಲ್ಲಿ ಕೇಶವ, ಕಾಳಿಂಗಮರ್ಧನ, ವೇಣುಗೋಪಾಲ, ಯೋಗನರಸಿಂಹ, ಲಕ್ಷ್ಮೀನರಸಿಂಹ, ಗರುಡ ಇನ್ನೂ ಮುಂತಾದ ಶಿಲ್ಪಗಳನ್ನು ಕೆತ್ತಿರುತ್ತಾರೆ. ಹೊಯ್ಸಳ ದೇವಾಲಯಗಳ ಶಿಖರದ ತಲಗಳಲ್ಲಿ ನಾವು ದೇವತಾ ಶಿಲ್ಪಗಳ ಜೊತೆಗೆ ವ್ಯಾಳ, ಕೀರ್ತಿಮುಖ, ರತಿ–ಮನ್ಮಥ ಶಿಲ್ಪಗಳು ಮತ್ತು ಸ್ತ್ರೀ ಶಿಲ್ಪಗಳು ಇನ್ನೂ ಮುಂತಾದ ಶಿಲ್ಪಗಳನ್ನು ಗುರುತಿಸಬಹುದಾಗಿದೆ. ಆದರೆ ಎಲ್ಲಾ ದೇವಾಲಯಗಳ ಶಿಖರಗಳಲ್ಲಿ ಈ ರೀತಿಯ ಶಿಲ್ಪಗಳು ಕಂಡು ಬರುವುದಿಲ್ಲ.

ಶಿಖರದ ಮುಂಭಾಗದಲ್ಲಿ ಮುಂಚಾಚಿದಂತೆ ಕಂಡು ಬರುವ ಒಂದು ಭಾಗವಿದ್ದು ಇದನ್ನು ಸುಖನಾಸ ಎಂದು ಕರೆಯಲಾಗುತ್ತದೆ. ಈ ಭಾಗವು ವೃತ್ತಾಯಾತವಾಗಿ ಮುಂಚಾಚಿದ್ದು, ಹೊಯ್ಸಳ ದೇವಾಲಯಗಳಲ್ಲಿ ಸಾಮಾನ್ಯವಾಗಿ ಇದರ ಮೇಲ್ಭಾಗದಲ್ಲಿ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪವನ್ನು ಪ್ರತಿಷ್ಠಾಪಿಸಿರುತ್ತಾರೆ. ಈ ಸುಖನಾಸದ ಮುಂದಿನ ಫಲಕದಲ್ಲಿಯೂ ಶಿಲ್ಪಗಳನ್ನು ಕೆತ್ತಿರುತ್ತಾರೆ. ಸಾಮಾನ್ಯವಾಗಿ ಹೊಯ್ಸಳ ದೇವಾಲಯಗಳ ಸುಖನಾಸ ಫಲಕದಲ್ಲಿ ಶೈವ ದೇವಾಲಯವಾದರೆ ನಟರಾಜ ಅಥವಾ ತಾಂಡವೇಶ್ವರ, ವೈಷ್ಣವ ದೇವಾಲಯವಾದರೆ ಗರುಡ ಅಥವಾ ವಿಷ್ಣುವಿನ ಶಿಲ್ಪವನ್ನು ನಿರ್ಮಿಸಿರುತ್ತಾರೆ.

**ಹಾರ**: ಹೊಯ್ಸಳ ದೇವಾಲಯಗಳಲ್ಲಿ ಹಾರ ಭಾಗವು ಸಂಕೀರ್ಣವಾಗಿ ವಿನ್ಯಾಸಗೊಂಡಿರುತ್ತದೆ. ಇವರ ಕಾಲದ ಭಿತ್ತಿಯು ಅಸಂಖ್ಯಾತ ಹಿಂಚಾಚು ಮುಂಚಾಚು ಮಾದರಿಯಲ್ಲಿದ್ದುದರಿಂದ ದ್ರಾವಿಡ ಮಾದರಿಯಂತೆ ನೇರವಾಗಿ ಶಾಲ, ಕೂಟ, ಪಂಜರಗಳ ಸಾಲನ್ನು ಪ್ರಭಾವಯುತವಾಗಿ ನಿರ್ಮಿಸಲು ಶಿಖರದ ಭಾಗದಲ್ಲಿ ಅವಕಾಶವಿರುವುದಿಲ್ಲ. ಆದ್ದರಿಂದ ಇದರ ಬದಲಿಗೆ ದಿಂಡುಗಳುಳ್ಳ ವೇದಿಯನ್ನು ನಿರ್ಮಿಸಿ ಅದರ ಮೇಲೆ ಸಾಲಂಕೃತ ಮತ್ತು ಸಾಂಪ್ರದಾಯಿಕ ಕರ್ಣಕೂಟ, ಭದ್ರಶಾಲಾ, ನಾಸೀ ಮುಂತಾದ ಅಲಂಕರಣಗಳನ್ನು ಮಾಡಿ ಇವುಗಳ ಭಾಗಗಳಲ್ಲಿಯೂ ಸಹ ಅನೇಕ ದೇವದೇವತೆಯರ ಉಬ್ಬುಶಿಲ್ಪಗಳನ್ನು ನಿರ್ಮಿಸಿರುತ್ತಾರೆ.

**ಹೊಯ್ಸಳ ದೇವಾಲಯಗಳ ಒಳವಿನ್ಯಾಸದ ಲಕ್ಷಣಗಳು**

ಹೊಯ್ಸಳ ದೇವಾಲಯದ ಒಳವಿನ್ಯಾಸದಲ್ಲಿ ಗರ್ಭಗೃಹ, ಸುಖನಾಸಿ, ದ್ವಾರಬಂಧ, ನವರಂಗ, ಭುವನೇಶ್ವರಿಗಳು, ಸ್ತಂಭಗಳು ಮತ್ತು ದೇವಕೋಷ್ಠಗಳು ಎಂಬ ಭಾಗಗಳನ್ನು ಹೆಸರಿಸಬಹುದಾಗಿದೆ.

**ಗರ್ಭಗೃಹ**: ಹೊಯ್ಸಳ ಗರ್ಭಗೃಹಗಳು ಸಾಮಾನ್ಯವಾಗಿ ಚೌಕಾಕಾರವಾಗಿದ್ದು ನಿರಾಂಧಾರ ಶೈಲಿಯದಾಗಿದ್ದು ಗರ್ಭಗುಡಿಯನ್ನು ಪ್ರದಕ್ಷಿಣೆ ಹಾಕಲು ಪ್ರತ್ಯೇಕ ಪ್ರದಕ್ಷಿಣಾ ಪಥವು ಕಂಡು ಬರುವುದಿಲ್ಲ. ಆದ್ದರಿಂದ ಪ್ರದಕ್ಷಿಣಾ ಪಥದ ಬದಲಿಗೆ ವಿಶಾಲವಾದ ಜಗತಿಯನ್ನು ನಿರ್ಮಾಣ ಮಾಡಲಾಗಿರುತ್ತದೆ. ಆದರೆ ಎಲ್ಲಾ ದೇವಾಲಯಗಳಿಗೂ ಜಗತಿಯ ನಿರ್ಮಾಣವಿರುವುದಿಲ್ಲ. ಗರ್ಭಗೃಹದ ಮಧ್ಯಭಾಗದಲ್ಲಿ ವಾಸ್ತುವನ್ನು ಅನುಸರಿಸಿ, ಪೀಠದ ಮೇಲೆ ಶಿವಲಿಂಗ ಅಥವಾ ವಿಷ್ಣುವಿನ ಅಥವಾ ಜಿನ ಪ್ರತಿಮೆಗಳನ್ನು ಪ್ರತಿಷ್ಠಾಪಿಸಲಾಗಿರುತ್ತದೆ.

**ಸುಖನಾಸಿ:** ಗರ್ಭಗೃಹದ ಮುಂದೆ ಕಂಡು ಬರುವ ಭಾಗವನ್ನು ಸುಖನಾಸಿ ಅಥವಾ ಅಂತರಾಳ ಎಂದು ಕರೆಯಲಾಗಿದೆ. ಇದೂ ಸಹ ಸಾಮಾನ್ಯವಾಗಿ ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಮತ್ತು ದ್ವಾರವನ್ನು ಹೊಂದಿರುತ್ತದೆ. ಆದರೆ ಕೆಲವು ದೇವಾಲಯಗಳಲ್ಲಿ ದ್ವಾರವು ಕಂಡು ಬರದೇ ತೆರೆದುಕೊಂಡಿದ್ದು ಇದನ್ನು ತೆರೆದ ಸುಖನಾಸಿ ಎಂತಲೂ ಕರೆಯಲಾಗುತ್ತದೆ. ಸುಖನಾಸಿಯು ಗರ್ಭಗೃಹ ಮತ್ತು ನವರಂಗಗಳ ಮಧ್ಯಭಾಗವಿದ್ದು ಎರಡೂ ಭಾಗಗಳನ್ನು ಜೋಡಿಸುತ್ತದೆ. ಕೆಲವು ಹೊಯ್ಸಳ ದೇವಾಲಯಗಳಲ್ಲಿ ಸುಖನಾಸಿ ಭಿತ್ತಿಯ ಪಾರ್ಶ್ವದಲ್ಲಿ ಉತ್ಸವ ಮೂರ್ತಿಗಳನ್ನು ಇರಿಸಿರುತ್ತಾರೆ. "ಗರ್ಭಗುಡಿಗೂ ರಂಗಮಂಟಪಕ್ಕೂ ಮಧ್ಯೆ ಉತ್ಸವ ಮೂರ್ತಿಗಳನ್ನಿಡಲು ಸುಖನಾಸಿ ಇರುತ್ತದೆ. ಹಳೆಯ ದೇವಾಲಯಗಳಲ್ಲಿ ಅರ್ಧಮಂಟಪದ ಇರಲಿಲ್ಲ. ಗರ್ಭಗುಡಿಯ ಮುಂದೆಯೇ ಮಂಟಪವಿದ್ದು ಪ್ರೇಕ್ಷಕರು ನೇರವಾಗಿ ಮೂಲ ವಿಗ್ರಹವನ್ನು ನೋಡಬಹುದಾಗಿತ್ತು. ಆಗಮಗಳ ಪ್ರಭಾವ ಹೆಚ್ಚಾದಂತೆ ಚಲಮೂರ್ತಿಗಾಗಿ ಅರ್ಧಮಂಟಪವನ್ನು ಸೇರಿಸಲಾಯಿತು"ಎಂಬುದಾಗಿ ವಿದ್ವಾಂಸರೊಬ್ಬರು ಅಭಿಪ್ರಾಯಿಸುತ್ತಾರೆ.[15] ಆದರೆ ಉತ್ಸವ ಮೂರ್ತಿಗಳಿಗಾಗಿಯೇ ಈ ಭಾಗದ ನಿರ್ಮಾಣವಾಯಿತೆಂಬ ವಾದವನ್ನು ಕೆಲವು ವಿದ್ವಾಂಸರು ಸಹ ಒಪ್ಪುವುದಿಲ್ಲ.

**ದ್ವಾರಗಳು**: ದೇವಾಲಯಗಳ ಒಳಗೆ ಪ್ರವೇಶಿಸಲು ಇರುವ ಜಾಗವೇ ದ್ವಾರಗಳು. ಇವುಗಳ ಮೂಲಕವೇ ದೇವಾಲಯದೊಳಗೆ ಹೋಗಬೇಕಾಗಿರುವುದರಿಂದ ಇವುಗಳನ್ನೂ ಸಹ ಆಕರ್ಷಕ ಅಲಂಕರಣಗಳಿಂದ ನಿರ್ಮಿಸಲಾಗಿರುತ್ತದೆ. ಮುಖಮಂಟಪದಿಂದ ನವರಂಗಕ್ಕೆ, ನವರಂಗದಿಂದ ಸುಖನಾಸಿಗೆ, ಸುಖನಾಸಿಯಿಂದ ಗರ್ಭಗುಡಿಗೆ ಹೋಗಲು ದ್ವಾರಗಳಿರುತ್ತವೆ. ಕೆಲವೊಮ್ಮೆ ನವರಂಗದಿಂದ ಸುಖನಾಸಿಗೆ ಹೋಗಲು ದ್ವಾರಗಳಿಲ್ಲದೇ ತೆರೆದುಕೊಂಡಿದ್ದು, ಇವುಗಳನ್ನು ತೆರೆದ ಸುಖನಾಸಿ ಅಥವಾ ತೆರೆದ ಅಂತರಾಳ ಎಂದು ಕರೆಯಲಾಗುತ್ತದೆ. ಕೆಲವು ದೇವಾಲಯಗಳಲ್ಲಿ ನವರಂಗಕ್ಕೆ ಮೂರು ದ್ವಾರಗಳನ್ನು ನಿರ್ಮಿಸಿರುವುದನ್ನು ಕಾಣಬಹುದಾಗಿದ್ದರೂ ಹೆಚ್ಚಿನ ಸಂಖ್ಯೆಯ ದೇವಾಲಯಗಳಲ್ಲಿ ಒಂದೇ ದ್ವಾರವಿರುವುದನ್ನು

ಗುರುತಿಸಬಹುದು. ಸಾಮಾನ್ಯವಾಗಿ ಹೊಯ್ಸಳ ದೇವಾಲಯಗಳ ದ್ವಾರಬಂಧವು ದ್ವಾರದ ಇಕ್ಕೆಲಗಳಲ್ಲಿ ನಾಲ್ಕರಿಂದ ಏಳು ಶಾಖೆಗಳನ್ನು ಹೊಂದಿದ್ದು ಅವುಗಳಲ್ಲಿ ವಜ್ರಶಾಖೆ, ವಲ್ಲೀಶಾಖೆ, ಸ್ತಂಭ ಶಾಖೆಗಳನ್ನು ಮುಖ್ಯವಾಗಿ ಹೆಸರಿಸಬಹುದಾಗಿದ್ದು ಇವುಗಳ ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳು ಕಂಡು ಬರುತ್ತವೆ. ಕೆಲವು ದೇವಾಲಯಗಳ ದ್ವಾರದ ಎರಡೂ ಕಡೆ ಜಾಲಾಂಧ್ರಗಳ ರಚನೆಯಿರುತ್ತದೆ. ಸರ್ವಸಾಮಾನ್ಯವಾಗಿ ದ್ವಾರದ ಮೇಲ್ಭಾಗದಲ್ಲಿ ಲಲಾಟ ಎಂದು ಕರೆಯಲಾಗಿದ್ದು, ಇದರಲ್ಲಿ ಗರ್ಭಗುಡಿಯಲ್ಲಿರುವ ಮುಖ್ಯ ದೇವರಿಗೆ ಸಂಬಂಧಿತವಾದ ಉಬ್ಬುಶಿಲ್ಪವನ್ನು ಕೆತ್ತಲಾಗಿರುತ್ತದೆ. ಲಲಾಟದಲ್ಲಿ ಸಾಮಾನ್ಯವಾಗಿ ಗಜಲಕ್ಷ್ಮಿಯ ಶಿಲ್ಪವು ಕಂಡು ಬರುತ್ತದೆ. ಆದರೂ ಸಹ ಶೈವ ದೇವಾಲಯಗಳಲ್ಲಿ ಉಮಾ ಮಹೇಶ್ವರ ಶಿಲ್ಪ, ವೈಷ್ಣವ ದೇವಾಲಯಗಳಲ್ಲಿ ವಿಷ್ಣುವಿನ ಶಿಲ್ಪ ಮತ್ತು ಜೈನ ಬಸದಿಗಳಲ್ಲಿ ಜಿನಶಿಲ್ಪವನ್ನು ಗುರುತಿಸಬಹುದು. ಈ ಲಲಾಟದ ಮೇಲ್ಭಾಗದಲ್ಲಿ ಕೆಲವು ದೇವಾಲಯಗಳಲ್ಲಿ ಸಣ್ಣ ಸಣ್ಣ ಶಿಖರದ ಮಾದರಿಗಳನ್ನು ನಿರ್ಮಿಸಿರುತ್ತಾರೆ.

**ದ್ವಾರಪಾಲಕರು**: ದೇವಾಲಯದ ಗರ್ಭಗೃಹ, ಸುಖನಾಸಿ ಮತ್ತು ನವರಂಗದ ದ್ವಾರಬಂಧದ ಕೆಳಗೆ ಹಾಗೂ ಮುಖಮಂಟಪದ ಇಕ್ಕೆಲಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳನ್ನು ಚಿತ್ರಿಸಿರುತ್ತಾರೆ. ಕೆಲವು ದೇವಾಲಯಗಳಲ್ಲಿ ದ್ವಾರಪಾಲಕರ ಜೊತೆಯಲ್ಲಿ ಪರಿಚಾರಕಿಯರನ್ನು ಮತ್ತು ಪತ್ನಿಯರ ಶಿಲ್ಪಗಳನ್ನು ನಿರ್ಮಿಸಿರುತ್ತಾರೆ. ಇವುಗಳಿಗೂ ಕೂಡ ದೇವತೆಗಳಿಗೆ ಇರುವಂತೆ ಆಯುಧಗಳು ಹಾಗೂ ಅಲಂಕರಣವನ್ನು ಮಾಡಲಾಗುತ್ತದೆ. ದೇವಾಲಯದ ಮುಖ್ಯ ದೇವರು ಶಿವನಾದರೆ ಶೈವ ದ್ವಾರಪಾಲಕರನ್ನು, ವಿಷ್ಣುವಾದರೆ ವೈಷ್ಣವ ದ್ವಾರಪಾಲಕರನ್ನು, ಜಿನ ಮೂರ್ತಿಯಾದರೆ ಯಕ್ಷಯಕ್ಷಿಯರ ಶಿಲ್ಪಗಳನ್ನು ಹಾಗೂ ಕೆಲವು ಸಂದರ್ಭಗಳಲ್ಲಿ ರತಿ–ಮನ್ಮಥರ ಶಿಲ್ಪಗಳನ್ನು ಕೆತ್ತಿರುತ್ತಾರೆ. ಮುಖ್ಯ ಗರ್ಭಗುಡಿಯ ದೇವತೆಗಳು ಹರಿಹರನಾದರೆ ಎಡಭಾಗದಲ್ಲಿ ವೈಷ್ಣವ ದ್ವಾರಪಾಲಕನನ್ನು, ಬಲಭಾಗದಲ್ಲಿ ಶೈವ ದ್ವಾರಪಾಲಕನನ್ನು ನಿಲ್ಲಿಸಿರುತ್ತಾರೆ. ಇದಕ್ಕೆ ಉದಾಹರಣೆಯಾಗಿ ಕೋರವಂಗಲದ ಗೋವಿಂದೇಶ್ವರ ದೇವಾಲಯವನ್ನು ಕೊಡಬಹುದಾದರೂ ಇಲ್ಲಿ ಆನೆಯು ಕಂಡು ಬರದೇ ಕೇವಲ ಕುಂಭಗಳ ಕೆತ್ತನೆಯನ್ನು ನೋಡಬಹುದು.[16] ಕೆಲವು ಶಿಲ್ಪಗಳು ಎತ್ತರವಾದ ದ್ವಾರಪಾಲಕರ ಶಿಲ್ಪಗಳನ್ನು ಕೆತ್ತಿರುವುದನ್ನು ನಾವು ಹಳೇಬೀಡಿನ ಹೊಯ್ಸಳೇಶ್ವರ ಮತ್ತು ಬಳ್ಳಿಗಾವೆಯ ದೇವಾಲಯಗಳಲ್ಲಿ ಕಾಣಬಹುದು. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ದ್ವಾರಪಾಲಕರ ಶಿಲ್ಪಗಳು 7 ಅಡಿ ಎತ್ತರವನ್ನು ಹೊಂದಿರುವುದರ ಜೊತೆಗೆ ಬಹಳ ಸುಂದರ ಮತ್ತು ಆಕರ್ಷಕ ಕುಸುರಿ ಕೆತ್ತನೆಗಳಿಂದ ಕೂಡಿವೆ.[17]

**ನವರಂಗ**: ಹೊಯ್ಸಳ ದೇವಾಲಯಗಳಲ್ಲಿ ನವರಂಗವು ಒಂದು ಪ್ರಮುಖ ವಾಸ್ತು ಭಾಗವಾಗಿದ್ದು ಇದು ದೇವಾಲಯದ ವಿಭಿನ್ನ ಕಾರ್ಯಚಟುವಟಿಕೆಗಳನ್ನು ನಡೆಸುವ ಮುಖ್ಯ ಕೇಂದ್ರವಾಗಿತ್ತು. ಹೆಸರೇ ಸೂಚಿಸುವಂತೆ ನವರಂಗವು ೯ ಅಂಕಣಗಳನ್ನು ಮತ್ತು ನಾಲ್ಕು ಅಥವಾ ನಾಲ್ಕಕ್ಕಿಂತಲೂ ಹೆಚ್ಚು ಸ್ತಂಭಗಳನ್ನು ಹೊಂದಿರುತ್ತದೆ. ನವರಂಗದ ಅಂಕಣವು ಉಳಿದ ಎಲ್ಲಾ ಅಂಕಣಗಳಿಗಿಂತ ಹೆಚ್ಚು ವಿಸ್ತಾರವಾಗಿ ಸ್ವಲ್ಪ ಎತ್ತರವಾದ ವೇದಿಕೆಯನ್ನು ಹೊಂದಿದ್ದು ಇದನ್ನು ಮನೋರಂಜನಾ ಕಾರ್ಯಕ್ರಮಗಳಿಗೆ ಅದರಲ್ಲೂ ಮುಖ್ಯವಾಗಿ ಸಂಗೀತ ಮತ್ತು ನೃತ್ಯ ಕಾರ್ಯಕ್ರಮಗಳಿಗೆ ಬಳಸಿಕೊಳ್ಳುತ್ತಿದ್ದರೆಂಬುದು ತಿಳಿದು ಬರುತ್ತದೆ. ಆದರೆ ಕೆಲವು ಶೈವ ದೇವಾಲಯಗಳಲ್ಲಿ ಈ ಅಂಕಣದಲ್ಲಿ ದೊಡ್ಡದಾದ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿರುತ್ತದೆ. ಹೊಯ್ಸಳ ದೇವಾಲಯಗಳಲ್ಲಿ ನವರಂಗದ ಗೋಡೆಗಳಿಗೆ ಹೊಂದಿಕೊಂಡಂತೆ ದೇವಕೋಷ್ಠಗಳನ್ನು ಮತ್ತು ಇವುಗಳ ಮೇಲ್ಭಾಗದಲ್ಲಿ ವಿವಿಧ ಶಿಖರದ ಮಾದರಿಗಳನ್ನು ನಿರ್ಮಿಸಿರುತ್ತಾರೆ. ಈ ಕೋಷ್ಠಗಳ ಒಳಗೆ ಆಯಾ ದೇವಾಲಯದ ಮುಖ್ಯ ದೇವರಿಗೆ ಸಂಬಂಧಿಸಿದ ಗಣೇಶ, ಕೇಶವ, ಸರಸ್ವತಿ, ಮಹಿಷಮರ್ಧಿನಿ, ವಿಶ್ವಸೇನ, ಯೋಗಾನರಸಿಂಹ, ಲಕ್ಷ್ಮಿ, ಭೈರವ, ಚಾಮುಂಡಿ, ಶಿವಲಿಂಗ ಮತ್ತು ಸಪ್ತಮಾತೃಕೆಯರ ಪಟ್ಟಿಕೆ ಇನ್ನೂ ಮುಂತಾದ ಬಿಡಿ ಶಿಲ್ಪಗಳನ್ನು ಇಟ್ಟಿರುತ್ತಾರೆ. ನವರಂಗದ ಒಳಭಿತ್ತಿಯು ಹೊರಭಿತ್ತಿಯಂತೆ ಶಿಲ್ಪಗಳು, ಸುರುಳಿ ಬಳ್ಳಿಗಳ ಅಲಂಕರಣದಿಂದ ಕೂಡಿರದೇ ಸರಳವಾಗಿರುವುದರಿಂದ ಭಿತ್ತಿಗೆ ಹೊಂದಿಕೊಂಡಂತಿರುವ ಸ್ತಂಭಗಳಿಗೆ ಸರಳವಾದ ಅಲಂಕರಣವನ್ನು ಮಾಡಲಾಗಿರುತ್ತದೆ.

**ಕಂಬಗಳು**: ಹೊಯ್ಸಳ ದೇವಾಲಯಗಳಲ್ಲಿ ಕಂಡು ಬರುವ ಆಕರ್ಷಣೀಯ ಭಾಗಗಳಲ್ಲಿ ಕಂಬಗಳೂ ಸಹ ಬಹಳ ಪ್ರಮುಖವಾದವು. ಹೊಯ್ಸಳ ಶಿಲ್ಪಿಗಳು ಕಂಬಗಳನ್ನು ಮಾಡುವುದರಲ್ಲಿ ಎಷ್ಟರಮಟ್ಟಿಗೆ ಕಲಾಭಿರುಚಿಯನ್ನು ಮತ್ತು ನೈಪುಣ್ಯತೆಯನ್ನು ಹೊಂದಿದ್ದರೆಂಬುದು ಇವರ ರಚನೆಗಳಿಂದ ತಿಳಿದು ಬರುತ್ತದೆ. ಇವರ ಕಾಲದ ಕಂಬಗಳ ರಚನಾ ಕ್ರಮವು ಎಂಥಹವರನ್ನು ಬೆರಗುಗೊಳಿಸುತ್ತದೆ. ಸ್ತಂಭಗಳಲ್ಲಿ ನಾವು ವೃತ್ತಾಕಾರ, ಅಷ್ಟಕೋನಾಕೃತಿ, ಹದಿನಾರು ಕೋನಗಳ ಕಂಬ, ಗಂಟೆಯಾಕಾರವನ್ನು ಹೊಂದಿರುವ ಇನ್ನೂ ಮುಂತಾದ ವಿಧಗಳ ಸ್ತಂಭಗಳನ್ನು ಕಾಣಬಹುದಾಗಿದೆ. ಹೊಯ್ಸಳ ಶೈಲಿಯ ಕಂಬಗಳನ್ನು ನಾವು ಐದು ಭಾಗಗಳಾಗಿ ವಿಂಗಡಿಸಬಹುದು.[18] ಪೀಠ, ಉಪಪೀಠ ಅಥವಾ ಅಶ್ವಪಾದ, ಮುಖ್ಯದಿಂಡು, ಇದ್ಯೆ ಮತ್ತು ಫಲಕ ಹಾಗೂ ಬೋದಿಗೆ. ಪೀಠ ಭಾಗವು ಸಾಮಾನ್ಯವಾಗಿ ಚೌಕಾಕಾರವಾಗಿದ್ದು ಅದರ ಮೇಲೆ ಚೌಕಾಕಾರದ ದಿಂಡು ಹಾಗೂ ಅದರ ಮೇಲೆ ವೃತ್ತಾಕಾರದ ದಿಂಡಿನ ಅಲಂಕರಣವಿರುತ್ತದೆ. ಈ ದಿಂಡು ಕುಂಭ, ಗಂಟೆಗಳ ಆಕೃತಿಯಲ್ಲಿ ಅಲಂಕರಣಗೊಂಡು ಸೂಕ್ಷ್ಮಾತೀಸೂಕ್ಷ್ಮ ಉಂಗುರ

ರೇಖೆಗಳಿಂದ, ನಕ್ಷತ್ರಾಕಾರ ಮತ್ತು ವೃತ್ತಾಕಾರದ ಬಳೆಗಳಿಂದ ಕೂಡಿರುತ್ತದೆ. ಈ ಕಂಬಗಳ ಮೇಲ್ಮೈ ಬಹಳ ನಯವಾಗಿದ್ದು ಇವುಗಳ ಹೊಳಪಿನಿಂದ ಬೆಳಕು ಕನ್ನಡಿಯಿಂದ ಪ್ರತಿಫಲಿಸುವಂತೆ ಕಂಡು ಬರುತ್ತದೆ. ಈ ಕಂಬಗಳು ಇಷ್ಟೊಂದು ಆಕರ್ಷಣೀಯವೂ, ಪ್ರಮಾಣಬದ್ಧವೂ ಆಗಿರಲು ಇವುಗಳನ್ನು 'ಲೇತ್' ಯಂತ್ರವನ್ನು ಬಳಸಿ ನಿರ್ಮಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[19] ಈ ಅಲಂಕಾರಿಕ ದಿಂಡಿನ ನಂತರ ಚತುರಶ್ರವಾದ ಫಲಕ ನಂತರ ಬೋದಿಗೆ ಕಂಡು ಬರುತ್ತದೆ. ತರಂಗ ಪಟ್ಟಿಕೆಗಳಿಂದ ಬಾಳೆಹೂವಿನ ಮೊಗ್ಗಿನಂತೆ ಹೊರಚಾಚಿರುವ ಭಾಗದ ಅಲಂಕರಣದಿಂದ ಚೌಕಾಕಾರವಾಗಿ, ಆಯತಾಕಾರವಾಗಿ ಮತ್ತು ವೃತ್ತಾಕಾರವಾಗಿಯೂ ಬೋದಿಗೆಗಳು ಕಂಡು ಬರುತ್ತವೆ. ಕೆಲವು ದೇವಾಲಯಗಳಲ್ಲಿ ಮದನಿಕೆಯರ ಶಿಲ್ಪಗಳನ್ನು ಹಾಕಲು ಕೂಡ ಬೋದಿಗೆಗಳನ್ನು ಬಳಸಿರುವುದು ಕಂಡು ಬರುತ್ತದೆ. ಬೋದಿಗೆಗೂ ಮೇಲ್ಛಾವಣಿಗೂ ಸಂಬಂಧಿಸಿದಂತೆ ದೊಡ್ಡ ಮದನಿಕಾ ವಿಗ್ರಹಗಳು ಬಾಗಿಕೊಂಡು ಕೆಳಗೆ ನೋಡುತ್ತಿರುವಂತೆ ಸೇರಿಸಲ್ಪಟ್ಟಿರುತ್ತದೆ. ಈ ರೀತಿಯ ರಚನೆಯನ್ನು ನಾವು ಬೇಲೂರು ಮತ್ತು ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯದಲ್ಲಿ ನೋಡಬಹುದು.

**ಭುವನೇಶ್ವರಿಗಳು**: ಹೊಯ್ಸಳ ದೇವಾಲಯಗಳಲ್ಲಿ ಭಿತ್ತಿ, ಶಿಖರ, ಸ್ತಂಭಗಳು ಹಾಗೂ ಇನ್ನಿತರ ಭಾಗಗಳಿಗಿಂತಲೂ ಅತಿ ಹೆಚ್ಚು ಅಲಂಕಾರಿಕವೂ, ಆಕರ್ಷಣೀಯವೂ ಆದ ಭಾಗವೆಂದರೆ ಭುವನೇಶ್ವರಿಗಳು. ಈ ಭುವನೇಶ್ವರಿ ಎಂಬ ಪದಕ್ಕೆ ಪರ್ಯಾಯವಾಗಿ 'ವಿತಾನ' ಎಂಬ ಪದವನ್ನು ಸಹ ಬಳಸುವುದುಂಟು. ಹೊಯ್ಸಳರ ಕಾಲದ ಗುಮ್ಮಟಾಕಾರದ ಒಳಛಾವಣಿಗಳನ್ನು ಭುವನೇಶ್ವರಿಗಳು ಎಂದು ಕರೆಯಲಾಗುತ್ತದೆ. ಚತುರ್ರಶವಾದ ತೊಲೆಗಳ ಮೇಲ್ಭಾಗದಲ್ಲಿ ಇವು ಅಲಂಕೃತವಾಗಿದ್ದು ಮಧ್ಯಭಾಗದಲ್ಲಿ ಇಳಿಬಿಟ್ಟ ಕಮಲದ ಮೊಗ್ಗಿನಾಕಾರವನ್ನು ಮೂಡಿಸಿರುತ್ತಾರೆ. ಇದು ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಕಂಡು ಬರುವ ಭುವನೇಶ್ವರಿಗಳ ಸಾಮಾನ್ಯ ಲಕ್ಷಣವಾಗಿದೆ. ಇವು ದೇವಾಲಯದ ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಮತ್ತು ಮಹಾಮಂಟಪಗಳಲ್ಲಿಯೂ ಸಹ ಕಂಡು ಬರುತ್ತವಾದರೂ ಗರ್ಭಗೃಹ ಮತ್ತು ಸುಖನಾಸಿ ಭಾಗದಲ್ಲಿ ಸರಳ ರಚನೆಯನ್ನು ಹೊಂದಿರುತ್ತವೆ. ಗರ್ಭಗೃಹ ಮತ್ತು ಸುಖನಾಸಿಗಳಲ್ಲಿ ಒಂದು ಅಥವಾ ಎರಡು ಹಂತಗಳನ್ನು ಹೊಂದಿರುವ ಕೇವಲ ಪದ್ಮದ ಅಲಂಕರಣೆಯನ್ನು ಹೊಂದಿರುವ ನಾಭಿಚ್ಛಂಧ ಮಾದರಿಯ ವಿತಾನಗಳು ಕಂಡುಬಂದರೂ ಸಹ ಕೆಲವು ದೇವಾಲಯಗಳಲ್ಲಿ ವಿಶಾಲವಾದ ಶಿಲಾಫಲಕದ ಮೇಲೆ ೯ ಪದ್ಮಗಳ ಕೆತ್ತನೆ ಹೊಂದಿರುವ ನವಪದ್ಮಮಂಡಲ ವಿತಾನವನ್ನು ನೋಡಬಹುದು. ಆದರೆ ನವರಂಗದ ಭುವನೇಶ್ವರಿಗಳು ಅತ್ಯಂತ ಸುಂದರವಾಗಿ ಮೂಡಿಬಂದಿದ್ದು ಹೊಯ್ಸಳ ಶಿಲ್ಪಿಗಳು ಇವುಗಳ

ನಿರ್ಮಾಣದಲ್ಲಿ ಹೊಂದಿದ್ದಂತಹ ಕಲಾಕೌಶಲ್ಯವನ್ನು ಪ್ರತಿಬಿಂಬಿಸುತ್ತವೆ. 'ಹೊಯ್ಸಳರ ಭುವನೇಶ್ವರಿಗಳು ಹೊಯ್ಸಳ ಶಿಲ್ಪಗಳ ನೂತನ ಆವಿಷ್ಕಾರದ ನೈಜರೂಪಗಳು' ಎಂಬುದಾಗಿ ವಿದ್ವಾಂಸರೊಬ್ಬರು ಅಭಿಪ್ರಾಯ ಪಡುತ್ತಾರೆ.[20] ನವರಂಗದ ಮಧ್ಯದಂಕಣದ ಭುವನೇಶ್ವರಿಯು ಉಳಿದ ಎಲ್ಲಾ ಅಂಕಣಗಳ ಭುವನೇಶ್ವರಿಗಳಿಗಿಂತ ವಿಶಾಲತೆಯಿಂದ ಕೂಡಿದ್ದು ಹೆಚ್ಚಿನ ಅಲಂಕರಣೆಯನ್ನು ಹೊಂದಿರುತ್ತದೆ. ಇದು ಮೂರರಿಂದ ನಾಲ್ಕು ಹಂತಗಳನ್ನು ಹೊಂದಿದ್ದು ಸುಮಾರು ೩ ರಿಂದ ೫ ಅಡಿ ಆಳವಾಗಿ ಗುಮ್ಮಟಾಕಾರವನ್ನು ಹೊಂದಿರುತ್ತದೆ. ಇದರ ಮಧ್ಯಭಾಗದಿಂದ ಪದ್ಮಕೇಸರ ಅಥವಾ ಬಾಳೆ ಮೊಗ್ಗಿನ ಆಕಾರವನ್ನು ಜೋತಾಡುತ್ತಿರುವಂತೆ ಕೆತ್ತಲಾಗಿರುತ್ತದೆ. ಆದರೆ ಕೆಲವು ಭುವನೇಶ್ವರಿಗಳಲ್ಲಿ ಪದ್ಮಕೇಸರ ಅಥವಾ ಬಾಳೆ ಮೊಗ್ಗಿಗೆ ಬದಲಾಗಿ ಶಿಲಾಫಲಕವನ್ನು ಅಲವಡಿಸಲಾಗಿದ್ದು ಇವುಗಳಲ್ಲಿ ನಟರಾಜ, ನರಸಿಂಹ ಮುಂತಾದ ದೇವತೆಗಳ ಶಿಲ್ಪಗಳನ್ನು ಮೂಡಿಸಿರುತ್ತಾರೆ. ಭುವನೇಶ್ವರಿಯ ಮೊದಲ ಹಂತದ ದಿಂಡು ಕಲ್ಲಿನಲ್ಲಿ ಆಯಾ ದಿಕ್ಕಿಗನುಗುಣವಾಗಿ ವಾಹನ ಸಮೇತರಾಗಿರುವ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಹಾಗೂ ನಂತರದ ಪಟ್ಟಿಕೆಗಳಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳು, ಇತರ ದೇವತಾ ಮೂರ್ತಿಗಳು, ಪರಿವಾರ ದೇವತೆಗಳು, ನೃತ್ಯಗಾರರು, ವಾದ್ಯವೃಂದದವರು, ವ್ಯಾಳ ಮತ್ತು ಕೀರ್ತಿಮುಖಗಳು, ಸುರುಳಿ ಕೆತ್ತನೆಗಳು ಹೀಗೆ ಹತ್ತು ಹಲವಾರು ಆಕರ್ಷಕ ಅಂಶಗಳನ್ನು ಅತ್ಯಂತ ಸೂಕ್ಷ್ಮವಾಗಿ ಕೆತ್ತಿರುವುದನ್ನು ನಾವು ಕಾಣಬಹುದಾಗಿದೆ.[21] ಈ ರೀತಿಯ ಭುವನೇಶ್ವರಿಗಳನ್ನು ಕೇವಲ ನವರಂಗದಲ್ಲಿ ಮಾತ್ರವಲ್ಲದೇ ಮುಖಮಂಟಪ ಮತ್ತು ಮಹಾಮಂಟಪಗಳಲ್ಲೂ ನಿರ್ಮಿಸಿರುವುದನ್ನು ನಾವು ನೋಡಬಹುದು.

**ಕಕ್ಷಾಸನಗಳು**: ಹೊಯ್ಸಳ ದೇವಾಲಯಗಳಲ್ಲಿ ಇತರ ಭಾಗಗಳಂತೆ ಕಕ್ಷಾಸನಗಳೂ ಕೂಡ ಪ್ರಮುಖ ಆಕರ್ಷಕ ಭಾಗವಾಗಿದ್ದು ಇವುಗಳನ್ನು ನಿರ್ಮಿಸಲು ದೊಡ್ಡ ಗಾತ್ರದ ಸೋಪುಗಲ್ಲಿನ ಚಪ್ಪಡಿಗಳನ್ನು ಬಳಸಿರುತ್ತಾರೆ. ಸಾಮಾನ್ಯವಾಗಿ ಕಕ್ಷಾಸನಗಳನ್ನು ಮುಖಮಂಟಪದ ಇಕ್ಕೆಲಗಳಲ್ಲಿ ಹಾಗೂ ಮಹಾಮಂಟಪದ ಒಳಭಾಗದಲ್ಲಿ ಸುತ್ತಲೂ ನಿರ್ಮಿಸಲಾಗಿರುತ್ತದೆ. ಮುಖಮಂಟಪದಲ್ಲಿ ಕಕ್ಷಾಸನದ ಹಿಂಬದಿಯ ಅಧಿಷ್ಠಾನವು ಕೆಲವು ಸಂದರ್ಭಗಳಲ್ಲಿ ದೇವಾಲಯದ ಅಧಿಷ್ಠಾನಕ್ಕಿಂತ ಭಿನ್ನವಾಗಿದ್ದು ಇಲ್ಲಿ ನೃತ್ಯಗಾರರು, ವಾದ್ಯವೃಂದದವರ ಶಿಲ್ಪಗಳನ್ನು ಮತ್ತು ಸಣ್ಣ ಸಣ್ಣ ಶಿಖರಗಳ ಮಾದರಿಗಳನ್ನು ನಿರ್ಮಿಸಿರುತ್ತಾರೆ.

**ಹೊಯ್ಸಳ ಶಿಲ್ಪಗಳಲ್ಲಿ ಪುರಾಣಗಳ ಪ್ರಭಾವ**

ಧಾರ್ಮಿಕ ಶ್ರದ್ಧೆಯು ಜೀವನದ ಒಂದು ಪ್ರಮುಖ ಅಂಶ ಎನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ದೇವಾಲಯಗಳು ಬೆಳೆದಂತೆ ಶಿಲ್ಪಗಳು ರೂಪುಗೊಂಡು ವಾಸ್ತುವಿನ ಶ್ರೀಮಂತಿಕೆಯನ್ನು ಹೆಚ್ಚಿಸಿದವು. ವಾಸ್ತುಶಿಲ್ಪವು ಬಹಳ ವರ್ಷಗಳ ಕಾಲದ ಉಳಿಯಬೇಕು, ಆಕರ್ಷಣೀಯವಾಗಿರಬೇಕು ಎಂಬ ಉದಾತ್ತ ಭಾವನೆಗಳಿಂದ ವಾಸ್ತು ಶಿಲ್ಪಿಗಳು ಹೆಚ್ಚಾಗಿ ದೇವಾಲಯಗಳ ವಾಸ್ತುವಿನ ಜೊತೆಗೆ ಶಿಲ್ಪಕ್ಕೆ ಹೆಚ್ಚು ಆದ್ಯತೆ ನೀಡಿ ಬೆಳೆಸಿದರು. ಅದೇ ರೀತಿಯಾಗಿ ಹೊಯ್ಸಳ ಶಿಲ್ಪಿಗಳೂ ಸಹ ದೇವಾಲಯಗಳಲ್ಲಿ ಶಿಲ್ಪಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡುವ ಮೂಲಕ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಪೌರಾಣಿಕ ಹಿನ್ನೆಲೆಯನ್ನು ಬಳಸಿಕೊಂಡು ತಿಳಿಸುವ ಪ್ರಯತ್ನ ಮಾಡಿ ಯಶಸ್ವಿಯಾದರು. ಸಾಹಿತ್ಯದ ಒಂದು ಪ್ರಕಾರವಾದ 'ಆಗಮಗಳು' ಶಿಲ್ಪಿಗೆ ಒಂದು ಬಗೆಯ ನೀತಿ ನಿಯಮಗಳನ್ನು ರೂಪಿಸಿದರೆ ಸಾಹಿತ್ಯದ ಮತ್ತೊಂದು ಪ್ರಕಾರವಾದ 'ಪುರಾಣಗಳು' ಶಿಲ್ಪಿಯ ಕಲ್ಪನೆಯನ್ನು ಸಾಕಾರಗೊಳಿಸಲು ನೂರೆಂಟು ಕಥಾವಸ್ತುಗಳನ್ನು ಆತನಿಗೆ ನೀಡಿದವು. ಇದರ ಫಲವಾಗಿ ಹೊಯ್ಸಳ ದೇವಾಲಯಗಳಲ್ಲಿ ನಾವು ಸಾಕಷ್ಟು ಪೌರಾಣಿಕ ಶಿಲ್ಪಗಳನ್ನು ನೋಡಬಹುದಾಗಿದೆ. ಶಿವನಿಗೆ ಸಂಬಂಧಪಟ್ಟಂತೆ ಶಿವ ಪುರಾಣ, ಲಿಂಗ ಪುರಾಣ, ಶಿವಲೀಲಾ ಮೂರ್ತಿಗಳು, ಶಿವನ ವಿವಿಧ ಕಥಾನಕಗಳನ್ನು ವರ್ಣಿಸುವ 25 ಲೀಲಾ ವಿನೋದಗಳು, ವಿಷ್ಣುವಿಗೆ ಸಂಬಂಧಪಟ್ಟಂತೆ ದಶಾವತಾರದ ಕಥೆಗಳು ಮತ್ತು ರಾಮಾಯಣ, ಮಹಾಭಾರತ, ಭಾಗವತದ ಕಥೆಗಳನ್ನು ನಿರೂಪಿಸುವ ಸಾಹಿತ್ಯಿಕ ಕಲ್ಪನೆಗಳಿಗೆ ಹೊಯ್ಸಳ ಶಿಲ್ಪಿಗಳು ಸಾಕಾರ ರೂಪವನ್ನು ನೀಡಿದರು. ರಾಮನ ಸ್ವಯಂವರ ಪ್ರಸಂಗ, ಹನುಮಂತನ ಭೇಟಿ, ಯುದ್ಧದ ಸನ್ನಿವೇಶಗಳು, ಕಪಿಗಳಿಂದ ಸಮುದ್ರದ ಮೇಲೆ ಸೇತುವೆಯ ನಿರ್ಮಾಣ, ರಾಮ ರಾವಣರ ಯುದ್ಧ, ದ್ರೌಪದೀ ಸ್ವಯಂವರ, ಪಗಡೆಯಾಟ, ಯುದ್ಧದ ಸನ್ನಿವೇಶಗಳು, ಅಭಿಮನ್ಯುವಿನ, ಚಕ್ರವ್ಯೂಹದ ಮರಣ ಇನ್ನೂ ಮುಂತಾದ ಶಿಲ್ಪಗಳನ್ನು ದೇವಾಲಯದ ಭಾಗಗಳಲ್ಲಿ ಅಳವಡಿಸುವ ಮೂಲಕ ಪೌರಾಣಿಕ ಇತಿಹಾಸವನ್ನು ನೋಡುಗರಿಗೆ ಮನಮುಟ್ಟುವಂತೆ ಹಾಗೂ ಪ್ರತ್ಯಕ್ಷವಾಗಿ ನೋಡಿರುವಂತೆ ಬಿಂಬಿಸಲಾಗಿದೆ.

**ಹೊಯ್ಸಳ ಶಿಲ್ಪಗಳು**: ಹೊಯ್ಸಳ ಶಿಲ್ಪಗಳು ಅವುಗಳ ಸೌಂದರ್ಯ, ಗಾಂಭೀರ್ಯ ಮತ್ತು ನೈಜತೆ ಇನ್ನೂ ಮುಂತಾದ ವಿಶೇಷ ಗುಣಗಳಿಂದ ಕಲಾಭಿರುಚಿಯುಳ್ಳ ಜನಸಮೂಹವನ್ನು ತನ್ನತ್ತ ಸೆಳೆಯುವ ಮೂಲಕ ಜಗತ್ಪ್ರಸಿದ್ಧವಾಗಿವೆ. ಹೊಯ್ಸಳರ ಆಳ್ವಿಕೆಗೂ ಮುನ್ನ ವಿವಿಧ

ರಾಜಮನೆತನಗಳು ತಮ್ಮ ಅವಧಿಯಲ್ಲಿ ವಿವಿಧ ಕಲಾಶೈಲಿ ಮತ್ತು ಮಾಧ್ಯಮವನ್ನು ಬಳಸಿಕೊಂಡು ಶಿಲ್ಪಗಳನ್ನು ರೂಪಿಸಿದ್ದರು. ಆದರೆ ನಂತರ ಆಳ್ವಿಕೆಗೆ ಬಂದ ಹೊಯ್ಸಳರು ಈ ಹಿಂದೆ ಇದ್ದ ಕಲಾಶೈಲಿಗಿಂತ ವಿಭಿನ್ನವಾಗಿ ಹೆಚ್ಚು ವೈವಿಧ್ಯತೆಗಳನ್ನು ಅಳವಡಿಸಿ ಶಿಲ್ಪಗಳನ್ನು ರಚಿಸಿದರು. ಹೊಯ್ಸಳ ದೇವಾಲಯಗಳಲ್ಲಿ ಕಂಡು ಬರುವಷ್ಟು ಶಿಲ್ಪ ಸಂಪತ್ತು ದಕ್ಷಿಣ ಭಾರತವನ್ನು ಆಳ್ವಿಕೆ ನಡೆಸಿದ ಯಾವ ರಾಜಮನೆತನಗಳಲ್ಲೂ ಕಂಡು ಬರುವುದಿಲ್ಲ ಎಂದು ಹೇಳಿದರೆ ಉತ್ಪ್ರೇಕ್ಷೆ ಎನಿಸದು. ಇವರ ಕಾಲದಲ್ಲಿ ಇಷ್ಟೊಂದು ಸಂಖ್ಯೆಯ ಶಿಲ್ಪಗಳು ಮೂಡಿ ಬರಲು ಮೂಲ ಕಾರಣ ಇವರು ಬಳಸಿದ ಕ್ಲೋರೈಟಿಕ್ ಸಿಸ್ಟ್ (ಸೋಪುಗಲ್ಲು) ಎಂಬ ಮೃದು ಶಿಲಾ ಮಾಧ್ಯಮ ಬಹುಮುಖ್ಯವಾಗಿದೆ. ಈ ಶಿಲೆಯು ಬಹಳ ಮೃದುವಾಗಿದ್ದು ಸೂಕ್ಷ್ಮ ಮತ್ತು ಅಲಂಕಾರಿಕ ಅಂಶಗಳನ್ನು ಮೂಡಿಸಲು ಶಿಲ್ಪಿಗಳಿಗೆ ನೆರವಾಯಿತು. ಆದ್ದರಿಂದ ಇವರ ಕಾಲದಲ್ಲಿ ಅಸಂಖ್ಯಾ ದೇವಾಲಯಗಳು, ಸಾವಿರಾರು ಶಿಲ್ಪಗಳು ನಿರ್ಮಿತವಾದವು.

ಹೊಯ್ಸಳ ಶಿಲ್ಪಗಳನ್ನು ನಾವು ಎರಡು ಭಾಗಗಳಾಗಿ ಅಧ್ಯಯನದ ದೃಷ್ಟಿಯಿಂದ ವಿಂಗಡಿಸಬಹುದು:

1. ಪೂರ್ಣ ಶಿಲ್ಪಗಳು

2. ಉಬ್ಬು ಶಿಲ್ಪಗಳು

ಪೂಜಾರಾಧನೆಗೆ ಒಳಪಡುವ ಗರ್ಭಗೃಹದ ವಿಗ್ರಹಗಳು, ದೇವಕೋಷ್ಠಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟ ವಿಗ್ರಹಗಳು ಪೂರ್ಣ ಶಿಲ್ಪಗಳಾಗಿದ್ದು ಜೊತೆಗೆ ಹುಲಿಯೊಡನೆ ಹೋರಾಡುತ್ತಿರುವ ಸಳನ ಶಿಲ್ಪಗಳು ಮತ್ತು ನಂದಿಶಿಲ್ಪಗಳೂ ಕೂಡ ಪೂರ್ಣ ಶಿಲ್ಪಗಳ ಸ್ಥಾನವನ್ನು ಪಡೆದಿವೆ.

ದೇವಾಲಯದ ಭಿತ್ತಿ, ಶಾಲಾ, ಭದ್ರಶಾಲಾ, ವಿಮಾನ, ಕರ್ಣ, ನಾಸೀ, ಭದ್ರ, ಸುಖನಾಸದ ಫಲಕ, ಹಾರ, ಲಲಾಟ, ಭುವನೇಶ್ವರಿಯಲ್ಲಿ ಕಂಡು ಬರುವ ಶಿಲ್ಪಗಳು ಮತ್ತು ದ್ವಾರಪಾಲಕರ ಹಾಗೂ ಮದನಿಕಾ ವಿಗ್ರಹಗಳು ಉಬ್ಬುಶಿಲ್ಪಗಳಾಗಿವೆ.

ಹೊಯ್ಸಳ ದೇವಾಲಯಗಳು ಶಿಲ್ಪ ಸಮುಚ್ಛಯವೇ ಆಗಿದ್ದು ಈ ಶಿಲ್ಪಗಳು ಗರ್ಭಗೃಹ ಮತ್ತು ದೇವಾಲಯದ ಇತರ ಭಾಗಗಳಲ್ಲಿ ಹಲವಾರು ಭಂಗಿಗಳಲ್ಲಿ ಮೂಡಿಬಂದಿದ್ದು ಅವುಗಳನ್ನು ಸ್ಥಾನಕ, ಆಸೀನ, ನೃತ್ಯ, ಸಂಹಾರ, ಶಯನ ಎಂಬ ಐದು ವಿಧಗಳಾಗಿ ವಿಂಗಡಿಸಬಹುದು.

ಸ್ಥಾನಕ ಭಂಗಿ ಎಂದರೆ ನಿಂತಿರುವ ಭಂಗಿ ಎಂಬರ್ಥ. ಇದನ್ನು ಸಮಭಂಗಿ ಎಂತಲೂ ಕರೆಯುತ್ತಾರೆ. ಬೇಲೂರು ಚನ್ನಕೇಶವ, ಹೆರಗಿನ ಕೀರ್ತಿನಾರಾಯಣ, ಹಿರೇಕಡಲೂರಿನ ಕೇಶವ ಮುಂತಾದ ವಿಗ್ರಹಗಳು ಸ್ಥಾನಕ ಭಂಗಿಯ ವಿಗ್ರಹಗಳಿಗೆ ಉದಾಹರಣೆಗಳಾಗಿವೆ. ಆಸೀನ ಎಂದರೆ ಕುಳಿತಿರುವ ಭಂಗಿ ಎಂದರ್ಥ. ಬೆಳವಾಡಿ ನರಸಿಂಹ, ನುಗ್ಗೇಹಳ್ಳಿ ನರಸಿಂಹ ವಿಗ್ರಹಗಳು ಆಸೀನ ಮೂರ್ತಿಗಳಾಗಿವೆ. ಗರ್ಭಗೃಹದಲ್ಲಿರುವ ಕೃಷ್ಣನ ಮೂರ್ತಿಗಳನ್ನು ನೃತ್ಯ ಮೂರ್ತಿಗಳಿಗೆ ಉದಾಹರಿಸಬಹುದು. ಆದರೆ ಈ ನೃತ್ಯಮೂರ್ತಿಗಳನ್ನು ತ್ರಿಭಂಗಿ ಮೂರ್ತಿಗಳೆಂದೂ ಸಹ ಕರೆಯಲಾಗಿದ್ದು ದ್ವಾರಪಾಲಕರ ಶಿಲ್ಪಗಳು ಕೂಡ ಈ ಗುಂಪಿನಲ್ಲಿ ಬರುತ್ತವೆ. ಶತ್ರುಗಳನ್ನು ಸಂಹಾರ ಮಾಡುತ್ತಿರುವ ಮೂರ್ತಿಗಳಿಗೆ ಸಂಹಾರಮೂರ್ತಿಗಳು ಎಂದು ಕರೆಯಲಾಗಿದ್ದು ಗಜಾಸುರ ಸಂಹಾರ ಮೂರ್ತಿ ಮತ್ತು ಅಂಧಕಾಸುರ ಸಂಹಾರ ಮೂರ್ತಿಗಳು ಇದಕ್ಕೆ ಸ್ಪಷ್ಟ ಉದಾಹರಣೆಗಳಾಗಿವೆ. ಮಲಗಿರುವ ಭಂಗಿಯಲ್ಲಿ ಮೂಡಿ ಬಂದಿರುವ ಮೂರ್ತಿಗಳಿಗೆ ಶಯನ ಮೂರ್ತಿಗಳೆಂದು ಕರೆಯಬಹುದಾಗಿದ್ದು ಮಂಡ್ಯದ ಬಳಿ ಇರುವ ಅನಂತಶಯನ ದೇವಾಲಯ. ಬಹುಮುಖ್ಯವಾಗಿ ಹಾಸನ ತಾಲೂಕಿನ ಹರಿಹರಪುರದ ಹರಿಹರೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದಲ್ಲಿದ್ದ ಅನಂತಶಯನ ವಿಗ್ರಹವು ಇಂದು ಡೆನ್ಮಾರ್ಕಿನ ಕೊಪೆನ್ ಹೆಗೆನ್ ವಸ್ತುಸಂಗ್ರಹಾಲಯದಲ್ಲಿದ್ದು ಈ ಶಯನ ಮೂರ್ತಿ ಬಹಳ ಸುಂದರ ಉದಾಹರಣೆಯಾಗಿದೆ.[22]

ಹೊಯ್ಸಳರ ಕಲೆ ಮತ್ತು ವಾಸ್ತುಶಿಲ್ಪ ಎಂಬುದು ಭಾರತೀಯ ವಾಸ್ತುಶಿಲ್ಪ ಪರಂಪರೆಯ ಅವಿಚ್ಛಿನ್ನ ಭಾಗವಾಗಿದ್ದು ತನ್ನ ಕಲಾಪ್ರೌಢಿಮೆಯಿಂದಲೇ ಜಾಗತಿಕ ಮಟ್ಟದಲ್ಲಿ ಚಿರಸ್ಥಾಯಿಯಾದ ಸ್ಥಾನವನ್ನು ಪಡೆದುಕೊಂಡಿದೆ. ಇವರ ಕಾಲದ ದೇವಾಲಯಗಳು ನಾಡಿನುದ್ದಗಲಕ್ಕೂ ಹರಡಿದ್ದು ಅಧ್ಯಯನಾಸಕ್ತರನ್ನು ಮತ್ತು ಕಲಾಭಿರುಚಿಯುಳ್ಳ ಜನರನ್ನು ವಿಶೇಷವಾಗಿ ಆಕರ್ಷಿಸುತ್ತಿದ್ದು ಪ್ರವಾಸೋದ್ಯಮದ ಬೆಳವಣಿಗೆಗೂ ಕೂಡ ತಮ್ಮ ಕೊಡುಗೆ ನೀಡುವ ಮೂಲಕ ಈ ನಾಡಿನ ಸಂಸ್ಕೃತಿ ಮತ್ತು ಪರಂಪರೆಯ ಉತ್ಕೃಷ್ಟತೆಯ ಭಾಗವಾಗಿ ಉಳಿದಿವೆ. ಪ್ರಸ್ತುತ ನನ್ನ ಅಧ್ಯಯನ ಕ್ಷೇತ್ರವಾದ ಹಾಸನ ತಾಲೂಕಿನಲ್ಲಿಯೂ ಸಹ, ಇದುವರೆವಿಗೂ ನಾವು ಗಮನಿಸಿದ ವಾಸ್ತುಶೈಲಿ ಮತ್ತು ಶಿಲ್ಪಪರಂಪರೆಯ ಬಹುಪಾಲು ಲಕ್ಷಣಗಳನ್ನು ಹೊಂದಿರುವ ಸುಂದರ ಮತ್ತು ಆಕರ್ಷಕವಾದ ದೇವಾಲಯಗಳು ಹೊಯ್ಸಳರ ಮೇರು ಪ್ರಭುತ್ವಕ್ಕೆ ಸಾಕ್ಷಿಯಾಗಿ ಕಂಡು ಬಂದಿದ್ದು ಈ ದೇವಾಲಯಗಳ ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ಮುಂದಿನ ಅಧ್ಯಾಯದಲ್ಲಿ ಸಂಪೂರ್ಣವಾಗಿ ಚರ್ಚಿಸಲಾಗಿದೆ.

## ಅಡಿ ಟಿಪ್ಪಣಿಗಳು

1. ರಾಜಶೇಖರ್, ಎಸ್., ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ, ಪು.ಸಂ. 4-5
2. ಶಿವರಾಮ ಕಾರಂತ, ಕೆ., ಚಾಳುಕ್ಯ ವಾಸ್ತುಶಿಲ್ಪ, ಪು.ಸಂ. 12
3. ಹರಿದಾಸ, ಎಂ.ಎಚ್., ಲಕ್ಕುಂಡಿ : ಕಲೆಯ ಬಲೆ, ಪು.ಸಂ. 25
4. ಅದೇ.
5. ಕನ್ನಡ ವಿಷಯ ವಿಶ್ವಕೋಶ, ಸಂ. 02, ಪು.ಸಂ. 1393
6. ತಿಪ್ಪೇರುದ್ರಸ್ವಾಮಿ, ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.ಸಂ. 578
7. ಕನ್ನಡ ವಿಷಯ ವಿಶ್ವಕೋಶ, ಸಂ. 02, ಪು.ಸಂ. 1394
8. ಪರ್ಸಿಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್, ಪು.ಸಂ. 13
9. ಅದೇ, ಪು.ಸಂ. 139
10. ಶೆಟ್ಟರ್, ಎಸ್., ದಿ ಹೊಯ್ಸಳ ಟೆಂಪಲ್ಸ್, ಸಂ. 1, ಪು.ಸಂ. 220
11. ರಂಗರಾಜು, ಎನ್. ಎಸ್., ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್, ಪು.ಸಂ. 70
12. ಕೃಷ್ಣಮೂರ್ತಿ, ಎಂ.ಎಸ್., ಹೊಯ್ಸಳ ಆರ್ಟ್, ಪು.ಸಂ. 15
13. ಶೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ. 222
14. ಆಚಾರ್ಯ, ಪಿ.ಕೆ., ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಪು.ಸಂ. 558
15. ಶ್ರೀಕಂಠಶಾಸ್ತ್ರಿ, ಎಸ್., ಹೊಯ್ಸಳ ವಾಸ್ತುಶಿಲ್ಪ, ಪು.ಸಂ. 18
16. ಶೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ. 232
17. ಶೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ. 232-233
18. ಶೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.238
19. ಶ್ರೀಕಂಠಶಾಸ್ತ್ರಿ, ಎಸ್., ಪೂರ್ವೋಕ್ತ, ಪು.ಸಂ.13
20. ಕೃಷ್ಣಮೂರ್ತಿ, ಎಂ.ಎಸ್., ಪೂರ್ವೋಕ್ತ, ಪು.ಸಂ.20
21. ಶೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.243
22. ಗೆರಾರ್ಡ್ ಫೋಕೆಮಾ, ಹೊಯ್ಸಳ ಆರ್ಕಿಟೆಕ್ಚರ್, ಸಂ. 2 (ಚಿತ್ರಗಳು), ಪು.ಸಂ. 261

## ಅಧ್ಯಾಯ–ನಾಲ್ಕು

## ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ

ಮಾನವನು ಪ್ರಾಚೀನ ಕಾಲದಿಂದಲೂ ದೈವೀ ಶಕ್ತಿಯೊಂದನ್ನು ರೂಪಿಸಿಕೊಂಡು ಅದರಲ್ಲಿ ನಂಬಿಕೆ ಭಕ್ತಿ, ಭಯ ಹೀಗೆ ಹಲವು ಭಾವನೆಗಳನ್ನು ವ್ಯಕ್ತಿಪಡಿಸುವ ಮೂಲಕ ಜೀವಿಸುತ್ತಾ ಬಂದಿದ್ದಾನೆ. ಪ್ರಾರಂಭದಲ್ಲಿ ಪ್ರಕೃತಿ ಆರಾಧಕನಾಗಿದ್ದ ಈತನಿಗೆ ಗಿಡ, ಮರ, ನದಿ ಇತ್ಯಾದಿಗಳು ಪೂಜನೀಯವಾದುವಲ್ಲದೇ ಇವುಗಳ ಸೃಷ್ಟಿಯ ಹಿನ್ನೆಲೆಯಾಗಿ ಒಂದು ಅಗೋಚರ ಶಕ್ತಿಯಿದೆ ಎಂಬ ಅರಿವು ಮೂಡಿದಾಗ ಆ ಶಕ್ತಿಗೆ ಒಂದು ರೂಪ ಕೊಡಲು ಯತ್ನಿಸಿದನು. ಹೀಗೆ ನೀಡಿದ ಆ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಆಲಯವನ್ನು ಕಟ್ಟಲು ಪ್ರಾರಂಭಿಸಿದ್ದರ ಪರಿಣಾಮವಾಗಿ ದೇವಾಲಯಗಳ ರಚನೆಗೆ ನಾಂದಿಯಾಯಿತು.[1] ಪ್ರಪಂಚದ ಎಲ್ಲಾ ನಾಗರೀಕತೆಗಳು ತಮ್ಮದೇ ಆದ ದೇವತಾ ಪರಿಕಲ್ಪನೆಗಳನ್ನು ಹೊಂದಿ, ಉಪಾಸಿಸುತ್ತಾ ಬಂದಿವೆ. ಧಾರ್ಮಿಕ ಶ್ರದ್ಧೆಯು ಜೀವನದ ಒಂದು ಪ್ರಮುಖ ಅಂಶ ಎನಿಸಿರುವ ಭಾರತದಂತಹ ಸಾಂಪ್ರದಾಯಿಕ ದೇಶವೂ ಕೂಡ ದೇವಾಲಯಗಳನ್ನು ನಿರ್ಮಿಸಿಕೊಂಡು ದೇವತಾರಾಧನೆಯ ಸಂಸ್ಕೃತಿಯನ್ನು ಪೋಷಿಸುತ್ತಾ ಬಂದಿದೆ. ಈ ದೇವಾಲಯಗಳು ಕೇವಲ ಧಾರ್ಮಿಕವಾಗಿ ಆರಾಧನಾ ಕೇಂದ್ರಗಳಾಗಿರದೇ ಸಾಮಾಜಿಕ, ಸಾಂಸ್ಕೃತಿಕ, ಕಲೆ ಮತ್ತು ವಾಸ್ತುಶಿಲ್ಪದ ಅಪ್ರತಿಮ ಅಂಶಗಳನ್ನು ಪ್ರವಹಿಸುವ ಕೇಂದ್ರಗಳೂ ಆಗಿವೆ.

ಮನುಷ್ಯನ ಜೀವನದಲ್ಲಿ ದೇವಾಲಯಗಳು ಮಹತ್ತವಾದ ಪಾತ್ರವನ್ನು ವಹಿಸಿವೆ. ದೇವಾಲಯವೆಂದರೆ ದೇವರ ವಾಸಸ್ಥಾನ. ದೇವಾಲಯವನ್ನು 'ಆಯತನ' ವೆನ್ನುವುದೂ ಉಂಟು. ಆಯತನವೆಂದರೆ ದೇವತಾ ಶಕ್ತಿಯು ಆಗಮಿಸುವ ಪವಿತ್ರ ಸ್ಥಳ. ಇದು ದೇವತೆಗಳಿಗೆ ವಿಶ್ರಾಂತಿ ಸ್ಥಳವೂ ಆಗಿದೆ. ದೇವಾಲಯವು ದೇವತೆಗಳಿಗೆ ವಾಸಸ್ಥಾನವಾದ್ದರಿಂದ ವಿಶೇಷವಾಗಿಯೂ, ವೈಭವಯುತವಾಗಿಯೂ ಇರಬೇಕು ಎಂಬ ಕಾರಣದಿಂದ ವಿಭಿನ್ನವಾಗಿ ನಿರ್ಮಾಣ ಮಾಡಲಾಗುತ್ತಿತ್ತು. ಇದರ ನಿರ್ಮಾತೃಗಳು ಶಾಸ್ತ್ರಗ್ರಂಥಗಳ ನಿಯಮಾನುಸಾರ ತಮ್ಮ ಭಾವನೆ ಮತ್ತು ಕೌಶಲ್ಯವನ್ನು ಬೆರೆಸಿ ನಯನ ಮಹೋಹರವಾಗಿ ಮತ್ತು ವಿಸ್ಮಯಕಾರಿಯಾಗಿಯೂ ನಿರ್ಮಿಸುತ್ತಿದ್ದರು.[2] ದೇವಾಲಯಗಳ ನಿರ್ಮಾಣಕ್ಕೂ ಮುಂಚೆ, ದೇವರನ್ನಿಡಲು ಒಂದು ಸಣ್ಣ ಮಂಟಪವಷ್ಟೇ ಇದ್ದು, ಇದು ದೇವಾಲಯದ ಸೀಮಿತ ಉದ್ದೇಶವನ್ನು ಪೂರೈಸುತ್ತಿದ್ದಿತು. ಆದರೆ ಕಾಲ ಕಳೆದಂತೆ ಪೂಜಾ ವಿಧಿ–ವಿಧಾನಗಳು ನಿರ್ಧಿಷ್ಟಗೊಂಡು ಆಚರಣೆಗಳು ಹೆಚ್ಚಿದಂತೆ ಅದಕ್ಕೆ ತಕ್ಕಂತೆ ದೇವಾಲಯವೂ

ವಿಸ್ತಾರಗೊಳ್ಳಲಾರಂಭಿಸಿತು. ಮನುಷ್ಯನ ಸುಸಂಸ್ಕೃತ ವಿಚಾರಗಳು ಬೆಳೆದಂತೆಲ್ಲಾ ದೇವಾಲಯವೂ ಬೆಳವಣಿಗೆಯನ್ನು ಪಡೆಯಿತಲ್ಲದೇ ಅದು ಒಂದು ಸಂಸ್ಕೃತಿಯ ಅವಿಭಾಜ್ಯ ಅಂಗವಾಯಿತು. ಈ ದೇವಾಲಯಗಳು ಕೇವಲ ಪೂಜಾ ಮಂದಿರಗಳಾಗಿರದೇ ವಿದ್ಯಾಕೇಂದ್ರಗಳಾಗಿಯೂ, ಸಂಗೀತ, ನೃತ್ಯ ಇತ್ಯಾದಿ ಕಲೆಗಳಿಗೆ ಆಸರೆಯಾಗಿಯೂ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಮಹತ್ತರ ಪಾತ್ರವನ್ನು ವಹಿಸಿದವು.

ದೇವಾಲಯ ವಾಸ್ತುಶಿಲ್ಪವು ಬೆಳೆಯುತ್ತಾ ಹೋದಂತೆ ದೇವಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ವಿಧಿ-ನಿಯಮಗಳ ವಿವರಣೆಗಳನ್ನು ಒಳಗೊಂಡ ಆಗಮ ಶಾಸ್ತ್ರೀಯ ಗ್ರಂಥಗಳು ರಚನೆಯಾದವು. ಈ ಗ್ರಂಥಗಳು ಇಡೀ ದೇವಾಲಯವನ್ನು ವಾಸ್ತುಪುರುಷನ ಶರೀರದೊಂದಿಗೆ ಸಮೀಕರಿಸಿ, ಗರ್ಭಗೃಹವು ಮುಖವೆಂದು, ಸುಖನಾಸಿ ಮತ್ತು ಗೂಢ ಮಂಟಪಗಳು ಕಂಠ, ವಕ್ಷ ಮತ್ತು ಉದರಗಳೆಂದು, ಗರುಡಗಂಬವನ್ನು ಶಿಶ್ನವೆಂತಲೂ, ಬಲಿಪೀಠವನ್ನು ಮೊಣಕಾಲು ಎಂದು ಮತ್ತು ರಾಯಗೋಪುರವನ್ನು ಪಾದಗಳೆಂದು ವರ್ಣಿಸಿವೆ.

ದೇವಾಲಯವು ಅಂದಿನ ಸಮಾಜದ ವಿವಿಧ ಚಟುವಟಿಕೆಗಳ ಕೇಂದ್ರಬಿಂದುವಾಗಿದ್ದು ಪರಮಾತ್ಮನನ್ನು ಪಾಮರ ಜನರಿಗೆ ಎಟುಕುವಂತೆ ಮಾಡುವ ಸಾಧನವಾಗಿತ್ತು. ಆಧ್ಯಾತ್ಮ ಅನುಭವವನ್ನು ಪಡೆದುಕೊಳ್ಳಲು ಸಾಧ್ಯವಾಗದ ಜನಸಾಮಾನ್ಯರಿಗೆ ಪರಮಾತ್ಮನಿಗಿರುವ ಗುಣವಿಶೇಷಗಳನ್ನು ಮೂರ್ತರೂಪದ ಮೂಲಕ ಪರಿಚಯಿಸಲಾಯಿತು. ಈ ಮೂರ್ತ ರೂಪಗಳನ್ನು ಪವಿತ್ರವಾದ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿ ಪೂಜಿಸುವ ಮೂಲಕ, ಜನಸಾಮಾನ್ಯರಿಗೂ, ಪರಮಾತ್ಮನಿಗೂ ಒಂದು ಸಂಬಂಧ ಸೃಷ್ಟಿಸಲಾಯಿತು. ದೇವಾಲಯದ ಹಲವಾರು ಕೆಲಸಗಳಲ್ಲಿ ತೊಡಗಿಕೊಂಡ ಜನಸಮುದಾಯಗಳು ಪ್ರತ್ಯೇಕವಾದ ವರ್ಗಗಳಾಗಿಯೇ ರೂಪುಗೊಂಡು ನಿರಂತರ ದೇವಾಲಯಗಳ ಒಡನಾಟವನ್ನು ಹೊಂದಿ ತಮ್ಮ ಬೆಳವಣಿಗೆಯೊಂದಿಗೆ ದೇವಾಲಯದ ಅಭ್ಯುದಯವನ್ನು ಕಂಡರು.

ದೇವಾಲಯಗಳು ತಮ್ಮದೇ ಆದ ವಿಭಿನ್ನ ಲಕ್ಷಣಗಳನ್ನು ಹೊಂದಿದ್ದು, ಇವುಗಳ ರಚನಾ ಕ್ರಮವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಒಂದು ಊರ್ಧ್ವಮುಖ ಕ್ರಮ ಮತ್ತೊಂದು ತಿರ್ಯಙ್ಮುಖಕ್ರಮ. ದೇವಾಲಯದ ಹೊರಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೀತಿಯಲ್ಲಿ ರಚಿಸುವ ಕ್ರಮವೇ 'ಊರ್ಧ್ವಮುಖಕ್ರಮ'. ಇದೇ

ರೀತಿಯಲ್ಲಿ ದೇವಾಲಯದ ಓಲ ರಚನೆಗಳನ್ನು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಇತ್ಯಾದಿಗಳನ್ನು ತಿರ್ಯಙ್ಮುಖಕ್ರಮ ಎಂದು ಕರೆಯಬಹುದು.

ದೇವಾಲಯಗಳು ಊರ್ಧ್ವಮುಖ ಕ್ರಮದಲ್ಲಿ ಅನುಕ್ರಮವಾಗಿ ಆರು ಭಾಗಗಳಿಂದ ಕೂಡಿರುತ್ತವೆ. ಅವುಗಳೆಂದರೆ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ. ಇದರಲ್ಲಿ ಅಧಿಷ್ಠಾನವೇ ಮೊದಲ ಭಾಗವಾಗಿದ್ದು ಕೆಲವು ಸಮಯದಲ್ಲಿ ಉಪಪೀಠ ಇರುತ್ತದೆ. ಅಧಿಷಾನದಲ್ಲಿ ಉಪಾನ, ಜಗತಿ, ಕುಮುದ, ಪದ್ಮ, ಕಂಪ, ಕಪೋತ, ಪಟ್ಟಿಕಾ, ಪ್ರತೀ ಮತ್ತು ದಂತಪಂಕ್ತಿ ಮುಂತಾದ ಪಟ್ಟಿಕೆಗಳಿರುತ್ತವೆ. ಅಧಿಷ್ಠಾನದಲ್ಲಿ ಪಾದಬಂಧ, ಪ್ರತೀಬಂಧ, ಪದ್ಮಬಂಧ ಮತ್ತು ಮಂಚಬಂಧ ಎಂಬ ಪ್ರಬೇಧಗಳೂ ಇವೆ.[3] ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ. ಕೆಲವು ದೇವಾಲಯಗಳಲ್ಲಿ ಭಿತ್ತಿಯನ್ನು ಹಿಂಬಣಿ ಹಾಗೂ ಮುಂಬಣಿಯಾಗಿ ಅಲಂಕರಣೆಯನ್ನು ಮಾಡಿರುತ್ತಾರೆ. ಕೆಲವು ಕಡೆ ಭಿತ್ತಿಯಲ್ಲಿ ಯಾವುದೇ ಅಲಂಕರಣೆಗಳಿರುವುದಿಲ್ಲ. ಕೆಲವು ಭಿತ್ತಿಗಳಲ್ಲಿ ಅರೆಗಂಬಗಳಿಂದ ಚಿತ್ರಿಸಲಾಗಿದ್ದು, ಕಂಬಗಳ ಮಧ್ಯಭಾಗದಲ್ಲಿ ಪದ್ಮದ ರಚನೆ, ಕೆಲವು ಭಾಗಗಳಲ್ಲಿ ಕೋಷ್ಠಗಳು, ತೋರಣ, ಕುಂಭಲತಾ ಮತ್ತು ದೇವ ದೇವತೆಗಳ ಶಿಲ್ಪಗಳು, ಇನ್ನಿತರ ಅಲಂಕರಣ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ.

ಭಿತ್ತಿಯ ಮೇಲಿನ ಹಂತವೇ ಪ್ರಸ್ತರ. ಇದು ಭಿತ್ತಿಯ ಸ್ತಂಭಗಳ ಮೇಲ್ಭಾಗದ ತುದಿಯಿಂದ ಆರಂಭವಾಗಿ ಉತ್ತರ, ವಾಜನ, ವಲಭೀ, ಕಪೋತ, ಆಲಿಂಗ, ಅಂತರೀಕ, ಪ್ರತೀ, ವಾಜನ, ಎಂಬ ಅಂಗಗಳನ್ನು ಹೊಂದಿರುತ್ತದೆ.[4] ಇದರ ಮೇಲ್ಭಾಗದಲ್ಲಿ ಗ್ರೀವ, ಶಿಖರ, ಸ್ತೂಪಿಯ ಭಾಗಗಳಿರುತ್ತವೆ. ಗ್ರೀವದಲ್ಲೂ ಕೋಷ್ಠಗಳಿದ್ದು ಅದರಲ್ಲಿ ದೇವತಾ ಶಿಲ್ಪಗಳಿರುತ್ತವೆ. ಇದನ್ನು ಶಾಲಾ, ಭದ್ರಶಾಲಾ ಎಂದೂ ಕರೆಯುವುದುಂಟು. ಶಿಖರಗಳು ಬೇರೆ ಬೇರೆ ಆಕಾರದಲ್ಲಿ ಇರುವುದರಿಂದ ಇವುಗಳನ್ನು ಆಕಾರಕ್ಕೆ ತಕ್ಕಂತೆ ಬ್ರಹ್ಮಛಂದ, ವಿಷ್ಣುಛಂದ, ರುದ್ರಛಂದ, ಶಾಲಾಕಾರ, ಗಜಪೃಷ್ಠಾಕಾರ ಎಂದು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಇವುಗಳು ಪ್ರಧಾನವಾಗಿ ನಾಸಿಗಳಿಂದ ಅಲಂಕೃತವಾಗಿರುತ್ತವೆ. ಇದರ ಮೇಲ್ಭಾಗದಲ್ಲಿ ಕಳಸದ ಭಾಗವಿದ್ದು ಇದು ದೇವಾಲಯದ ಅತ್ಯಂತ ಕೊನೆಯ ಭಾಗವಾಗಿರುತ್ತದೆ. ಶಿಖರವು ಹೊಂದಿರುವ ಲಕ್ಷಣಗಳು ಮತ್ತು ಅಲಂಕರಣಕ್ಕೆ ಅನುಗುಣವಾಗಿ ವಾಸ್ತುಶೈಲಿಯನ್ನು ನಾಗರ, ದ್ರಾವಿಡ, ವೇಸರ ಶೈಲಿಗಳೆಂದು ಕರೆಯಲಾಗುತ್ತದೆ.[5]

ದೇವಾಲಯದ ತಿರ್ಯಙ್ಮುಖ ಕ್ರಮದಲ್ಲಿ ಮೊದಲಿಗೆ ಕಂಡು ಬರುವುದು ಗರ್ಭಗೃಹ. ಇಲ್ಲಿ ಮೂಲ ದೇವರ ಪ್ರತಿಷ್ಠಾಪನೆಯಾಗಿರುತ್ತದೆ. ಕೆಲವೊಮ್ಮೆ ಇದರ ಸುತ್ತಲೂ ದೇವಾಲಯದ

ಒಳಭಾಗದಲ್ಲೇ 'ಪ್ರದಕ್ಷಿಣಾಪಥ'ವಿರುತ್ತದೆ. ಇಂತಹ ದೇವಾಲಯಗಳನ್ನು ಸಾಂಧಾರ ಶೈಲಿಯ ದೇವಾಲಯಗಳು ಎಂತಲೂ ಕರೆಯುತ್ತಾರೆ. ಕೆಲವು ದೇವಾಲಯಗಳಲ್ಲಿ ಗರ್ಭಗುಡಿಯನ್ನು ಪ್ರದಕ್ಷಿಣೆ ಹಾಕಲು ಪ್ರತ್ಯೇಕ ಪ್ರದಕ್ಷಿಣಾ ಪಥವಿರುವುದಿಲ್ಲ. ಇಂತಹ ದೇವಾಲಯಗಳನ್ನು ನಿರಾಂಧಾರ ಶೈಲಿಯ ದೇವಾಲಯಗಳೆಂದು ಕರೆಯಲಾಗುತ್ತದೆ. ಗರ್ಭಗೃಹದ ನಂತರ ಸುಖನಾಸಿ ಅಥವಾ ಅಂತರಾಳ, ಇದರ ಅನಂತರದಲ್ಲಿ ನವರಂಗವಿರುತ್ತದೆ. ಇದು ಗರ್ಭಗೃಹ ಮತ್ತು ಸುಖನಾಸಿಗಿಂತ ಸ್ವಲ್ಪ ವಿಶಾಲವಾಗಿರುತ್ತದೆ. ನವರಂಗವು ಸ್ವತಂತ್ರ ಕಂಬಗಳನ್ನು ಮತ್ತು ಆಕರ್ಷಕವಾದ ಭುವನೇಶ್ವರಿಗಳನ್ನು ಹೊಂದಿದ್ದು ಇವು ಸಾಮಾನ್ಯವಾಗಿ ಪದ್ಮಮಂಡಲ, ಅಷ್ಟದಿಕ್ಪಾಲಕರು, ಪರಿವಾರ ದೇವತೆಗಳು ಹಾಗೂ ಇನ್ನಿತರ ಶಿಲ್ಪಗಳೊಂದಿಗೆ ಅಲಂಕೃತಗೊಂಡಿರುತ್ತವೆ. ನವರಂಗದ ಮುಂಭಾಗದಲ್ಲಿ ಮುಖಮಂಟಪವಿರುತ್ತದೆ. ಈ ಮುಖಮಂಟಪದ ಸುತ್ತಲೂ ಕಕ್ಷಾಸನವಿರುತ್ತದೆ. ಮುಖಮಂಟಪದ ಮುಂಭಾಗದಲ್ಲಿ ನಂದಿ ಮಂಟಪ, ಕಲ್ಯಾಣ ಮಂಟಪ ಮತ್ತು ರಂಗಮಂಟಪಗಳೂ ಕಂಡು ಬರುತ್ತವೆ.

ಶೈವ ದೇವಾಲಯದ ಮುಂಭಾಗದಲ್ಲಿ ಬಲಿಪೀಠ, ದ್ವೀಪಸ್ತಂಭ, ಧ್ವಜಸ್ತಂಭವಿದ್ದರೆ, ವೈಷ್ಣವ ದೇವಾಲಯದ ಮುಂದೆ ಗರುಡಸ್ತಂಭ ಹಾಗೂ ಜೈನ ಬಸದಿಗಳ ಮುಂಭಾಗದಲ್ಲಿ ಮಾನಸ್ತಂಭಗಳಿರುತ್ತವೆ. ಕೆಲವು ದೇವಾಲಯಗಳಲ್ಲಿ ಸುತ್ತಲೂ ಪರಿವಾರ ದೇವತೆಗಳ ಗುಡಿಗಳಿದ್ದು ಈ ಮೇಲೆ ಹೆಸರಿಸಿದ ಎಲ್ಲಾ ಭಾಗಗಳನ್ನು ಒಳಗೊಂಡಂತೆ ಸುತ್ತಲೂ ಪ್ರಾಕಾರ ಇರುತ್ತದೆ. ಪ್ರಾಕಾರದ ಮಧ್ಯಭಾಗದಲ್ಲಿ ಮುಖ್ಯದ್ವಾರವಿದ್ದು ಇದರ ಮೇಲ್ಭಾಗದಲ್ಲಿ ಹಲವು ತಲಗಳನ್ನು ಹೊಂದಿರುವ ರಾಯಗೋಪುರವಿರುತ್ತದೆ.

ಒಂದು ಪರಿಪೂರ್ಣ ದೇವಾಲಯವು ಮೇಲೆ ತಿಳಿಸಿದ ಎಲ್ಲಾ ಭಾಗಗಳನ್ನು ಹೊಂದಿರಬೇಕಾಗುತ್ತದೆ. ಆದರೆ ಎಲ್ಲಾ ದೇವಾಲಯಗಳಲ್ಲೂ ಈ ಎಲ್ಲಾ ಅಂಗಗಳು ಇರಬಹುದು ಅಥವಾ ಇಲ್ಲದಿರಬಹುದು. ಏಕೆಂದರೆ ನಿರ್ಮಾಣಕಾರನ ಶಕ್ತಿ ಮತ್ತು ಅವಶ್ಯಕತೆಗನುಗುಣವಾಗಿ ಈ ದೇವಾಲಯಗಳು ನಿರ್ಮಾಣಗೊಂಡಿರುತ್ತವೆ. ದೇವಾಲಯಗಳ ನಿರ್ಮಾಣ ಕ್ರಮವನ್ನು ಶಾಸ್ತ್ರಗ್ರಂಥಗಳು ಕಟ್ಟುನಿಟ್ಟಾಗಿ ತಿಳಿಸಿದ್ದರೂ ಕೂಡ ಎಲ್ಲಾ ದೇವಾಲಯಗಳೂ ನಿಯಮಗಳನ್ನು ಪಾಲಿಸಿ ಕರಾರುವಕ್ಕಾಗಿ ರಚನೆಗೊಂಡಿರುವುದಿಲ್ಲ. ಏಕೆಂದರೆ ಶಾಸ್ತ್ರಗ್ರಂಥಗಳು ಶಿಲ್ಪಿಗೆ ತನ್ನ ಅಭಿರುಚಿ ಮತ್ತು ದೇವಾಲಯದ ಸೌಂದರ್ಯಕ್ಕೆ ಅನುಗುಣವಾಗಿ ದೇವಾಲಯವನ್ನು ರಚಿಸುವ ಸ್ವಾತಂತ್ರ್ಯ ನೀಡಿರುವುದರಿಂದ ಕೆಲವೊಮ್ಮೆ ದೇವಾಲಯಗಳು ವಿಭಿನ್ನವಾಗಿ ಮತ್ತು ಆಕರ್ಷವಾಗಿ ನಿರ್ಮಾಣವಾಗಿರುತ್ತವೆ. ಹಾಸನ ತಾಲೂಕು ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ

ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಹೊಯ್ಸಳ ಮೇರು ಪ್ರಭುತ್ವಕ್ಕೆ ಒಳಪಟ್ಟಿದ್ದ ಈ ತಾಲೂಕಿನದಲ್ಲಿ ಇವರ ಕಾಲದ ರಾಜಾಶ್ರಯದಲ್ಲಿ ಮಂತ್ರಿಗಳು, ದಂಡನಾಯಕರುಗಳಿಂದ, ಸಂಧಿ ವಿಗ್ರಹಿಗಳಿಂದ, ಸ್ಥಾನಪತಿಗಳಿಂದ ಇನ್ನೂ ಮುಂತಾದವರಿಂದ ಸುಂದರವಾದ ದೇವಾಲಯಗಳು ಮತ್ತು ಬಸದಿಗಳು ನಿರ್ಮಾಣವಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಈ ದೇವಾಲಯಗಳನ್ನು ಶೈವ, ವೈಷ್ಣವ ಮತ್ತು ಜೈನ ಬಸದಿಗಳಾಗಿ ವಿಂಗಡಿಸಿಕೊಂಡು ಇವುಗಳ ಕಲೆ ಮತ್ತು ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳ ಸ್ಥೂಲ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಲಾಗಿದೆ.

## ಶೈವ ದೇವಾಲಯಗಳು

ಧಾರ್ಮಿಕ ಶ್ರದ್ಧೆಯು ಜೀವನದ ಒಂದು ಅಂಶ ಎನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ಧರ್ಮಗಳು ತಮ್ಮ ವಿಭಿನ್ನ ಆಚರಣೆಗಳು, ಸಂಪ್ರದಾಯಗಳನ್ನು ರೂಢಿಸಿಕೊಂಡು ಸರ್ವಧರ್ಮ ಸಹಿಷ್ಣುತೆಯ ತತ್ವದ ಆಧಾರದ ಮೇಲೆ ಅಸ್ತಿತ್ವದಲ್ಲಿರುವುದನ್ನು ಗಮನಿಸಬಹುದು. ಹೀಗೆ ಕಂಡು ಬರುವ ಪ್ರಾಚೀನ ಧರ್ಮಗಳಲ್ಲಿ ಶೈವ ಧರ್ಮವೂ ಸಹ ಒಂದು. ಶಿವನೇ ಈ ಧರ್ಮದ ಪ್ರಮುಖ ಆರಾಧ್ಯ ದೈವ. ಶಿವನ ಆರಾಧನೆ ಯಾವಾಗಿನಿಂದ ಪ್ರಾರಂಭವಾಯಿತು ಎಂದು ನಿಖರವಾಗಿ ಹೇಳುವುದು ಕಷ್ಟಕರವಾದರೂ ಸಹ ವೇದ ಕಾಲಕ್ಕಿಂತ ಪೂರ್ವದಲ್ಲೇ ಶಿವನನ್ನು ಪೂಜಿಸುತ್ತಿದ್ದರೆಂದು ಕೆಲವು ವಿದ್ವಾಂಸರು ಅಭಿಪ್ರಾಯಿಸುತ್ತಾರೆ.[6] ಈ ಅಂಶವು ಶಿವನ ಮೂಲವನ್ನು ಹುಡುಕುತ್ತಾ ಇತಿಹಾಸಕಾರರನ್ನು ಹರಪ್ಪ-ಮೆಹೆಂಜೋದಾರೋ ಸಂಸ್ಕೃತಿಗೆ ಕೊಂಡೊಯ್ಯುತ್ತದೆ. ಹರಪ್ಪ ಸಂಸ್ಕೃತಿಯ ಒಂದು ಮುದ್ರೆಯಲ್ಲಿ ಪಾದಕ್ಕೆ ಪಾದ ಸೇರಿಸಿ ಸಿದ್ಧಾಸನದಲ್ಲಿ, ಎಮ್ಮೆಯ ಕೊಂಬಿನ ಶಿರಸ್ತ್ರಾಣವನ್ನು ಧರಿಸಿ ಯೋಗಿಯಂತೆ ಕುಳಿತ ಪುರುಷಾಕೃತಿಯೊಂದಿದೆ. ಈ ವ್ಯಕ್ತಿಯ ಸುತ್ತಲೂ ಆನೆ, ಹುಲಿ, ಎಮ್ಮೆ ಮತ್ತು ಏಕಶೃಂಗಿಗಳು ಈತನತ್ತ ನೋಡುತ್ತಿರುವಂತೆ ರಚಿಸಲಾಗಿದೆ.[7] ಈ ಮುದ್ರೆಯಲ್ಲಿರುವ ವ್ಯಕ್ತಿಯನ್ನೇ 'ಪಶುಪತಿ'/ ಶಿವನೆಂದು ಹಲವು ವಿದ್ವಾಂಸರು ನಿರ್ದೇಶಿಸುತ್ತಾರೆ. ಆದ್ದರಿಂದ ಶೈವ ಸಂಸ್ಕೃತಿಯ ಮೂಲವನ್ನು ಹರಪ್ಪ ಸಂಸ್ಕೃತಿಯಿಂದಲೇ ಗುರುತಿಸಬಹುದಾಗಿದೆ. ಇದಕ್ಕೂ ಮುಂಚೆ ಭಾರತೀಯ ಸಂಸ್ಕೃತಿಯ ಪ್ರಾರಂಭವನ್ನು ವೇದಕಾಲದ ಸಂಸ್ಕೃತಿಯೊಂದಿಗೆ ಗುರುತಿಸಲಾಗಿತ್ತು. ಆದರೆ ವೇದ ಕಾಲಕ್ಕಿಂತಲೂ ಮುಂಚಿತವಾಗಿ ಒಂದು ಉತ್ಕೃಷ್ಟ ನಾಗರೀಕತೆಯು ಭಾರತದಲ್ಲಿತ್ತು ಎಂಬ ಅಂಶವನ್ನು ಹರಪ್ಪ ಸಂಸ್ಕೃತಿ ಮತ್ತು ಮುದ್ರೆಗಳು ಸಾಬೀತುಪಡಿಸಿವೆ ಎಂದು ಹೇಳಿದರೆ ತಪ್ಪಾಗಲಾರದು. ಶೈವ ಧರ್ಮದ ತತ್ವ ಸಿದ್ಧಾಂತಗಳು ವೇದ ಆಗಮಗಳಲ್ಲಿಯೂ ಸಹ ಉಲ್ಲೇಖವಿದೆ. ಶೈವಾಗಮ, ಶೈವ ಉಪನಿಷತ್, ಲಿಂಗ ಪುರಾಣ, ಶಿವ ಪುರಾಣ, ಸ್ಕಂದ

ಪುರಾಣ, ಮತ್ಸ್ಯ ಪುರಾಣ, ಕೂರ್ಮ ಪುರಾಣದಲ್ಲೂ ಉಲ್ಲೇಖವಿದೆ.[8] ಶಿವನಿಗೆ ಸಂಬಂಧಿಸಿದ ಸಾಹಿತ್ಯಿಕ ವಿವರಣೆಗಳು, ಶಿವ ದೇವಾಲಯಗಳ ನಿರ್ಮಾಣ, ಶಿಲ್ಪರಚನೆಯ ನಿರ್ಧಿಷ್ಟ ಸೂತ್ರಗಳು ಮತ್ತು ದೇವತಾ ಪೂಜಾ ವಿಧಾನಗಳು ಇನ್ನೂ ಮುಂತಾದ ಶಾಸ್ತ್ರೀಯ ಅಂಶಗಳನ್ನು ಒಳಗೊಂಡು, ಶಿವನನ್ನು ರುದ್ರನಿಗೆ ಅನ್ವಯಿಸಲಾಗಿದೆ ಎಂಬುದು ವೇದಗಳಿಂದ ತಿಳಿದು ಬರುತ್ತದೆ. ರುದ್ರ ಎಂದರೆ ಗರ್ಜಿಸುವವನು ಎಂದರ್ಥ. ಇವನ ವಾಸಸ್ಥಾನವು ಪರ್ವತಗಳಲ್ಲಿದ್ದು, ಜಟಾಧಾರಿಯಾದ ಈತನು ಚರ್ಮವನ್ನು ಧರಿಸಿರುತ್ತಾನೆ. ಸ್ವಭಾವತಃ ಭಯಂಕರನಾದ ಇವನನ್ನು ಶೈವಧರ್ಮಿಯರು ಶಿವ ಎಂದು ಪೂಜಿಸುತ್ತಾರೆ.[9]

ಶಿವನ ಮೂರ್ತಿ ಪರಿಕಲ್ಪನೆಯನ್ನು ನೋಡಿದರೆ ಸಾಮಾನ್ಯವಾಗಿ ಶಿವನನ್ನು ಲಿಂಗದ ಆಕೃತಿಯಲ್ಲಿ ಪೂಜಿಸುತ್ತಾರೆ. ಈ ಲಿಂಗಗಳು ಹೊಂದಿರುವ ಆಕಾರ ಮತ್ತು ಕಾಲಾನುಕ್ರಮಣಿಕೆಯನ್ನು ಆಧರಿಸಿ ಎರಡು ಪ್ರಭೇದಗಳಾಗಿ ಗುರುತಿಸಲಾಗಿದೆ. ಅವುಗಳೆಂದರೆ ಆಗಮ ಪೂರ್ವ ಮತ್ತು ಆಗಮೋಕ್ತ ಲಿಂಗಗಳು ಆಗಮ ಪೂರ್ವ ಲಿಂಗಗಳು ಯಥಾವತ್ ಶಿಶ್ನರೂಪವನ್ನು ಹೊಂದಿರುವ ಅಥವಾ ಶಿಶ್ನ ರೂಪಕ್ಕೆ ಬಹು ಸಮೀಪವಾದ ರಚನೆಗಳಿಂದ ಕೂಡಿರುವ ಶಿಲ್ಪಾಕೃತಿಗಳಾಗಿವೆ. ಗುಡಿಮಲ್ಲಂನ ಕ್ರಿ.ಪೂ.2ನೆಯ ಶತಮಾನದ ಲಿಂಗವನ್ನು ಆಗಮ ಪೂರ್ವ ಲಿಂಗಗಳಿಗೆ ಉದಾಹರಣೆ ಕೊಡಬಹುದು.[10] ಅಗಮೋಕ್ತ ಲಿಂಗಗಳಲ್ಲಿ ತ್ರಿಮೂರ್ತಿಗಳ ಸಂಯುಕ್ತ ರೂಪವು ಕ್ರಮವಾಗಿ ಕೆಳಗಿನಿಂದ ಆರಂಭವಾಗಿ ಬ್ರಹ್ಮ, ವಿಷ್ಣು ಮತ್ತು ರುದ್ರಭಾಗಗಳೆಂದು ಗುರುತಿಸಲ್ಪಟ್ಟಿರುತ್ತದೆ. ಲಿಂಗದಲ್ಲಿಯೇ ಶಿವನ ಮುಖವನ್ನು ಕಡೆದ 'ಮುಖಲಿಂಗ', ಪರಿಸರದಲ್ಲಿ ಸ್ವಾಭಾವಿಕ ಶಿಲೆಯ 'ಸ್ವಯಂಭುವ ಲಿಂಗಗಳು' ಶಿವನ ಮನುಷ್ಯಾಕಾರವನ್ನು ಪೂರ್ಣವಾಗಿ ಕಡೆದ ಲಿಂಗೋದ್ಭವ ಮೂರ್ತಿಗಳ ಪ್ರಕಾರಗಳೂ ಸಹ ಕಂಡು ಬರುತ್ತವೆ. ಅಲ್ಲದೇ ಪ್ರಾರಂಭದಲ್ಲಿ ಲಿಂಗವು ಶಿವನ ಸಂಕೇತವಾಗಿ ಬೆಳೆದು ಬಂದು ನಂತರದಲ್ಲಿ ಶಿವನ ವಿವಿಧ ನಿರೂಪಣಾ ಶಿಲ್ಪಗಳು ಬಳಕೆಗೆ ಬಂದವು. ಶಿವನ ಮಾನವ ರೂಪ ಶಿಲ್ಪಗಳಲ್ಲಿ ಪ್ರಾಚೀನತಮ ಶಿಲ್ಪವಾಗಿ ನಟರಾಜ ಶಿಲ್ಪವನ್ನು ಗುರುತಿಸಬಹುದಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಗುರುತಿಸಿರುವ 64 ಕಲೆಗಳಿಗೆ ಆರಾಧ್ಯದೈವ ಶಿವ-ನಟರಾಜನೇ ಆಗಿದ್ದಾನೆ. ಇವುಗಳಲ್ಲಿ ಜನಪ್ರಿಯ ಭಾರತೀಯ ಕಲೆಗಳಾದ ನೃತ್ಯ ಮತ್ತು ಸಂಗೀತಗಳಿಗೆ ಶಿವ-ನಟರಾಜನ ಕಲ್ಪನೆ ಒಂದು ಪ್ರೇರಣೆಯಾಗಿದೆ.[11] ದಕ್ಷಿಣ ಭಾರತವು ಇತಿಹಾಸ ಪೂರ್ವ ಕಾಲದಿಂದಲೂ ಶೈವ ಧರ್ಮಕ್ಕೆ ಮುಖ್ಯ ಭೂಮಿಕೆಯಾಗಿತ್ತೆಂದು ತಿಳಿದು ಬರುತ್ತದೆ. ಈ ದಕ್ಷಿಣ ಭಾರತದಲ್ಲಿ ನಟರಾಜಮೂರ್ತಿ ಶಿಲ್ಪವನ್ನು ರಚಿಸಿ ಪ್ರಚಾರ ಪಡಿಸಿದ ಕೀರ್ತಿ ಬಾದಾಮಿ ಚಾಲುಕ್ಯರಿಗೆ ಸಲ್ಲುತ್ತದೆ. ಇದಲ್ಲದೇ ಇವರು ಹರಿಹರ, ಅರ್ಧನಾರೀಶ್ವರ, ಮಹಿಷಮರ್ಧಿನಿ ಶಿಲ್ಪಗಳನ್ನು

ನಿರ್ಮಿಸಿದರು. ಇದರಿಂದ ಸ್ಫೂರ್ತಿ ಪಡೆದು ಗಂಗರು, ಪಲ್ಲವರು, ರಾಷ್ಟ್ರಕೂಟರು, ಚೋಳರು, ಪಾಂಡ್ಯರು, ಕಲ್ಯಾಣಿ ಚಾಳುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಶಿವನ ಮೂರ್ತಿ ಶಿಲ್ಪಗಳನ್ನು ನಿರ್ಮಿಸಿದರು. ಹೀಗೆ ಶೈವ ಪರಂಪರೆಯಲ್ಲಿ ಲಿಂಗದ ಪೂಜೆಯೊಂದಿಗೆ ಪ್ರಾರಂಭವಾದ ಶಿವಾರಾಧನೆಯು ಮೂರ್ತರೂಪವನ್ನು ಪಡೆಯಿತು. ನಂತರ ಶಿವನ ಜೊತೆ ಅವನ ಶಕ್ತಿದೇವತೆಯಾದ ಪಾರ್ವತಿ, ಸ್ಕಂದ, ವೃಷಭ, ಗಣಪತಿ ಇವರ ಶಿಲ್ಪಗಳು ರೂಪುಗೊಂಡು, ಇವರಿಗೂ ಪೂಜಾ ವಿಧಿ-ವಿಧಾನಗಳು ಸಲ್ಲಲ್ಪಟ್ಟವು. ಅಲ್ಲದೇ ಇವರಿಗೆ ಆರಾಧಿಸುವ ಕ್ರಮಗಳು ಬೇರೆ ಬೇರೆ ರೂಪಗಳನ್ನು ತಳೆದು ಲಕುಲೀಶ, ಪಾಶುಪತ, ಕಾಳಾಮುಖ ಮತ್ತು ಶಾಕ್ತ ಪಂಥಗಳು ಹುಟ್ಟಿಕೊಂಡವು. ಹೀಗೆ ಶೈವ ಧರ್ಮದ ವಿಕಸನದಿಂದಾಗಿ ಇಂದು ಶೈವ ಮತ್ತು ಮಿಶ್ರ ವೈಷ್ಣವ ದೇವಾಲಯಗಳಲ್ಲಿ ಶಿವನ 25 ಲೀಲಾಮೂರ್ತಿಗಳು ಹಾಗೂ ಪರಿವಾರ ದೇವತೆಗಳ ಶಿಲ್ಪಗಳನ್ನು ನಾವು ಗುರುತಿಸಬಹುದಾಗಿದೆ.

ಹೀಗೆ ಬೆಳೆದು ಬಂದ ಶೈವ ಧರ್ಮದ ದೇವಾಲಯಗಳು ಹಾಸನ ತಾಲೂಕಿನಲ್ಲಿ ಹೊಯ್ಸಳರ ಕಾಲದಲ್ಲೂ ನಿರ್ಮಾಣವಾಗಿದ್ದು ಈ ದೇವಾಲಯಗಳ ಬಗ್ಗೆ ತಾಲೂಕಿನಾದ್ಯಂತ ಕ್ಷೇತ್ರಕಾರ್ಯ ನಡೆಸಿ, ತೆಗೆದುಕೊಂಡ ಛಾಯಾಚಿತ್ರಗಳನ್ನು ಬಳಸಿಕೊಂಡು, ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಅಭ್ಯಸಿಸಿ, ಸಂಗ್ರಹಿಸಿದ ಮಾಹಿತಿಗಳನ್ನೆಲ್ಲ ಕ್ರೋಢೀಕರಿಸಿ ಈ ದೇವಾಲಯಗಳ ಕಲೆ ಮತ್ತು ವಾಸುಶಿಲ್ಪದ ಅಂಶಗಳನ್ನು ಈ ಕೆಳಗೆ ವಿವರಿಸಿದ್ದೇನೆ.

**ಗುಡ್ಡದ ತೆರಣ್ಯ**

ಈ ಗ್ರಾಮವು ಹಾಸನ ನಗರದಿಂದ ದಕ್ಷಿಣ ದಿಕ್ಕಿಗೆ 17 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಇದನ್ನು ಇಂದು ಗುಡ್ಡಸ್ಥಳ ಎಂಬ ಹೆಸರಿನಿಂದ ಕರೆಯಲಾಗುತ್ತಿದ್ದು, ಹೊಯ್ಸಳರ ಆಳ್ವಿಕೆಯ ಎರಡು ಶಾಸನಗಳು ಇಲ್ಲಿ ದೊರೆತಿವೆ. ಈ ಗ್ರಾಮದಲ್ಲಿ ಸೋಮೇಶ್ವರ, ಸಿದ್ಧಲಿಂಗೇಶ್ವರ, ಬಸವೇಶ್ವರ ದೇವಾಲಯಗಳು ಕಂಡು ಬಂದಿದ್ದು, ಸೋಮೇಶ್ವರ ದೇವಾಲಯವು ಪ್ರಾಚೀನ ದೇವಾಲಯವಾಗಿದೆ.

**ಸೋಮೇಶ್ವರ ದೇವಾಲಯ-ಗುಡ್ಡದ ತೆರಣ್ಯ**

ಇದು ಹೊಯ್ಸಳರ ಕಾಲದ ದೇವಾಲಯವಾಗಿದ್ದು ಗ್ರಾಮದ ಪೂರ್ವ ದಿಕ್ಕಿನ ತೋಟದಲ್ಲಿ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. ಹೊಯ್ಸಳ ಒಂದನೇ ಬಲ್ಲಾಳನು ಗಂಗವಾಡಿ-96000 ಪ್ರದೇಶವನ್ನು ಆಳ್ವಿಕೆ ಮಾಡುತ್ತಿರುವ ಸಂದರ್ಭದಲ್ಲಿ ಕ್ರಿ.ಶ.1104ರಲ್ಲಿ

ಮಾವನೂರ ಚೋಳಗಾವುಂಡನ ಮಗ ಅರಿಗಾವುಂಡನು, ರಾಜಗಾವುಂಡನು ಈ ಸೋಮೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ಉಲ್ಲೇಖ ಈ ದೇವಾಲಯದ ಬಳಿ ಬಿದ್ದಿರುವ ಶಾಸನದಿಂದ[12] ತಿಳಿದು ಬರುತ್ತದೆ. ಈ ದೇವಾಲಯವು ಒರಟು ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದ್ದು ಇಂದು ಶಿಥಿಲಾವಸ್ಥೆಯಲ್ಲಿ ಸುತ್ತಲೂ ಗಿಡಗಂಟಿಗಳಿಂದ ಆವೃತವಾಗಿದೆ. ಇದು ಗರ್ಭಗುಡಿ, ತೆರೆದ ಸುಖನಾಸಿ ಮತ್ತು ನವರಂಗವನ್ನು ಹೊಂದಿದೆ. (ಚಿ.ಸಂ. 1)

ಗರ್ಭಗುಡಿಯು 6x6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಪೀಠದ ಮೇಲೆ ½ ಅಡಿ ಎತ್ತರದ ಲಿಂಗವಿದೆ. ಆದರೆ ಇದರ ಪೀಠವು ಭೂಮಿಯಲ್ಲಿ ಹೂತು ಹೋಗಿದೆ. ಗರ್ಭಗುಡಿಯ ನಂತರ ತೆರೆದ ಸುಖನಾಸಿಯಿದ್ದು ಇದು ಕೂಡ 6x6 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಎಡಭಾಗದ ಗೋಡೆಯು ಕುಸಿದಿದೆ. ಸುಖನಾಸಿಯ ಮುಂದೆ ನವರಂಗವು 18x18 ಅಡಿ ವಿಸ್ತೀರ್ಣವಿದ್ದು ನಾಲ್ಕು ಪೂರ್ವಾಶ್ರ ಸ್ತಂಭಗಳನ್ನು ಹೊಂದಿದೆ. ಈ ಸ್ತಂಭಗಳ ಮೇಲೆ ಆಧಾರ ಪೋತಿಕಾವಿದೆ. ನವರಂಗದ ಮಧ್ಯಭಾಗದಲ್ಲಿ ಭಗ್ನವಾಗಿರುವ ಗಣೇಶ ಶಿಲ್ಪವಿದ್ದು, ನವರಂಗದ ಪೂರ್ವ ದಿಕ್ಕಿನ ಗೋಡೆಗಳು ಕುಸಿದಿದೆ. ಈ ದೇವಾಲಯದ ಛಾವಣಿಯು ಗ್ರಾನೈಟ್ ಕಲ್ಲುಚಪ್ಪಡಿಗಳಿಂದ ಹಾಸಲ್ಪಟ್ಟಿದ್ದು ಇದರ ಮೇಲೆ ಹಾಗೂ ದೇವಾಲಯದ ಸುತ್ತಲೂ ಸಂಪೂರ್ಣವಾಗಿ ಗಿಡಗಂಟೆಗಳು ಬೆಳೆದಿರುವುದರಿಂದ ಭಿತ್ತಿಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಒಟ್ಟಿನಲ್ಲಿ ಈ ದೇವಾಲಯವು ಸಂಪೂರ್ಣವಾಗಿ ಶಿಥಿಲಾವಸ್ಥೆಯಲ್ಲಿದೆ ಎಂದು ಹೇಳಬಹುದಾಗಿದೆ.

**ಶಾಂತಿಗ್ರಾಮ**

ಈ ಗ್ರಾಮವು ಹಾಸನ ನಗರದಿಂದ ಪೂರ್ವ ದಿಕ್ಕಿಗೆ 15 ಕಿ.ಮೀ. ಅಂತರದಲ್ಲಿ ಬೆಂಗಳೂರು-ಮಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ 13 ಶಾಸನಗಳು ಮತ್ತು ಧರ್ಮೇಶ್ವರ, ಯೋಗಾನರಸಿಂಹ, ಚನ್ನಕೇಶವ, ವೀರಭದ್ರ, ಆಂಜನೇಯ ದೇವಾಲಯಗಳು ಒಂದು ಜೈನ ಬಸದಿ ಕಂಡು ಬರುತ್ತದೆ. ಇವುಗಳಲ್ಲಿ ಆಂಜನೇಯ ದೇವಾಲಯವನ್ನು ಹೊರತುಪಡಿಸಿ ಉಳಿದ ಎಲ್ಲಾ ದೇವಾಲಯಗಳು ಹೊಯ್ಸಳರ ಆಳ್ವಿಕೆಯಲ್ಲಿ ನಿರ್ಮಾಣವಾಗಿವೆ. ಹೊಯ್ಸಳರ ಆಳ್ವಿಕೆಗೂ ಮುಂಚೆ ಈ ಗ್ರಾಮವನ್ನು 'ಗ್ರಾಮ' ಎಂಬ ಹೆಸರಿನಿಂದಲೇ ಕರೆಯಲಾಗುತ್ತಿತ್ತು. ಆದರೆ ನಂತರದ ಕಾಲಘಟ್ಟದಲ್ಲಿ ವಿಷ್ಣುವರ್ಧನನ ಅರಸಿ ಶಾಂತಲಾದೇವಿಯ ಪ್ರಭಾವದಿಂದಾಗಿ ಈ ಗ್ರಾಮವು 'ಶಾಂತಿಗ್ರಾಮ' ಎಂಬ ಹೆಸರಿನಿಂದ ಕರೆಯಲ್ಪಟ್ಟಿದ್ದು, ಪ್ರಮುಖ ಅಗ್ರಹಾರವೂ ಆಗಿತ್ತೆಂಬುದು ಶಾಸನಗಳಿಂದ ತಿಳಿದು ಬರುತ್ತದೆ.

**ಧರ್ಮೇಶ್ವರ ದೇವಾಲಯ-ಶಾಂತ್ರಿಗ್ರಾಮ**

ಈ ದೇವಾಲಯವು ಗ್ರಾಮದ ಉತ್ತರ ದಿಕ್ಕಿನಲ್ಲಿ ಕೆರೆ ಏರಿಯ ಕೆಳಗೆ ರೈತ ಸಂಪರ್ಕ ಕೇಂದ್ರದ ಬಳಿ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. (ಚಿ.ಸಂ. 2) ಈ ದೇವಾಲಯವನ್ನು ಹೊಯ್ಸಳ ವಿಷ್ಣುವರ್ಧನನ ಅರಸಿ ಶಾಂತಲಾ ದೇವಿಯ ತಂದೆ ಮಾರಸಿಂಗಯ್ಯನು ನಿರ್ಮಿಸಿ ದಾನ ನೀಡಿದ ಉಲ್ಲೇಖ ಇದೇ ಗ್ರಾಮದ ಕ್ರಿ.ಶ.1122ರ ಶಾಸನದಿಂದ ತಿಳಿದು ಬರುತ್ತದೆ.[13] ಗರ್ಭಗುಡಿ, ಸುಖನಾಸಿ, ನವರಂಗ ಮತ್ತು ಮುಖ ಚತುಷ್ಕಿ ಭಾಗಗಳನ್ನು ಒಳಗೊಂಡಿರುವ ಈ ದೇವಾಲಯಕ್ಕೆ ಕೆಲವು ಭಾಗಗಳಲ್ಲಿ ಹೊಸ ಸೇರ್ಪಡೆಯನ್ನು ಮಾಡಿರುವುದರಿಂದ ಇದು ಜೀರ್ಣೋದ್ಧಾರಗೊಂಡಿರುವುದು ಸ್ಪಷ್ಟವಾಗುತ್ತದೆ. ಇದರ ಹಳೆಯ ಅವಶೇಷ ಭಾಗಗಳು ದೇವಾಲಯದ ಪಕ್ಕದಲ್ಲೇ ಇರುವ ಅರಳೀಮರದ ಬಳಿ ಬಿದ್ದಿವೆ. ಈ ದೇವಾಲಯದ ಒಳಭಾಗದ ನೆಲಕ್ಕೆ ಸಂಪೂರ್ಣವಾಗಿ ಇತ್ತೀಚಿನ ಕಾಲದ ಗ್ರಾನೈಟ್ ಕಲ್ಲುಗಳನ್ನು ಅಳವಡಿಸಲಾಗಿದೆ.

**ಗರ್ಭಗೃಹ**: ಇದು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಪೀಠದ ಮೇಲೆ 1½ ಅಡಿ ಎತ್ತರದ ಲಿಂಗವಿದ್ದು ಗರ್ಭಗುಡಿಯ ವಿತಾನವು ಸರಳವಾದ ಶತಾತಪತ್ರ ಪದ್ಮಶಿಲೆಯನ್ನು ಹೊಂದಿದೆ.

ಬಾಗಿಲುವಾಡವು ಆಕರ್ಷಕವಾಗಿದ್ದು ಇದರಲ್ಲಿ ವಜ್ರಶಾಖೆ, ವಲ್ಲಿ ಶಾಖೆ, ಸ್ತಂಭ ಶಾಖೆ, ವಲ್ಲೀ ಶಾಖೆ ಮತ್ತು ಕಬ್ಬಿನ ಜಲ್ಲೆಯ ರೀತಿ ರಚನೆಯಿರುವ ಪಂಚಶಾಖೆಗಳನ್ನು ಒಳಗೊಂಡಿದೆ. ಇದರ ಕೆಳಗೆ ಬಲಪಾರ್ಶ್ವದಲ್ಲಿ ರತಿ-ಮನ್ಮಥರ ಶಿಲ್ಪಗಳೊಂದಿಗೆ ಮೂರು ಸ್ತ್ರೀಶಿಲ್ಪಗಳು ಮತ್ತು ಎಡಪಾರ್ಶ್ವದಲ್ಲಿ ರತಿ-ಮನ್ಮಥ ಶಿಲ್ಪಗಳ ಜೊತೆಗೆ ಮೂರು ಪುರುಷ ಶಿಲ್ಪಗಳನ್ನು ಕೆತ್ತಲಾಗಿದೆ.[14] ಇದರ ಲಲಾಟಬಿಂಬವು ನಷ್ಟವಾಗಿದೆ. (ಚಿ.ಸಂ. 3)

**ಸುಖನಾಸಿ**: ಗರ್ಭಗೃಹದ ನಂತರದ ಭಾಗವಾದ ಸುಖನಾಸಿಯು 6x6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಸರಳವಾಗಿದೆ. ಇದರ ವಿತಾನವು ನಾಭಿಚ್ಛಂಧ ಮಾದರಿಯದ್ದಾಗಿದೆ. ಬಾಗಿಲುವಾಡವು ಒರಟು ಗ್ರಾನೈಟ್ ಕಲ್ಲಿನಿಂದ ಮಾಡಲ್ಪಟ್ಟಿದ್ದು ಬಹುಶಃ ಜೀರ್ಣೋದ್ಧಾರದ ಸಮಯದಲ್ಲಿ ಇದನ್ನು ಬದಲಾಯಿಸಲಾಗಿದೆ. ಇದರ ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ.

**ನವರಂಗ**: 18X20 ಅಡಿ ಉದ್ದ ಮತ್ತು ಅಗಲವನ್ನು ನವರಂಗವು ಹೊಂದಿದ್ದು ನಾಲ್ಕು ಹೊಯ್ಸಳ ಶೈಲಿಯ ಶ್ರೀಕಾರ ಸ್ತಂಭಗಳಿವೆ. ಈ ಸ್ತಂಭಗಳು ಪೀಠ, ನಾಲ್ಕು ಕೋನದ ದಿಂಡು, ವೃತ್ತಾಕಾರದ ಬಳೆಗಳು ಮತ್ತು ಘಂಟಾಕಾರದ ದಿಂಡು, ಘಟ, ಮಂಡಿ ಫಲಕ ಮತ್ತು ಮುಷ್ಟಿಬಂಧ,

ಪೋತಿಕಾವನ್ನು ಹೊಂದಿವೆ. (ಚಿ.ಸಂ. 4) ನವರಂಗದ ಪಶ್ಚಿಮ ದಿಕ್ಕಿನ ಎಡಗೋಡೆಯ ಕೋಷ್ಠದಲ್ಲಿ ಸುಮಾರು ಎರಡೂವರೆ ಅಡಿ ಎತ್ತರದ ಚಾಮುಂಡಿ ವಿಗ್ರಹ ಮತ್ತು ಬಲಭಾಗದ ಗೋಡೆಯ ಕೋಷ್ಠದಲ್ಲಿ ಗಣೇಶ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಕೋಷ್ಠಗುಡಿಗೂ ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ಮತ್ತು ಇದರ ಮೇಲ್ಭಾಗದಲ್ಲಿ ಚಿಕ್ಕದಾದ ದ್ರಾವಿಡ ಶೈಲಿಯ ಶಿಖರದ ಮಾದರಿಯನ್ನು ನಿರ್ಮಿಸಲಾಗಿದೆ. ನವರಂಗದ ಮಧ್ಯದ ಅಂಕಣದ ಛಾವಣಿಯು ಒಂದೂವರೆ ಅಡಿ ಆಳವನ್ನು ಹೊಂದಿರುವ ಸಹಸ್ರಾಸ್ತ್ರ ಪದ್ಮದಳಗಳ ಭುವನೇಶ್ವರಿಯನ್ನು ಹೊಂದಿದ್ದು, ಉಳಿದ ಅಂಕಣಗಳ ಛಾವಣಿಯನ್ನು ಇತ್ತೀಚಿನ ನಯವಾದ ಗ್ರಾನೈಟ್ ಕಲ್ಲಿನ ಚಪ್ಪಡಿಗಳಿಂದ ಮುಚ್ಚಲಾಗಿದೆ. ನವರಂಗದಲ್ಲಿ ಸುಖನಾಸಿ ದ್ವಾರದ ಬಳಿ ಲಿಂಗಕ್ಕೆ ಅಭಿಮುಖವಾಗಿ ಇತ್ತೀಚಿನ ಕಾಲದ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗವು ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ ದ್ವಾರಗಳನ್ನು ಹೊಂದಿದ್ದು, ಪೂರ್ವ ದಿಕ್ಕಿನ ದ್ವಾರದ ಮುಂಭಾಗದಲ್ಲಿ ನಾಲ್ಕು ಗ್ರಾನೈಟ್ ಕಲ್ಲಿನ ಸ್ತಂಭಗಳುಳ್ಳ ಮುಖಚತುಷ್ಕಿ ಕಂಡು ಬರುತ್ತದೆ.

**ಅಧಿಷ್ಠಾನ**: ಇದು ನಾಲ್ಕು ಅಡಿ ಎತ್ತರವನ್ನು ಮತ್ತು ಆರು ದಿಂಡುಗಳನ್ನು ಹೊಂದಿದ್ದು, ಇದರಲ್ಲಿ ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ, ಪದ್ಮ, ಮಕರ ಮಾಲಾ ಪಟ್ಟಿಕೆ ನಂತರ ವೇದಿ ಕಂಡು ಬರುತ್ತದೆ. ಗರ್ಭಗುಡಿಯ ಉತ್ತರ ದಿಕ್ಕಿನ ಅಧಿಷ್ಠಾನ ಭಾಗದಲ್ಲಿ ಸಿಂಹಮುಖ ಪ್ರನಾಳವನ್ನು ನಿರ್ಮಿಸಲಾಗಿದೆ.

ಭಿತ್ತಿ: ಈ ದೇವಾಲಯದ ನವರಂಗದ ಮುಂಭಾಗದ ಭಿತ್ತಿ, ಉತ್ತರ ದಿಕ್ಕಿನ ಭಿತ್ತಿ ಮತ್ತು ದಕ್ಷಿಣ ದಿಕ್ಕಿನ ಭಿತ್ತಿಯ ಸ್ತಂಭಗಳ ಮೇಲಿನ ಭಾಗವನ್ನು ಗ್ರಾನೈಟ್ ಕಲ್ಲುಗಳನ್ನು ಬಳಸಿ ಮುಚ್ಚಲಾಗಿದೆ. ಭಿತಿಯಲ್ಲಿ ಸ್ತಂಭ ಪಂಜರಗಳನ್ನು ಮತ್ತು ಕೋಷ್ಠ ಪಂಜರಗಳನ್ನು ನಿರ್ಮಿಸಲಾಗಿದ್ದು, ಗರ್ಭಗುಡಿ ಮತ್ತು ಸುಖನಾಸಿ ಭಾಗದ ದಕ್ಷಿಣ ದಿಕ್ಕಿನ ಭಿತ್ತಿ ಕೋಷ್ಠಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಮೋಹಿನಿ ಮತ್ತು ಭೈರವ ಶಿಲ್ಪಗಳನ್ನು ಮತ್ತು ಪಶ್ಚಿಮ ದಿಕ್ಕಿನ ಭಿತ್ತಿಯಲ್ಲಿ ಶಿವ ಮತ್ತು ಸ್ತ್ರೀಶಿಲ್ಪಗಳನ್ನು ಕೆತ್ತಲಾಗಿದೆ.[15] ಹಾಗೂ ಕೆಲವು ಸ್ತಂಭ ಪಂಜರಗಳ ಪಾರ್ಶ್ವದಲ್ಲಿ ಮಕರ ತೋರಣಗಳನ್ನು ಮತ್ತು ಮೇಲ್ಭಾಗದಲ್ಲಿ ಕೀರ್ತಿಮುಖಗಳನ್ನು ಕೆತ್ತಿರುವುದನ್ನು ಗಮನಿಸಬಹುದಾಗಿದೆ. ಭಿತ್ತಿಯ ನಂತರ ಪ್ರಸ್ತರ ಭಾಗದಲ್ಲಿ ಉತ್ತರ ಮತ್ತು ಕಪೋತ ಭಾಗಗಳು ಕಂಡು ಬರುತ್ತವೆ. ಒಟ್ಟಾರೆಯಾಗಿ ಈ ದೇವಾಲಯದ ಗರ್ಭಗುಡಿ ಮತ್ತು ಸುಖನಾಸಿಯ ಭಿತ್ತಿಯು ಮೂಲಸ್ವರೂಪವನ್ನು ಉಳಿಸಿಕೊಂಡಿದ್ದು, ನವರಂಗದ ಭಿತ್ತಿಯು ಕಾಲಾನಂತರದಲ್ಲಿ ಕೆಲವು ಬದಲಾವಣೆಗೆ ಒಳಗಾಗಿರುವುದನ್ನು ಗುರುತಿಸಬಹುದು.

**ಶಿಖರ ಮತ್ತು ಕೈಪಿಡಿ ಗೋಡೆ**: ಶಿಖರವನ್ನು ಇತ್ತೀಚಿನ ಗಾರೆ ಮತ್ತು ಸಿಮೆಂಟನ್ನು ಬಳಸಿ ನಿರ್ಮಿಸಲಾಗಿದೆ. ಇದು ದ್ವಿತಲವನ್ನು ಹೊಂದಿದ್ದು ಬ್ರಹ್ಮಚ್ಛಂಧ ಮಾದರಿಯ ಶಿಖರವಾಗಿದೆ. ಇದರಲ್ಲಿ ಕೂಟ, ಪಂಜರ, ಶಾಲಾ ಮತ್ತು ನಾಸಿಗಳ ರಚನೆಯು ಕಂಡು ಬರುತ್ತದೆ. ಈ ದೇವಾಲಯದ ಕೈಪಿಡಿ ಗೋಡೆಯನ್ನು ಸಂಪೂರ್ಣವಾಗಿ ಗ್ರಾನೈಟ್ ಕಲ್ಲಿನಿಂದ ನಿರ್ಮಿಸಲಾಗಿದೆ. (ಚಿ.ಸಂ. 5) ಮುಖಮಂಟಪದ ಮೇಲ್ಭಾಗದಲ್ಲಿ ಕೋಷ್ಠವಿದ್ದು ಇದರ ಒಳಗೆ ಶಿವನ ಶಿಲ್ಪವನ್ನು ಮತ್ತು ಕೋಷ್ಠದ ಎರಡೂ ಬದಿಯಲ್ಲಿ ನಂದಿ ಶಿಲ್ಪಗಳನ್ನು ನಿರ್ಮಿಸಲಾಗಿದೆ.

**ದೇವಾಲಯದ ಆವರಣ**: ದೇವಾಲಯದ ಮುಖಮಂಟಪದ ಮುಂಭಾಗದಲ್ಲಿ ಪಶ್ಚಿಮಾಭಿಮುಖವಾಗಿ ಒಂದು ನಂದಿ ಶಿಲ್ಪ ಮತ್ತು ಇದರ ಹಿಂಬದಿಯಲ್ಲಿ ಒಂದು ಚಿಕ್ಕ ಕಂಬದ ಕೆಳಗೆ ಭೈರವ ಶಿಲ್ಪವಿದೆ. ಇದರಲ್ಲಿ ಭೈರವನು ಬಲಹಿಂಬದಿಯ ಕೈಯಲ್ಲಿ ತ್ರಿಶೂಲ, ಮುಂಬದಿಯ ಕೈಯಲ್ಲಿ ಕತ್ತಿ, ಎಡ ಹಿಂಬದಿಯ ಕೈಯಲ್ಲಿ ಢಮರು ಮತ್ತು ಮುಂಭಾಗದ ಕೈಯಲ್ಲಿ ಮನುಷ್ಯನ ತಲೆಯನ್ನು ಹಿಡಿದಿದ್ದು ಇದನ್ನು ಒಂದು ನಾಯಿಯು ನೆಕ್ಕುತ್ತಿರುವಂತೆ ಕೆತ್ತಲಾಗಿದೆ. ಈ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ವಾಹನ ಸಮೇತರಾಗಿ ಆಸೀನರಾಗಿರುವ ಸುಂದರವಾದ ಸಪ್ತಮಾತೃಕೆಯರ ಶಿಲ್ಪಪಟ್ಟಿಕೆ ಮತ್ತು ಪಕ್ಕದಲ್ಲಿ ನಾಲ್ಕು ನಾಗರಕಲ್ಲುಗಳನ್ನು ನಿಲ್ಲಿಸಲಾಗಿದೆ. ಈ ದೇವಾಲಯದ ದಕ್ಷಿಣ ದಿಕ್ಕಿನಲ್ಲಿ ಹೊಯ್ಸಳ ವಿಷ್ಣುವರ್ಧನನು ಶಾಂತಲಾದೇವಿಯ ಮೂಲಕ ಈ ದೇವಾಲಯಕ್ಕೆ ಮತ್ತು 220 ಬ್ರಾಹ್ಮಣರಿಗೆ ದಾನ ನೀಡಿದ ಶಾಸನ[16] ಮತ್ತು ವಿಜಯನಗರ ಸಾಮ್ರಾಜ್ಯದ ಅರಸ ಅಚ್ಯುತರಾಯನ ಕಾಲದ ದಾನ ಶಾಸನಗಳು[17] ಕಂಡು ಬರುತ್ತವೆ. ಒಟ್ಟಿನಲ್ಲಿ ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯನ್ನು ಪ್ರತಿಬಿಂಬಿಸುವ ಈ ದೇವಾಲಯವು ಪೂಜಾ ಕೈಂಕರ್ಯಗಳಿಗೆ ಒಳಪಡುವ ಮೂಲಕ ಇಂದು ಸುಸ್ಥಿತಿಯಲ್ಲಿದೆ.

**ಯೆಲಗುಂದ**

ಈ ಗ್ರಾಮವು ಹಾಸನ ನಗರದಿಂದ ಉತ್ತರ ದಿಕ್ಕಿಗೆ 20 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯನ್ನು ಉಲ್ಲೇಖಿಸುವ ಎರಡು ಶಾಸನಗಳು ಮತ್ತು ಶಾಂತಮಲ್ಲೇಶ್ವರ (ಶಾಂತಲೇಶ್ವರ), ಕೆನ್ನೆಕೆರೆಯಮ್ಮ (ಬೊಪ್ಪೇಶ್ವರ), ಕೇಶವ, ಸಿದ್ಧರಾಮೇಶ್ವರ, ಬಸವೇಶ್ವರ, ರಾಮೇಶ್ವರ, ಕರಿಯಮ್ಮ, ದೇವಿರಮ್ಮ ದೇವಾಲಯಗಳು ಕಂಡು ಬರುತ್ತವೆ. ಈ ಗ್ರಾಮವು ಹೊಯ್ಸಳರ ಆಳ್ವಿಕೆಯಲ್ಲಿ ನೀರ್ಗುಂದ ನಾಡಿಗೆ ಸೇರಿತ್ತೆಂದು, ಹಾಗೂ ಶಾಂತಮಲ್ಲೇಶ್ವರ ಮತ್ತು ಬೊಪ್ಪೇಶ್ವರ ದೇವಾಲಯಗಳು ಇವರ ಆಳ್ವಿಕೆಯಲ್ಲಿ ನಿರ್ಮಾಣವಾದವೆಂದು ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ.

**ಶಾಂತಮಲ್ಲೇಶ್ವರ (ಶಾಂತಲೇಶ್ವರ) ದೇವಾಲಯ-ಯಲಗುಂದ**

ಈ ದೇವಾಲಯವು ಗ್ರಾಮದ ಕೆರೆಕೋಡಿಯ ಸಮೀಪ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. ಹೊಯ್ಸಳ ವಿಷ್ಣುವರ್ಧನನಿಗೆ ಚಿಕ್ಕಶಾಂತಲೆ ಎಂಬ ಪತ್ನಿಯಿದ್ದು ಈಕೆಯು ಅಕಾಲಿಕ ಮರಣಕ್ಕೆ ತುತ್ತಾದಾಗ ಈಕೆಯ ತಾಯಿ ಕೇತೆಯ ದಣ್ಣಾಯಕನ ಪತ್ನಿಯೂ ಆಗಿದ್ದಂತಹ ಹೆಗ್ಗಡಿತಿ ಜಕ್ಕಿಯಬ್ಬೆಯು ಮಗಳು ಮತ್ತು ಮೊಮ್ಮಗಳ ನೆನಪಿನಾರ್ಥವಾಗಿ ಪರೋಕ್ಷ ವಿನಯದ ರೂಪದಲ್ಲಿ ಶಾಂತಲೇಶ್ವರ ದೇವಾಲಯ ಮತ್ತು ಬೊಪ್ಪೇಶ್ವರ ದೇವಾಲಯವನ್ನು ನಿರ್ಮಿಸಿದಳೆಂದು ಈ ಗ್ರಾಮದ ಕ್ರಿ.ಶ.1135ರ ಶಾಸನದಿಂದ[18] ತಿಳಿದು ಬರುತ್ತದೆ. ಇದರಲ್ಲಿ ಜಕ್ಕಿಯಬ್ಬೆಯು ವೇದಕಂಡಿಕಕ್ಕೆ ದಾನ ನೀಡಿದ ಅಂಶವು ಪ್ರಸ್ತಾಪವಾಗಿದೆ. ಈ ದೇವಾಲಯವು ಗರ್ಭಗುಡಿ, ತೆರೆದ ಅಂತರಾಳ, ಒಂದು ಚಿಕ್ಕದಾದ ಹಜಾರ ನಂತರ ಮುಚ್ಚಿದ ಮುಖಮಂಟಪ ಹಾಗೂ ದೇವಾಲಯದ ಬಲಭಾಗದ ಗೋಡೆಗೆ ಹೊಂದಿಕೊಂಡಂತೆ ಒಂದು ಹಜಾರವನ್ನು ಹೊಂದಿದೆ. (ಚಿ.ಸಂ. 6)

**ಗರ್ಭಗೃಹ:** ಇದು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದೆ. ಈ ಗರ್ಭಗುಡಿಯ ವಿತಾನವು ಒಂದು ಹಂತವನ್ನು ಹೊಂದಿರುವ ನಾಭಿಚ್ಛಂದ ಮಾದರಿಯದ್ದಾಗಿದ್ದು, ಇದರ ಮಧ್ಯಭಾಗದಲ್ಲಿ ಸರಳವಾದ ಪದ್ಮಶಿಲಾ ಫಲಕವಿದೆ. ಬಾಗಿಲುವಾಡವು ಸರಳವಾಗಿದ್ದು ಇದರ ಎರಡೂ ಕೆಳಪಾರ್ಶ್ವದಲ್ಲಿ ನಾಗರಕಲ್ಲುಗಳಿವೆ ಹಾಗೂ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. (ಚಿ.ಸಂ. 7)

**ಸುಖನಾಸಿ:** ಇದು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು ದ್ವಾರವು ಕಂಡು ಬರದೇ ತೆರೆದುಕೊಂಡಿದೆ. ಇದರ ಎಡಪಾರ್ಶ್ವದಲ್ಲಿ ಒಂದು ಗಣೇಶ ವಿಗ್ರಹ ಮತ್ತು ಬಲಪಾರ್ಶ್ವದಲ್ಲಿ ಮತ್ತೊಂದು ಗಣೇಶ ವಿಗ್ರಹ ಕಂಡು ಬರುತ್ತದೆ. ಬಲಭಾಗದ ಗಣೇಶ ವಿಗ್ರಹವು ನಾಲ್ಕು ಕೈಗಳನ್ನು ಹೊಂದಿದ್ದು ಮೂರರಲ್ಲಿ ಅಂಕುಶ, ಪದ್ಮ ಮತ್ತು ಫಲವನ್ನು ಹಿಡಿದಿದ್ದು ಬಲಮುಂಗೈ ಅಭಯಹಸ್ತವನ್ನು ಹೊಂದಿದೆ. ಹಾರ, ಯಜ್ಞೋಪವೀತ, ಉದರಬಂಧ, ಕಿರೀಟ ಮುಕುಟವನ್ನು ಧರಿಸಿರುವ ಈ ಶಿಲ್ಪವು ಸುಂದರವಾದ ಪ್ರಭಾವಳಿ ಮತ್ತು ಮೇಲ್ಭಾಗದಲ್ಲಿ ಕೀರ್ತಿಮುಖದ ಕೆತ್ತನೆಯನ್ನು ಹೊಂದಿದೆ. ಎಡಭಾಗದ ಗಣೇಶ ಶಿಲ್ಪವೂ ಕೂಡ ಇದೇ ಲಕ್ಷಣಗಳನ್ನು ಹೊಂದಿರುತ್ತದೆ. ಸುಖನಾಸಿಯ ಮುಂದೆ ಒಂದು ಚಿಕ್ಕ ಹಜಾರವಿದ್ದು ಇದರಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಬಲಭಾಗದಲ್ಲಿ ಸುಮಾರು 2½

ಅಡಿ ಎತ್ತರದ ಅಂಗವಿದೆ. ಇದರಲ್ಲಿ ಬ್ರಹ್ಮಪಾದ, ವಿಷ್ಣುಪಾದ ಮತ್ತು ರುದ್ರಪಾದಗಳನ್ನು ಗುರುತಿಸಬಹುದಾಗಿದೆ. ಸುಖನಾಸಿಯ ಮುಂದಿನ ಹಜಾರದ ಬಲಭಾಗದಲ್ಲಿ ಪೀಠದ ಮೇಲೆ ಒಂದು ಗುಂಡಾದ ಕಲ್ಲು (ಶಿಲೆ) ಕಂಡು ಬಂದಿದ್ದು ಇದರ ಪಕ್ಕದಲ್ಲಿ ಒಂದು ದ್ವಾರವಿದೆ. ಇದು ದೇವಾಲಯದ ಬಲಭಾಗದ ಗೋಡೆಗೆ ಹೊಂದಿಕೊಂಡಂತಿರುವ ಹಜಾರಕ್ಕೆ ಪ್ರವೇಶವನ್ನು ಕಲ್ಪಿಸುತ್ತದೆ. ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನದಲ್ಲಿ ಜಕ್ಕಿಯಬ್ಬೆಯು ಒಂದು ವೇದಶಾಲೆಗೆ ದಾನ ನೀಡಿದ ಅಂಶವು ಕಂಡು ಬರುತ್ತದೆ. ಇದರ ಪ್ರಕಾರ ದೇವಾಲಯದ ಪಕ್ಕದಲ್ಲಿರುವ ಈ ಹಜಾರವೇ ವೇದ ಶಾಲೆಯಾಗಿರಬಹುದು. ಗ್ರಾಮಸ್ಥರ ಪ್ರಕಾರ ಇದರಲ್ಲಿ ಕೆಲವು ವರ್ಷಗಳ ಹಿಂದೆ ವೇದ ಪ್ರವಚನವು ನಡೆಯುತ್ತಿತ್ತೆಂದು ತಿಳಿದು ಬರುತ್ತದೆ.[19] ಇದರಲ್ಲಿ ಐದು ಸ್ವತಂತ್ರ ಸ್ತಂಭಗಳು ಮತ್ತು ಭಿತ್ತಿಗೆ ಹೊಂದಿಕೊಂಡಂತೆ ಐದು ಸ್ತಂಭಗಳು ಕಂಡು ಬರುತ್ತವೆ. ಈ ವೇದಶಾಲೆಯ ಈಶಾನ್ಯ ದಿಕ್ಕಿನ ಛಾವಣಿಯಲ್ಲಿ ಎರಡು ವೀರಗಲ್ಲುಗಳನ್ನು ಅಳವಡಿಸಿರುವುದನ್ನು ಗುರುತಿಸಬಹುದಾಗಿದೆ.

**ಭಿತ್ತಿ ಮತ್ತು ಮುಖಮಂಟಪ**: ಈ ದೇವಾಲಯದ ಭಿತ್ತಿಯು ಸರಳವಾಗಿದ್ದು, ಇದನ್ನು ದೊಡ್ಡ ದೊಡ್ಡ ಸೋಪುಗಲ್ಲು ಮತ್ತು ಒರಟು ಗ್ರಾನೈಟ್ ಕಲ್ಲುಗಳನ್ನು ಬಳಸಿ ನಿರ್ಮಿಸಲಾಗಿದೆ. ಇದರ ಉತ್ತರ ದಿಕ್ಕಿನ ಭಿತ್ತಿ ಮತ್ತು ದಕ್ಷಿಣ ದಿಕ್ಕಿನ ಭಿತ್ತಿಯು ಕುಸಿದಿದೆ. ವೇದಕಂಡಿಕದ ಗೋಡೆಯನ್ನು ಇತ್ತೀಚಿನ ಕಾಲದಲ್ಲಿ ನಿರ್ಮಿಸಲಾಗಿದ್ದು, ಕಬ್ಬಿಣದ ಸರಳುಗಳನ್ನು ಬಳಸಿ ಕಿಟಕಿಗಳು ಮತ್ತು ಬಾಗಿಲನ್ನು ನಿರ್ಮಿಸಲಾಗಿದೆ. ಮುಖಮಂಟಪವು ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಮುಚ್ಚಲ್ಪಟ್ಟಿದ್ದು ಪೂರ್ವ ದಿಕ್ಕಿನ ಭಾಗವು ಮಾತ್ರ ತೆರೆದುಕೊಂಡಿದೆ. ದೇವಾಲಯದ ನೈರುತ್ಯ ದಿಕ್ಕಿನಲ್ಲಿ ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನವು ಬಿದ್ದಿರುತ್ತದೆ. ಒಟ್ಟಿನಲ್ಲಿ ಈ ದೇವಾಲಯವು ತೀರಾ ಸರಳ ಮತ್ತು ಶಿಥಿಲವಾಗಿದ್ದು ಯಾವುದೇ ಸಂದರ್ಭದಲ್ಲಾದರೂ ಕುಸಿಯುವ ಹಂತದಲ್ಲಿದೆ ಎಂದು ಹೇಳಬಹುದಾಗಿದೆ.

**ಕೆನ್ನೆಕೆರೆಯಮ್ಮ (ಬೊಪ್ಪೇಶ್ವರ) ದೇವಾಲಯ**: ಇದು ಯೆಲಗುಂದ ಗ್ರಾಮದ ಉತ್ತರ ದಿಕ್ಕಿಗೆ ಕೆರೆ ಏರಿಯ ಕೆಳಗೆ ಕಂಡು ಬರುತ್ತದೆ. ವಿಷ್ಣುವರ್ಧನನ ಪತ್ನಿ ಚಿಕ್ಕಶಾಂತಲೆ ಮತ್ತು ಈಕೆಯ ಮಗಳು ಇಬ್ಬರೂ ಮರಣ ಹೊಂದಿದಾಗ, ಚಿಕ್ಕಶಾಂತಲೆಯ ತಾಯಿ ಹೆಗ್ಗಡಿತಿ ಜಕ್ಕಿಯಬ್ಬೆಯು ಇವರ ನೆನಪಾರ್ಥವಾಗಿ ಶಾಂತಲೇಶ್ವರ ಮತ್ತು ಬೊಪ್ಪೇಶ್ವರ ಎಂಬ ದೇವಾಲಯಗಳನ್ನು ನಿರ್ಮಿಸಿದಳೆಂದು ಈ ಗ್ರಾಮದ ಕ್ರಿ.ಶ.1135ರ ಶಾಸನದಿಂದ[20] ತಿಳಿದು ಬರುತ್ತದೆ. ಇಂದು ಈ ಗ್ರಾಮದಲ್ಲಿ ಶಾಂತಲೇಶ್ವರ ದೇವಾಲಯವು ಶಾಂತಮಲ್ಲೇಶ್ವರ ಎಂಬ ಹೆಸರಿನಿಂದ ಅಸ್ಥಿತ್ವದಲ್ಲಿದ್ದು, ಬೊಪ್ಪೇಶ್ವರ ಎಂಬ ಹೆಸರಿನ ಯಾವುದೇ ದೇವಾಲಯ ಕಂಡು ಬರುವುದಿಲ್ಲ.

ಅದರೆ ಕೆನ್ನೆಕೆರೆಯಮ್ಮ ಎಂಬ ಹೆಸರಿನ ಒಂದು ದೇವಾಲಯವಿದ್ದು ಬಹುಶಃ ಈ ಕೆನ್ನೆಕೆರೆಯಮ್ಮನೇ ಮೂಲದಲ್ಲಿ ಬೊಪ್ಪೇಶ್ವರವಾಗಿರಬಹುದು. ಏಕೆಂದರೆ ಇದು ಶಾಂತಮಲ್ಲೇಶ್ವರ ದೇವಾಲಯದಂತೆಯೇ ಸರಳವಾಗಿದ್ದು ಇದಕ್ಕೆ ಸಮೀಪದಲ್ಲಿದೆ. ಈ ದೇವಾಲಯವು ಗರ್ಭಗುಡಿ, ತೆರೆದ ಸುಖನಾಸಿ ಮತ್ತು ಒಂದು ಹಜಾರವನ್ನು ಹೊಂದಿರುತ್ತದೆ. ಈ ದೇವಾಲಯದ ಗರ್ಭಗುಡಿ ಮತ್ತು ಸುಖನಾಸಿ ಭಾಗವು ಹಳೆಯ ದೇವಾಲಯದ ಭಾಗವಾಗಿದ್ದು ಉಳಿದ ಭಾಗವು ಇತ್ತೀಚಿನ ಸೇರ್ಪಡೆಯಾಗಿರುತ್ತದೆ. (ಚಿ.ಸಂ. ೮)

**ಗರ್ಭಗುಡಿ ಮತ್ತು ಸುಖನಾಸಿ**: ಗರ್ಭಗುಡಿಯು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಎರಡು  ಅಡಿ ಪೀಠದ ಮೇಲೆ ಒಂದು ಅಡಿಗೂ ಕಡಿಮೆ ಎತ್ತರವಿರುವ ಲಿಂಗವಿದೆ. (ಚಿ.ಸಂ. ೯)  ಇದರ ಛಾವಣಿಯು ಯಾವುದೇ ಅಲಂಕರಣಗಳನ್ನು ಹೊಂದಿರದೇ ಸರಳವಾಗಿದೆ. ಗರ್ಭಗುಡಿಯ ಬಾಗಿಲುವಾಡವು ಸರಳವಾಗಿದ್ದು ಎರಡೂ ಪಾರ್ಶ್ವದಲ್ಲಿ ಅರೆಗಂಬಗಳ ರೀತಿಯ ಕೆತ್ತನೆ ಮತ್ತು ದ್ವಾರಶಾಖೆಯ ಮೇಲ್ಭಾಗದಲ್ಲಿ ಇಳಿಬಿದ್ದ ಗುಬುಟುಗಳ ಕೆತ್ತನೆಯನ್ನು ಮಾಡಿದ್ದಾರೆ. ಲಲಾಟದಲ್ಲಿ ಯಾವುದೇ ಶಿಲ್ಪ ಕಂಡು ಬರುವುದಿಲ್ಲ. ಗರ್ಭಗುಡಿಯ ನಂತರ ಸುಖನಾಸಿ ಭಾಗವು ತೆರೆದುಕೊಂಡಿದ್ದು, ಸರಳವಾದ ನಾಭಿಚ್ಛಂಧ ಮಾದರಿಯ ವಿತಾನವನ್ನು ಹೊಂದಿದೆ.

**ಹಜಾರ**: ಇದು ಸುಖನಾಸಿ ಭಾಗದ ನಂತರ ಕಂಡು ಬಂದಿದ್ದು 10X15 ಅಡಿ ಅಗಲ ಮತ್ತು ಉದ್ದವನ್ನು ಹೊಂದಿರುತ್ತದೆ. ಈ ಹಜಾರವನ್ನು ಇತ್ತೀಚಿನ ಕಾಲದಲ್ಲಿ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ಹೊಸದಾಗಿ ನಿರ್ಮಿಸಲಾಗಿದ್ದು ಇದರ ಮಧ್ಯಭಾಗದಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಹಜಾರದ ಬಲಭಾಗದಲ್ಲಿ ಕಡಪ ಕಲ್ಲಿನಿಂದ ಮಾಡಿದ ಜಗತಿಯ ರೀತಿಯ ನಿರ್ಮಾಣವಿದ್ದು ಇದರ ಕೆಳಭಾಗದಲ್ಲಿ ಸಪ್ತಮಾತೃಕೆಯರ ಶಿಲಾಫಲಕವಿದೆ. ಈ ಹಜಾರದಲ್ಲಿ ಸುಖನಾಸಿ ದ್ವಾರದ ಎರಡೂ ಪಾರ್ಶ್ವದಲ್ಲಿ ಎರಡೆರಡು ನಾಗರಕಲ್ಲುಗಳನ್ನು ನಿಲ್ಲಿಸಲಾಗಿದ್ದು, ಇಡೀ ದೇವಾಲಯದ ನೆಲಕ್ಕೆ ಇತ್ತೀಚಿನ ನವೀನ ಮಾದರಿಯ ಗ್ರಾನೈಟ್ ಚಪ್ಪಡಿಗಳನ್ನು ಅಳವಡಿಸಲಾಗಿದೆ. ಈ ದೇವಾಲಯದ ಗರ್ಭಗುಡಿ ಮತ್ತು ಸುಖನಾಸಿ ಭಾಗವನ್ನು ಹೊರತುಪಡಿಸಿ ಹೊರಭಿತ್ತಿ ಮತ್ತು ಒಳಭಿತ್ತಿ ಎಲ್ಲವನ್ನೂ ಇತ್ತೀಚಿನ ಸಿಮೆಂಟ್ ಮತ್ತು ಇಟ್ಟಿಗೆಯನ್ನು ಬಳಸಿ ನಿರ್ಮಿಸಲಾಗಿದೆ. ಮುಖ್ಯವಾಗಿ ಈ ದೇವಾಲಯದ ಗರ್ಭಗುಡಿ ಮತ್ತು ಸುಖನಾಸಿಯ ಛಾವಣಿಯು ಕೆರೆ ಏರಿಯ ಮೇಲ್ಭಾಗಕ್ಕೆ ಸಮಾನಾಂತರವಾಗಿ ಕಂಡು ಬಂದಿದ್ದು ಕೆಲವು ಸಂದರ್ಭಗಳಲ್ಲಿ ಜನರು ಇದರ ಮೇಲೆ ಸಂಚರಿಸುತ್ತಾರೆ.

**ಮುದುಗೆರೆ**

ಈ ಗ್ರಾಮವು ಹಾಸನ ನಗರದಿಂದ ಪಶ್ಚಿಮ ದಿಕ್ಕಿಗೆ 21 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಇಲ್ಲಿ ಹೊಯ್ಸಳ ಒಂದನೇ ನರಸಿಂಹನ ಆಳ್ವಿಕೆಯನ್ನು ಉಲ್ಲೇಖಿಸುವ ಒಂದು ಶಾಸನ ಮತ್ತು ಯೋಗಾನರಸಿಂಹ, ಆಂಜನೇಯ, ಓಂಕಾರೇಶ್ವರ ದೇವಾಲಯ ಹಾಗೂ ನವಗ್ರಹ ಗುಡಿಗಳು ಕಂಡು ಬರುತ್ತವೆ. ಈ ಗ್ರಾಮದಲ್ಲಿ ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಪೆರ್ಗಡೆ ಎರಿಯಮಯ್ಯ ಎಂಬಾತನು ಎರಗೇಶ್ವರ ದೇವಾಲಯವನ್ನು ನಿರ್ಮಿಸಿದ್ದನೆಂದು ಈ ಗ್ರಾಮದ ಕ್ರಿ.ಶ.1156ರ ಶಾಸನ[21] ತಿಳಿಸುತ್ತದೆ. ಆದರೆ ಈ ದೇವಾಲಯವಿದ್ದ ಸ್ಥಳದಲ್ಲಿ ಇಂದು ಆಧುನಿಕವಾಗಿ ಓಂಕಾರೇಶ್ವರ ದೇವಾಲಯವನ್ನು ನಿರ್ಮಿಸಲಾಗಿದೆ.[22]

**ಎರಗೇಶ್ವರ ದೇವಾಲಯ**

ಈ ದೇವಾಲಯವು ಇಂದು ಕಂಡು ಬರುವುದಿಲ್ಲ. ಆದರೆ ಇದರ ಅವಶೇಷಗಳು ಓಂಕಾರೇಶ್ವರ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಕಂಡು ಬರುತ್ತವೆ. ಎರಗೇಶ್ವರ ದೇವಾಲಯದ ಮೂಲ ಲಿಂಗ, ಗರ್ಭಗುಡಿಯ ದ್ವಾರಬಂಧ, ಸುಂದರವಾದ ನಂದಿ ಶಿಲ್ಪ ಹಾಗೂ ಇನ್ನುಳಿದ ಅವಶೇಷಗಳು ಮತ್ತು ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನವನ್ನು ಇಲ್ಲಿ ಗುರುತಿಸಬಹುದಾಗಿದೆ.[23, 24] ಗರ್ಭಗುಡಿಯ ದ್ವಾರಬಂಧದ ಅವಶೇಷವು ವಜ್ರ, ವಲ್ಲೀ, ಸ್ತಂಭ ಮತ್ತು ವಲ್ಲೀ ಎಂಬ ಚತುಶಾಖೆಗಳನ್ನು ಒಳಗೊಂಡಿದ್ದು, ಲಲಾಟದಲ್ಲಿ ಪಾಶ, ಅಂಕುಶ, ಅಕ್ಷಮಾಲಾ ಮತ್ತು ಪುಸ್ತಕವನ್ನು ಹಿಡಿದಿರುವ ಸುಂದರವಾದ ಸರಸ್ವತಿಯ ಉಬ್ಬುಶಿಲ್ಪವಿದೆ. ಈ ದ್ವಾರಬಂಧದ ಬಲಪಾರ್ಶ್ವದಲ್ಲಿ ವಿವಿಧ ಆಭರಣಗಳು ಮತ್ತು ಅಲಂಕಾರಿಕ ಕೆತ್ತನೆಗಳನ್ನು ಹೊಂದಿರುವ ಆಕರ್ಷಕವಾದ ನಂದಿ ಶಿಲ್ಪವಿದೆ. ಇದರ ಪಕ್ಕದಲ್ಲೇ ಎರಗೇಶ್ವರ ದೇವಾಲಯದ ಮೂಲ ಲಿಂಗವನ್ನು ಒಂದು ಗುಂಡಿಯೊಳಗೆ ಇಟ್ಟಿದ್ದಾರೆ. ಈ ಲಿಂಗವು ಬ್ರಹ್ಮಪಾದ, ವಿಷ್ಣುಪಾದ ಮತ್ತು ರುದ್ರಪಾದಗಳನ್ನು ಹೊಂದಿದ್ದು ತ್ರಿಮೂರ್ತಿಗಳ ಕಲ್ಪನೆಯ ಆಧಾರದ ಮೇಲೆ ಇದನ್ನು ನಿರ್ಮಿಸಲಾಗಿದೆ. ಈ ದೇವಾಲಯದ ಅವಶೇಷಗಳನ್ನು ಗಮನಿಸಿದಾಗ ಬಹುಶಃ ಇದು ಬಹಳ ಸುಂದರವಾದ ದೇವಾಲಯವಾಗಿತ್ತು ಎಂಬುದಾಗಿ ಹೇಳಬಹುದಾಗಿದೆ.[25]

**ಹೆರಗು**

ಹೆರಗು ಗ್ರಾಮವು ಹಾಸನ ನಗರದಿಂದ ಆಗ್ನೇಯ ದಿಕ್ಕಿಗೆ 24 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ 11 ಶಾಸನಗಳು ಮತ್ತು ಪಾರ್ಶ್ವನಾಥ ಬಸದಿ, ಕಮಟೇಶ್ವರ,

ಕೀರ್ತಿನಾರಾಯಣ ಮತ್ತು ಮಾರಿಯಮ್ಮ ದೇವಾಲಯಗಳು ಕಂಡು ಬರುತ್ತವೆ. ಇವುಗಳಲ್ಲಿ ಮಾರಿಯಮ್ಮ ದೇವಾಲಯವನ್ನು ಹೊರತುಪಡಿಸಿ ಉಳಿದ ಎಲ್ಲಾ ದೇವಾಲಯಗಳು ಹೊಯ್ಸಳರ ಆಳ್ವಿಕೆಯಲ್ಲಿ ನಿರ್ಮಾಣವಾಗಿವೆ.

**ಕಮಠೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. ತೀರಾ ಸರಳವಾದ ಈ ದೇವಾಲಯವು ಇಂದು ಶಿಥಿಲಾವಸ್ಥೆಯಲ್ಲಿದ್ದು ಇದರ ಗರ್ಭಗುಡಿಯ ಪಶ್ಚಿಮ ದಿಕ್ಕಿನ ಗೋಡೆ ಮತ್ತು ಇಟ್ಟಿಗೆ ಗಾರೆಯಿಂದ ನಿರ್ಮಾಣ ಮಾಡಿರುವ ಶಿಖರವೂ ಸಹ ಕುಸಿದಿದೆ. ದೇವಾಲಯದ ಮುಂಭಾಗವನ್ನು ಹೊರತುಪಡಿಸಿ ಸುತ್ತಲೂ ಗಿಡಗಂಟಿಗಳು ಬೆಳೆದಿವೆ. (ಚಿ.ಸಂ. 10) ಗರ್ಭಗುಡಿ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿರುವ ಈ ದೇವಾಲಯದ ಉತ್ತರ ದಿಕ್ಕಿನ ಭಿತ್ತಿಯ ಬಳಿ ಒಂದನೇ ನರಸಿಂಹನ ಆಳ್ವಿಕೆಯ ಕಾಲದ ಕ್ರಿ.ಶ.1158ರ ದಾನ ಶಾಸನ ಕಂಡು ಬಂದಿದೆ.[26]

**ಗರ್ಭಗುಡಿ:** ಚೌಕಾಕಾರವನ್ನು ಹೊಂದಿರುವ ಗರ್ಭಗುಡಿಯು 5x5 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಎರಡು ಅಡಿ ಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದೆ. ಇದರ ಹಿಂಭಾಗದಲ್ಲಿ ಸರ್ಪವು 7 ಹೆಡೆಗಳನ್ನು ಎತ್ತಿರುವ ರೀತಿಯಲ್ಲಿ ಲೋಹದ ಪ್ರಭಾವಳಿಯನ್ನು ಅಳವಡಿಸಿದ್ದಾರೆ. (ಚಿ.ಸಂ. 11) ಗರ್ಭಗುಡಿಯ ಎಡ ಹಿಂಬದಿಯ ಮೂಲೆಯಲ್ಲಿ ಬ್ರಹ್ಮ, ವಿಷ್ಣು ಮತ್ತು ರುದ್ರ ತ್ರಿಮೂರ್ತಿಗಳ ಸಂಯುಕ್ತ ರೂಪವಿರುವ ಸುಮಾರು 2½ ಅಡಿ ಎತ್ತರದ ಸ್ಥಾಣು ಲಿಂಗವಿದೆ. ಮೂಲ ಲಿಂಗದ ಬಲಭಾಗದಲ್ಲಿ ನಂದಿ ಶಿಲ್ಪವಿದೆ. ಗರ್ಭಗುಡಿಯ ಬಾಗಿಲುವಾಡವು ಸರಳವಾಗಿದ್ದು, ಇದರ ವಿತಾನವು ಒಂದು ಹಂತವನ್ನು ಹೊಂದಿರುವ ನಾಭಿಚ್ಛಂಧ ಮಾದರಿಯದ್ದಾಗಿದೆ.

**ಸುಖನಾಸಿ:** ಸುಖನಾಸಿಯು 5x5 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರಲ್ಲಿ ಗರ್ಭಗುಡಿಯ ದ್ವಾರದ ಬಳಿ ಎರಡು ನಂದಿ ಶಿಲ್ಪಗಳಿವೆ. ಸುಖನಾಸಿಯ ಬಲಭಾಗದಲ್ಲಿ ದ್ವಿಭಂಗಿಯ ಭೈರವ ಶಿಲ್ಪವಿದೆ. ಇದರಲ್ಲಿ ಭೈರವನು ಬಲ ಹಿಂಬದಿಯ ಕೈಯಲ್ಲಿ ತ್ರಿಶೂಲ, ಮುಂಭಾಗದ ಕೈಯಲ್ಲಿ ಕತ್ತಿ, ಎಡ ಹಿಂಭಾಗದ ಕೈಯಲ್ಲಿ ಢಮರು ಮತ್ತು ಎಡ ಮುಂಭಾಗದ ಕೈಯಲ್ಲಿ ರುಂಡವನ್ನು ಹಿಡಿದಿದ್ದು, ಈ ರುಂಡವನ್ನು ನಾಯಿಯು ನೆಕ್ಕುತ್ತಿರುವಂತೆ ಕೆತ್ತಲಾಗಿದೆ. ಈ ಶಿಲ್ಪದ ಹಿಂಬದಿಯಲ್ಲಿ ಸುಂದರವಾದ ಪ್ರಭಾವಳಿಯಿದೆ. ಸುಖನಾಸಿಯ ಎಡಭಾಗದಲ್ಲಿ ಒಂದು ಸಣ್ಣ ಗುಡಿಯಿದ್ದು ಇದರಲ್ಲಿ ವೃಷಭಾರೂಢ ಉಮಾಮಹೇಶ್ವರ ಶಿಲ್ಪವಿದೆ. ಸುಖನಾಸಿಯ

ಭುವನೇಶ್ವರಿಯು ನಾಭಿಚ್ಛಂಧ ಮಾದರಿಯದಾಗಿದ್ದು, ಮಧ್ಯಭಾಗದಲ್ಲಿ ಶತಾತಪತ್ರ ಪದ್ಮ ರಚನೆಯಿರುವ ಶಿಲಾಫಲಕವಿದೆ. ಇದರ ದ್ವಾರದ ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ.

**ನವರಂಗ**: ನವರಂಗವು ಸರಳವಾಗಿದ್ದು ಇದರಲ್ಲಿ ಛಾವಣಿಗೆ ಆಸರೆಯಾಗಿ ಎರಡು ಸ್ತಂಭಗಳಿವೆ. ಇದರಲ್ಲಿ ಯಾವುದೇ ಶಿಲ್ಪಗಳಾಗಲೀ, ಭುವನೇಶ್ವರಿಗಳಾಗಲೀ ಕಂಡು ಬರುವುದಿಲ್ಲ. ಇದರ ಬಾಗಿಲುವಾಡವು ವಜ್ರಶಾಖೆ, ವಲ್ಲೀಶಾಖೆ ಮತ್ತು ಸ್ತಂಭಶಾಖೆಗಳನ್ನು ಹೊಂದಿರುವ ತ್ರಿಶಾಖಾ ಮಾದರಿಯದ್ದಾಗಿದ್ದು ಲಲಾಟದಲ್ಲಿ ಜಿನಶಿಲ್ಪವಿದೆ. ಈ ಗ್ರಾಮದಲ್ಲಿ ಚೆನ್ನಪಾರ್ಶ್ವನಾಥ ಎಂಬ ಬಸದಿಯಿದ್ದು ಇಂದು ಈ ಬಸದಿಯು ಶಿಥಿಲಾವಸ್ಥೆಯಲ್ಲಿದೆ. ಈ ಬಸದಿಯ ಬಗಿಲುವಾಡವನ್ನು ತೆಗೆದುಕೊಂಡು ಬಂದು ಕಮಠೇಶ್ವರ ದೇವಾಲಯದ ನವರಂಗದ ಬಾಗಿಲಿನಲ್ಲಿ ಅಳವಡಿಸಿರಬಹುದು.[27] (ಚಿ.ಸಂ. 12) ಏಕೆಂದರೆ ವಾಸ್ತುಶಾಸ್ತ್ರದ ಪ್ರಕಾರ ಶೈವ ದೇವಾಲಯ ದ್ವಾರದ ಲಲಾಟದಲ್ಲಿ ಜಿನಶಿಲ್ಪಗಳು ಕಂಡು ಬರುವುದಿಲ್ಲ. ಆದ್ದರಿಂದ ಇದರ ಬಾಗಿಲುವಾಡವು ಜೈನ ಬಸದಿಯದ್ದೇ ಆಗಿರುತ್ತದೆ.

**ಮುಖಮಂಟಪ ಮತ್ತು ಭಿತ್ತಿ**: ಮುಖಮಂಟಪವು ಎರಡು ಸ್ತಂಭಗಳನ್ನು ಮತ್ತು ಸರಳ ಪದ್ಮದ ರಚನೆಯಿರುವ ಭುವನೇಶ್ವರಿಯನ್ನು ಹೊಂದಿದೆ. ಈ ಸ್ತಂಭಗಳು ಚೌಕಾಕಾರದ ದಿಂಡು, ಅಷ್ಟಕೋನ, ವೃತ್ತಾಕಾರದ ದಿಂಡು, ಕಂಠ, ಫಲಕ ನಂತರ ಬೋದಿಗೆಯನ್ನು ಹೊಂದಿವೆ. ಈ ದೇವಾಲಯದ ಭಿತ್ತಿಯನ್ನು ಗಮನಿಸಿದಾಗ ಗರ್ಭಗುಡಿ ಮತ್ತು ಸುಖನಾಸಿಯ ಭಿತ್ತಿಯನ್ನು ಹೊರತುಪಡಿಸಿ ನವರಂಗದ ಭಿತ್ತಿಯನ್ನು ಯಾವಾಗಲೋ ಹೊಸದಾಗಿ ಸೇರ್ಪಡೆ ಮಾಡಿರುವಂತೆ ಕಂಡು ಬರುತ್ತದೆ. ಬಹುಶಃ ನವರಂಗದ ಭಿತ್ತಿಯು ನಶಿಸಿ ಹೋಗಿದ್ದಿರಬಹುದು. ಏಕೆಂದರೆ ದೇವಾಲಯದ ಕೆಲವು ಅವಶೇಷಗಳು ಪಕ್ಕದಲ್ಲೇ ಬಿದ್ದಿವೆ. ಈ ದೇವಾಲಯಕ್ಕೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ಕೈಪಿಡಿ ಗೋಡೆ ಮತ್ತು ಶಿಖರವನ್ನು ನಿರ್ಮಿಸಲಾಗಿದೆ. ಆದರೆ ಶಿಖರವು ಭಾಗಶಃ ಕುಸಿದಿದ್ದು, ಇನ್ನುಳಿದ ಭಾಗವು ಬೀಳುವ ಹಂತದಲ್ಲಿದೆ. (ಚಿ.ಸಂ. 13) ಈ ದೇವಾಲಯದ ಗರ್ಭಗುಡಿ ಮತ್ತು ಸುಖನಾಸಿಯ ಹೊರಭಿತ್ತಿಯಲ್ಲಿ ಮಾತ್ರ ಅರೆಗಂಬಗಳ ಕೆತ್ತನೆಯನ್ನು ಗುರುತಿಸಬಹುದಾಗಿದೆ. ಗರ್ಭಗುಡಿಯ ಹಿಂಭಾಗದ ಭಿತ್ತಿಯು ಕುಸಿದಿರುವುದರಿಂದ ದೇವಾಲಯದ ಇತರೆ ಭಾಗಗಳು ಯಾವ ಸಂದರ್ಭದಲ್ಲಾದರೂ ಕುಸಿಯಬಹುದು. ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಅಷ್ಟೇನೂ ವಿಶೇಷ ಲಕ್ಷಣಗಳನ್ನು ಹೊಂದಿರದ ಈ ದೇವಾಲಯವು ಇಂದು ಶಿಥಿಲಾವಸ್ಥೆಯಲ್ಲಿದೆ ಎಂದು ಅಭಿಪ್ರಾಯಿಸಬಹುದಾಗಿದೆ.

**ಕೋರವಂಗಲ**

ಈ ಗ್ರಾಮವು ಹಾಸನ ನಗರದಿಂದ ಆಗ್ನೇಯ ದಿಕ್ಕಿಗೆ 14 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಹೊಯ್ಸಳರ ಆಳ್ವಿಕೆಯಲ್ಲಿ ಸೀಗೆನಾಡಿನ ಪ್ರಮುಖ ಅಗ್ರಹಾರ ಕೇಂದ್ರವಾಗಿದ್ದ ಈ ಗ್ರಾಮದಲ್ಲಿ ಇವರ ಕಾಲದ 8 ಶಾಸನಗಳು ಮತ್ತು ಬೂಚೇಶ್ವರ, ಗೋವಿಂದೇಶ್ವರ ಮತ್ತು ನಾಕೇಶ್ವರ ದೇವಾಲಯಗಳು ಕಂಡು ಬರುತ್ತವೆ. ಒಂದನೇ ನರಸಿಂಹನ ಆಳ್ವಿಕೆಯಲ್ಲಿ ಮಹಪ್ರಧಾನರೂ, ಹೆಗ್ಗಡೆಗಳೂ, ಶ್ರೀಕರಣ, ತಂತ್ರಾಧಿಕಾರಿಗಳೂ ಆಗಿದ್ದ ಗೋವಿಂದ, ನಾಕಣ, ಕಾಳಮಯ್ಯ ಮತ್ತು ಬೂಚಿರಾಜ ಇವರು ಕ್ರಮವಾಗಿ ಗೋವಿಂದೇಶ್ವರ, ನಾಕೇಶ್ವರ, ಕಾಳೇಶ್ವರ ಮತ್ತು ಬೂಚೇಶ್ವರ ದೇವಾಲಯಗಳನ್ನು ನಿರ್ಮಿಸಿದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಇವರಲ್ಲಿ ಬೂಚಿರಾಜನು ಒಂದನೇ ನರಸಿಂಹ ಮತ್ತು ಎರಡನೇ ಬಲ್ಲಾಳನ ಆಳ್ವಿಕೆಯ ಕಾಲಘಟ್ಟಗಳೆರಡರಲ್ಲೂ ಕಂಡು ಬರುತ್ತಾನೆ. ಈ ನಾಲ್ವರು ಸಹೋದರರೂ, ಮದ್ದಿಮಯ್ಯ ಮತ್ತು ಮಾಕವ್ವೆ ದಂಪತಿಗಳ ಸುಪುತ್ರರಾಗಿದ್ದರೆಂಬುದು ತಿಳಿದು ಬರುತ್ತದೆ.[28]

**ಗೋವಿಂದೇಶ್ವರ ದೇವಾಲಯ**

ಇದು ಗ್ರಾಮದ ಕೆರೆಯ ಏರಿಯ ಕೆಳಗೆ ದೇವಾಲಯಗಳ ಸಮುಚ್ಛಯದೊಳಗೆ ಕಂಡು ಬರುತ್ತದೆ. ಈ ದೇವಾಲಯವನ್ನು ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1160ರಲ್ಲಿ ತಂತ್ರಾಧಿಕಾರಿ ಮತ್ತು ಹೆಗ್ಗಡೆಯೂ ಆಗಿದ್ದ ಗೋವಿಂದನು (ಗೋವಿಂದಮಯ್ಯ) ನಿರ್ಮಾಣ ಮಾಡಿದನೆಂದು ಇಲ್ಲಿನ ಶಾಸನ[29] ತಿಳಿಸುತ್ತದೆ. ಈ ಶಾಸನವು ದೇವಾಲಯವನ್ನು "ದೃಢತರಾಧಿಷ್ಟಾನಬಂಧಬಂಧುರಮುಂ ವ್ರಿತ್ತಪರಿಣಾಹರಮಣೀಯ ಸ್ತಂಭಸಂಭೃತಮುಮೆನಿಪ ಶಂಕರಾವಾಸಮಂ ವಾಸವಸಮಾಣವಿಭಂ ವಿಭಾನುರೂಪದಿಂ" ಕೂಡಿದೆ ಎಂದು ವರ್ಣಿಸುತ್ತದೆ.[30] ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ತೆರೆದ ಸುಖನಾಸಿ, ನವರಂಗ ನಂತರ ಒಂದು ಚಿಕ್ಕಮಂಟಪ. ಇದರ ಮುಂಭಾಗದಲ್ಲಿ ಮತ್ತೊಂದು ಗುಡಿಯನ್ನು ಹೊಂದಿದೆ. ಬಹುಶಃ ಇದನ್ನು ಸೂರ್ಯನಿಗೋಸ್ಕರ ನಿರ್ಮಿಸಿದ್ದಿರಬಹುದು.[31] ಸೂರ್ಯಗುಡಿ ಮತ್ತು ಗೋವಿಂದೇಶ್ವರ ದೇವಾಲಯಗಳೆರಡೂ ಒಂದೇ ಮುಖಮಂಟಪವನ್ನು ಹೊಂದಿರುವುದರಿಂದ ಇದನ್ನು ದ್ವಿಕೂಟ ದೇವಾಲಯ ಎಂದು ಕರೆಯಬಹುದಾಗಿದೆ. ಇದೇ ಗ್ರಾಮದ ಬೂಚೇಶ್ವರ ದೇವಾಲಯವು ಕೂಡ ಇದೇ ರೀತಿಯ ರಚನೆಯನ್ನು ಹೊಂದಿದೆ.[32]

**ಗರ್ಭಗೃಹ ಮತ್ತು ಸುಖನಾಸಿ:** ಗರ್ಭಗುಡಿಯು 6x6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಚೌಕಾಕಾರದಲ್ಲಿದೆ. ಇದರಲ್ಲಿ ಯಾವುದೇ ಲಿಂಗ ಅಥವಾ ಶಿಲ್ಪಗಳು ಕಂಡು ಬರುವುದಿಲ್ಲ. ಇದರ

ಬಾಗಿಲುವಾಡವು ಸರಳವಾಗಿದ್ದು, ದ್ವಾರದ ಮೇಲ್ಭಾಗದ ಎರಡೂ ಪಾರ್ಶ್ವದಲ್ಲಿ ಇಳಿಬಿದ್ದಂತಿರುವ ಎರಡು ಗುಬುಟುಗಳ ರಚನೆಯಿದ್ದು, ಲಲಾಟದಲ್ಲಿ ಯಾವುದೇ ಶಿಲ್ಪಗಳ ಕೆತ್ತನೆ ಕಂಡು ಬರುವುದಿಲ್ಲ. ಗರ್ಭಗೃಹದ ನಂತರ ಸುಖನಾಸಿ ಭಾಗವು ಯಾವುದೇ ಇದು ದ್ವಾರವನ್ನು ಹೊಂದಿರದೆ ತೆರೆದುಕೊಂಡಿದ್ದು 6x6 ಅಡಿ ವಿಸ್ತೀರ್ಣವನ್ನು ಹೊಂದಿದೆ. ಇದರ ಮೇಲ್ಭಾಗದಲ್ಲಿ ಒಂದು ಹಂತವನ್ನು ಹೊಂದಿರುವ ನಾಭಿಛ್ಛಂಧ ಮಾದರಿಯ ವಿತಾನವಿದೆ.

**ನವರಂಗ**: ನವರಂಗವು 14x15 ಅಡಿ ಉದ್ದಗಲವನ್ನು ಹೊಂದಿದ್ದು ಇದರಲ್ಲಿ ನಾಲ್ಕು ಹೊಯ್ಸಳ ಶೈಲಿಯ ಶ್ರೀಕಾರ ಸ್ತಂಭಗಳಿವೆ. (ಚಿ.ಸಂ. 15) ಈ ಸ್ತಂಭಗಳು ಚತುರಶ್ರ ಪೀಠ, ನಾಲ್ಕು ಕೋನದ ದಿಂಡು, ಘಂಟಾಕಾರದ ದಿಂಡು, ಕಂಠ, ಫಲಕ ಮತ್ತು ಮುಷ್ಠಿಬಂಧ ಬೋದಿಗೆಯನ್ನು ಹೊಂದಿವೆ. ಹೆಸರೇ ಸೂಚಿಸುವಂತೆ ನವರಂಗವು ೯ ಅಂಕಣಗಳನ್ನು ಹೊಂದಿದ್ದು, ಮಧ್ಯದ ಅಂಕಣವನ್ನು ಹೊರತುಪಡಿಸಿ ಉಳಿದ ೮ ಅಂಕಣಗಳು ಎರಡು ಹಂತಗಳನ್ನು ಹೊಂದಿರುವ ನಾಭಿಛ್ಛಂಧ ಮಾದರಿಯ ವಿತಾನವನ್ನು ಹೊಂದಿವೆ. ದಕ್ಷಿಣ ದಿಕ್ಕಿನ ವಿತಾನದ ಫಲಕದಲ್ಲಿ ಹಾರವನ್ನು ಹಿಡಿದಿರುವ ವಿದ್ಯಾಧರ ಶಿಲ್ಪ ಮತ್ತು ಉತ್ತರ ದಿಕ್ಕಿನ ವಿತಾನದಲ್ಲಿ ಗರುಡ ಶಿಲ್ಪವನ್ನು ಕೆತ್ತಿರುವುದನ್ನು ನೋಡಬಹುದು. ಉಳಿದ ಭುವನೇಶ್ವರಿಗಳು ಸರಳವಾದ ಶತಾತಪತ್ರ ಪದ್ಮರಚನೆಯನ್ನು ಹೊಂದಿವೆ. ಮಧ್ಯದಂಕಣದ ಭುವನೇಶ್ವರಿಯು ಮೂರು ಹಂತಗಳನ್ನು ಹೊಂದಿದ್ದು, ಮಧ್ಯಭಾಗದ ಶಿಲಾಫಲಕದಲ್ಲಿ ತಾಂಡವೇಶ್ವರನ ಸುತ್ತಲೂ ಸಂಗೀತಗಾರರು ಮತ್ತು ವಾದ್ಯವೃಂದದವರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಭುವನೇಶ್ವರಿಯ ಕೆಳಭಾಗದ ತೊಲೆಗಳ ಮೇಲೆ ಕೀರ್ತಿಮುಖಗಳ ರಚನೆಯನ್ನು ಗುರುತಿಸಬಹುದು. ನವರಂಗದಲ್ಲಿ ಇನ್ಯಾವುದೇ ಕೋಷ್ಠಗಳು, ಶಿಲ್ಪಗಳು ಕಂಡು ಬರುವುದಿಲ್ಲ. ಹಾಗೂ ಭಿತ್ತಿಗೆ ಹೊಂದಿಕೊಂಡಂತಿರುವ ಸ್ತಂಭಗಳನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ. ನವರಂಗದ ದ್ವಾರವು ಆಕರ್ಷಕವಾಗಿದ್ದು, ವಜ್ರ, ವಲ್ಲೀ, ಸ್ತಂಭ, ವಲ್ಲೀ ಮತ್ತೊಂದು ಅಲಂಕಾರಿಕ ಕೆತ್ತನೆಯಿರುವ ಶಾಖೆಯನ್ನು ಒಳಗೊಂಡಂತೆ ಒಟ್ಟು ಪಂಚಶಾಖೆಗಳನ್ನು ಹೊಂದಿದೆ. ಇದರ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಹಾಗೂ ಇದರ ಮೇಲ್ಭಾಗದಲ್ಲಿ ಎರಡೂ ಪಾರ್ಶ್ವಗಳಲ್ಲಿ ಮುಂದಿನ ಎರಡು ಕಾಲುಗಳನ್ನು ಎತ್ತಿ ನಿಂತಿರುವ ಸಿಂಹಗಳ ಶಿಲ್ಪಗಳನ್ನು ಕೆತ್ತಲಾಗಿದೆ. ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತ ಶೈವ ದ್ವಾರಪಾಲಕರಿದ್ದಾರೆ. ಜೊತೆಗೆ ಮಹಿಳಾ ಪರಿಚಾರಕಿಯರೂ ಇದ್ದಾರೆ. ಈ ದ್ವಾರಪಾಲಕರು ಹಿಂಬದಿಯ ಎರಡು ಕೈಗಳಲ್ಲಿ ತ್ರಿಶೂಲ ಮತ್ತು ಢಮರನ್ನು ಹಿಡಿದಿದ್ದು ಮುಂದಿನ ಒಂದು ಕೈ ಅಭಯ ಹಸ್ತವನ್ನು ಹೊಂದಿದ್ದು, ಇನ್ನೊಂದು ಕೈಯಲ್ಲಿ ಗದೆಯನ್ನು ಹಿಡಿದಿದ್ದಾರೆ. ಈ ದ್ವಾರಪಾಲಕರ ಸುತ್ತಲೂ ಆಕರ್ಷಕವಾದ ಸುರುಳಿ

ಕೆತ್ತನೆಗಳನ್ನು ಮಾಡಲಾಗಿದೆ. ನವರಂಗದ ಮುಂದೆ ಉತ್ತರ ಮತ್ತು ದಕ್ಷಿಣ ದಿಕ್ಕಿನ ಎರಡೂ ಕಡೆ ಪ್ರವೇಶವಿರುವ ಒಂದು ಮಂಟಪವಿದ್ದು ಇದರ ಭುವನೇಶ್ವರಿಯನ್ನು ಅತ್ಯಾಕರ್ಷಕವಾಗಿ ನಿರ್ಮಿಸಲಾಗಿದೆ. (ಚಿ.ಸಂ. 16) ಕೆಳಭಾಗದಲ್ಲಿ ಚತುರಶ್ರವಾಗಿರುವ ಈ ಭುವನೇಶ್ವರಿಯು ಒಳಹೋಗುತ್ತಾ ಅಷ್ಟಕೋನಾಕೃತಿಯನ್ನು ಹೊಂದಿದೆ. ಇದು ಸುಮಾರು 3 ಅಡಿ ಆಳಕ್ಕೆ ಒಳಸರಿದಿದ್ದು, ಇದರಲ್ಲಿ ದಿಕ್ಕಿಗನುಗುಣವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ.[33] ಗೋವಿಂದೇಶ್ವರ ದೇವಾಲಯದ ಮುಖಮಂಟಪವನ್ನು ಹಂಚಿಕೊಂಡು, ಸುಖನಾಸಿ ಮತ್ತು ಗರ್ಭಗುಡಿಯನ್ನು ಹೊಂದಿರುವ ಮತ್ತೊಂದು ಭಾಗವು ಕಂಡು ಬರುತ್ತದೆ. ಬಹುಶಃ ಇದನ್ನು ಸೂರ್ಯನಿಗಾಗಿ ನಿರ್ಮಿಸಿದ್ದಿರಬಹುದು.[34] ಇದರ ಗರ್ಭಗುಡಿ ಮತ್ತು ಸುಖನಾಸಿ ಎರಡೂ ಕೂಡ 6.5X6.5 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಯಾವುದೇ ಶಿಲ್ಪಗಳಿಲ್ಲದೆ ಸರಳವಾಗಿವೆ. ಇದರ ಸುಖನಾಸಿ ದ್ವಾರವನ್ನು ಅತ್ಯಾಕರ್ಷಕವಾಗಿ ನಿರ್ಮಿಸಲಾಗಿದೆ. ದ್ವಾರಬಂಧವು ವಲ್ಲೀಶಾಖೆ, ಸ್ತಂಭಶಾಖೆ ಮತ್ತು ಜಾಲಾಂಧ್ರಗಳನ್ನು ಹೊಂದಿದ್ದು ಲಲಾಟದಲ್ಲಿ ಸೂರ್ಯಶಿಲ್ಪವಿದೆ. ಇದರ ಮೇಲ್ಭಾಗದಲ್ಲಿ ಪದ್ಮದ ರಚನೆಯನ್ನು ಮಾಡಿದ್ದು ಈ ಪದ್ಮದ ಎರಡೂ ಪಾರ್ಶ್ವದಲ್ಲಿ ಎರಡೆರಡು ಶಿಖರದ ಮಾದರಿಗಳನ್ನು ನಿರ್ಮಿಸಿದ್ದಾರೆ. ದ್ವಾರದ ಎರಡೂ ಪಾರ್ಶ್ವದಲ್ಲಿ ರತಿ–ಮನ್ಮಥರ ಶಿಲ್ಪಗಳೊಂದಿಗೆ ಪೂರ್ಣ ಕುಂಭಗಳನ್ನು ಕೆತ್ತಲಾಗಿದೆ. (ಚಿ.ಸಂ. 17) ಈ ರೀತಿಯ ರಚನೆಯನ್ನು ಪ್ರಾರಂಭದ ಕಲ್ಯಾಣಿ ಚಾಳುಕ್ಯರ ದೇವಾಲಯಗಳು ಮತ್ತು ಜಿನಾಲಯಗಳಲ್ಲಿ ಕಾಣಬಹುದೆಂದು ಷ. ಶೆಟ್ಟರ್‌ರವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.[35]

**ಅಧಿಷ್ಠಾನ ಮತ್ತು ಭಿತ್ತಿ**: ಅಧಿಷ್ಠಾನವು 3 ಅಡಿ ಎತ್ತರವನ್ನು ಹೊಂದಿದ್ದು ಉಪಾನ, ಜಗತಿ,, ಪದ್ಮ, ಗಳ, ತ್ರಿಪಟ್ಟ ಕುಮುದ, ಗಳ ಮತ್ತು ಪ್ರತೀ ಭಾಗಗಳನ್ನು ಹೊಂದಿದ್ದು ಉಪಾನ ಭಾಗವು ಭೂಮಿಯಲ್ಲಿ ಮುಚ್ಚಿಹೋಗಿರುತ್ತದೆ. ಈ ದೇವಾಲಯದ ಎರಡೂ ಗರ್ಭಗುಡಿಯ ಉತ್ತರ ದಿಕ್ಕಿನ ಅಧಿಷ್ಠಾನದಲ್ಲಿ ಮಕರಮುಖ ಪ್ರಣಾಳಗಳನ್ನು ನಿರ್ಮಿಸಿದ್ದಾರೆ. ಭಿತ್ತಿಯು ಕೋಷ್ಠಪಂಜರಗಳು, ಸ್ತಂಭ ಪಂಜರಗಳು ಮತ್ತು ಬ್ರಹ್ಮಕಾಂತ ಭಿತ್ತಿಪಾದಗಳಿಂದ ಅಲಂಕೃತವಾಗಿದ್ದು ಕೋಷ್ಠಗಳಲ್ಲಿ ಪದ್ಮರಚನೆಯನ್ನು ಮೂಡಿಸಿರುತ್ತಾರೆ. (ಚಿ.ಸಂ. 18) ಭಿತ್ತಿಯ ನಂತರ ಪ್ರಸ್ತರ ಭಾಗದಲ್ಲಿ ಉತ್ತರ, ವಾಜನ, ಕಪೋತ ಭಾಗಗಳು ಕಂಡು ಬರುತ್ತವೆ. ಸುಮಾರು ಎರಡು ಅಡಿ ಎತ್ತರದ ಕೈಪಿಡಿ ಗೋಡೆಯನ್ನು ಹೊಂದಿರುವ ಈ ದೇವಾಲಯದಲ್ಲಿ ಶಿಖರವು ಕಂಡು ಬರುವುದಿಲ್ಲ. ದ್ವಿಕೂಟಾಚಲವಾಗಿರುವ ಈ ದೇವಾಲಯದ ಮುಖಮಂಟಪದಲ್ಲಿ ಛಾವಣಿಗೆ ಆಸರೆಯಾಗಿ ಆರು ಅಲಂಕಾರಿಕ ಭಿತ್ತಿಸ್ತಂಭಗಳು ಮತ್ತು ಎರಡು ಸುಂದರವಾದ ಸ್ವತಂತ್ರ ಸ್ತಂಭಗಳು ಕಂಡು ಬರುತ್ತವೆ.

**ನಾಕೇಶ್ವರ ದೇವಾಲಯ**

ಈ ದೇವಾಲಯವು ಗೋವಿಂದೇಶ್ವರ ದೇವಾಲಯದ ದಕ್ಷಿಣ ದಿಕ್ಕಿನಲ್ಲಿ ನಿರ್ಮಾಣವಾಗಿರುತ್ತದೆ. (ಚಿ.ಸಂ. 19) ಈ ದೇವಾಲಯ ನಿರ್ಮಾಣದ ಬಗ್ಗೆ ಇದೇ ಗ್ರಾಮದ ಕ್ರಿ.ಶ.12ನೇ ಶತಮಾನಕ್ಕೆ ಹೊಂದಿಕೆಯಾಗುವ ಶಾಸನವೊಂದು ತಿಳಿಸುತ್ತದೆ.[36] ಈ ಶಾಸನದಲ್ಲಿ ಸ್ಪಷ್ಟವಾದ ಕಾಲಮಾನ ಕಂಡುಬರದೇ ಇದ್ದರೂ ಸಹ, ಇದರಲ್ಲಿ ಒಂದನೇ ನರಸಿಂಹನವರೆಗಿನ ಹೊಯ್ಸಳ ವಂಶಾವಳಿಯನ್ನು ವರ್ಣಿಸಿರುವುದರಿಂದ ಇದು ಒಂದನೇ ನರಸಿಂಹನ ಆಳ್ವಿಕೆಯಲ್ಲಿ ನಿರ್ಮಾಣವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಶಾಸನ ಪಠ್ಯದ ಆಧಾರದ ಮೇಲೆ ಒಂದನೇ ನರಸಿಂಹನ ಆಳ್ವಿಕೆಯಲ್ಲಿ ಮಹಾಪ್ರಧಾನ, ಶ್ರೀಕರಣ ಮತ್ತು ತಂತ್ರಾಧಿಕಾರಿಯಾಗಿದ್ದ ನಾಕಣ (ನಾಕಿಮಯ್ಯ) ಸೀಗೆನಾಡಿನ ಅಗ್ರಹಾರವಾದ ಕೋರವಂಗಲದಲ್ಲಿ ನಾಕೇಶ್ವರ ದೇವಾಲಯವನ್ನು ನಿರ್ಮಿಸಿದನೆಂಬುದು ತಿಳಿದು ಬರುತ್ತದೆ. ಈ ದೇವಾಲಯವು ಪೂರ್ವಾಭಿಮುಖವಾಗಿ ನಿರ್ಮಾಣವಾಗಿದ್ದು ಗರ್ಭಗುಡಿ, ತೆರೆದ ಸುಖನಾಸಿ ಮತ್ತು ನವರಂಗ ಭಾಗಗಳನ್ನು ಒಳಗೊಂಡಿದೆ.[37]

**ಗರ್ಭಗೃಹ ಮತ್ತು ಸುಖನಾಸಿ**: ಗರ್ಭಗೃಹವು ಚೌಕಾಕಾರವಾಗಿದ್ದು 5x5 ಅಡಿ ವಿಸ್ತೀರ್ಣವನ್ನು ಹೊಂದಿದೆ. ಇದರಲ್ಲಿ ಲಿಂಗವಾಗಲೀ ಅಥವಾ ಇತರೆ ಯಾವುದೇ ಶಿಲ್ಪವಾಗಲಿ ಕಂಡು ಬರದೇ ತೀರಾ ಸರಳವಾಗಿದೆ. ಇದರ ಬಾಗಿಲುವಾಡವು ಸಹ ಯಾವುದೇ ಅಲಂಕಾರಿಕ ಕೆತ್ತನೆಗಳನ್ನು ಮತ್ತು ಲಲಾಟದಲ್ಲಿ ಶಿಲ್ಪವನ್ನು ಹೊಂದಿರದೇ ಸರಳವಾಗಿದೆ. ಗರ್ಭಗುಡಿಯ ನಂತರ ಸುಖನಾಸಿಯು ಕಂಡು ಬಂದಿದ್ದು 5x5 ಅಡಿ ವಿಸ್ತೀರ್ಣವನ್ನು ಹೊಂದಿದೆ. ಇದರ ದ್ವಾರಬಂಧವು ಸರಳವಾಗಿದ್ದು ದ್ವಾರದ ಎರಡೂ ಪಾರ್ಶ್ವದಲ್ಲಿ ಜಾಲಾಂಧ್ರಗಳಿವೆ.

**ನವರಂಗ**: ಸುಖನಾಸಿಯ ನಂತರ 11x12 ಅಡಿ ಉದ್ದಗಲವನ್ನು ಹೊಂದಿರುವ ನಾಲ್ಕು ಸ್ತಂಭಗಳ ನವರಂಗವು ಕಂಡು ಬಂದಿದ್ದು, ಇದರ ಎಲ್ಲಾ ಭುವನೇಶ್ವರಿಗಳೂ ಸಹ ಸರಳವಾದ ನಾಭಿಚ್ಛಂಧ ಮಾದರಿಯನ್ನು ಹೊಂದಿವೆ. ನವರಂಗದ ಸ್ತಂಭಗಳು ಪೀಠ, ಚತುರಶ್ರವಾದ ದಿಂಡು, 16 ಕೋನ, ಅಷ್ಟಕೋನ, 16 ಕೋನ, ಚತುರಶ್ರವಾದ ದಿಂಡು, ಕಂಠ, ಮಂಡಿ ಫಲಕ ಮತ್ತು ಬೋದಿಗೆಯನ್ನು ಹೊಂದಿವೆ. (ಚಿ.ಸಂ. 20) ನವರಂಗದ ದ್ವಾರವು ಸರಳ ರಚನೆಯನ್ನು ಹೊಂದಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ಅಧಿಷ್ಠಾನವು ಎರಡು ಅಡಿ ಎತ್ತರ ಮತ್ತು ಉಪಾನ, ಜಗತಿ, ಪದ್ಮ, ಗಳ ಮತ್ತು ಪ್ರತೀ ಭಾಗಗಳನ್ನು ಹೊಂದಿದ್ದು ಮಂಚಬಂಧ ಮಾದರಿಯದ್ದಾಗಿದೆ. ಅಧಿಷ್ಠಾನದ

ಉಪಾನ ಭಾಗವು ಭೂಮಿಯಲ್ಲಿ ಮುಚ್ಚಿ ಹೋಗಿದ್ದು ಗರ್ಭಗೃಹದ ಉತ್ತರ ದಿಕ್ಕಿನ ಅಧಿಷ್ಠಾನ ಭಾಗದಲ್ಲಿ ಸರಳವಾದ ಪ್ರಣಾಳವಿದೆ. ಭಿತ್ತಿಯು ಸರಳವಾಗಿದ್ದು ಇದರಲ್ಲಿ ಬ್ರಹ್ಮಕಾಂತ ಭಿತ್ತಿ, ಪಾದಗಳನ್ನು ನಿರ್ಮಿಸಲಾಗಿದೆ. (ಚಿ.ಸಂ. 21) ಭಿತ್ತಿಯ ನಂತರ ಉತ್ತರ, ವಾಜನ ಮತ್ತು ಕಪೋತ ಭಾಗಗಳಿವೆ. ಈ ದೇವಾಲಯಕ್ಕೆ ಸುಮಾರು ಎರಡು ಅಡಿ ಎತ್ತರದ ಕೈಪಿಡಿ ಗೋಡೆಯನ್ನು ಇತ್ತೀಚಿನ ದಿನಗಳಲ್ಲಿ ನಿರ್ಮಿಸಲಾಗಿದೆ. ಒಟ್ಟಿನಲ್ಲಿ ಈ ನಾಕೇಶ್ವರ ದೇವಾಲಯವು ಯಾವುದೇ ಅಲಂಕರಣಗಳನ್ನು ಮತ್ತು ವಿಶೇಷವಾದ ವಾಸ್ತುಶಿಲ್ಪದ ಲಕ್ಷಣಗಳನ್ನು ಹೊಂದಿರದೇ ಸರಳವಾಗಿದೆ ಎಂದು ಹೇಳಬಹುದಾಗಿದೆ.

**ನಾಕೇಶ್ವರ ದೇವಾಲಯದ ಮುಂದಿನ ಮಂಟಪ:** ಈ ಮಂಟಪವು ಮೂರುವರೆ ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದ್ದು ಇದರಲ್ಲಿ ಉಪಾನ, ಜಗತಿ, ಚತುರಶ್ರ ಕುಮುದ, ಪಟ್ಟಿಕಾ ಮತ್ತು ಕಪೋತ ಭಾಗಗಳು ಕಂಡು ಬರುತ್ತವೆ.[38] ಈ ಅಧಿಷ್ಠಾನದ ಸುತ್ತಲೂ ಕೆಲವು ಆಯ್ದ ಸ್ಥಳಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದ್ದು ಅವುಗಳಲ್ಲಿ ಭೈರವ, ನಟರಾಜ, ವೇಣುಗೋಪಾಲ, ಅನಂತ ಶಯನ, ಯಕ್ಷ-ಯಕ್ಷಿಯರ ಶಿಲ್ಪಗಳನ್ನು ಪ್ರಮುಖವಾಗಿ ಹೆಸರಿಸಬಹುದು. ಈ ಶಿಲ್ಪಗಳ ಮೇಲೆ ಕೆಲವು ಸುರುಳಿ-ಕೆತ್ತನೆಗಳನ್ನು ಮತ್ತು ಕೀರ್ತಿಮುಖಗಳನ್ನು ಕೆತ್ತಿರುವುದನ್ನು ಗಮನಿಸಬಹುದು. ಈ ಮಂಟಪಕ್ಕೆ ಪ್ರವೇಶಿಸಲು ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ಸೋಪಾನಗಳಿದ್ದು ಇವುಗಳ ಎರಡೂ ಪಾರ್ಶ್ವದಲ್ಲಿ ಕೋಷ್ಠಗಳನ್ನು ಮತ್ತು ಇವುಗಳ ಮೇಲೆ ದ್ರಾವಿಡ ಶೈಲಿಯ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದೆ. (ಚಿ.ಸಂ. 22) ಆದರೆ ಈ ನಾಲ್ಕು ಕೋಷ್ಠಗಳ ಒಳಗೆ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ. ಈ ಮಂಟಪವು ಲೇತ್ ಯಂತ್ರದಿಂದ ನಿರ್ಮಿಸಿದ 24 ಶ್ರೀಕಾರ ಸ್ತಂಭಗಳನ್ನು ಮತ್ತು 13 ಆಕರ್ಷಕ ಭುವನೇಶ್ವರಿಗಳನ್ನು ಒಳಗೊಂಡಿದೆ.[39] ಈ ಸ್ತಂಭಗಳಲ್ಲಿ ಕೆಲವು ಪೂರ್ಣ ಸ್ತಂಭಗಳಾಗಿದ್ದರೆ, ಕೆಲವು ಅರ್ಧ ಸ್ತಂಭಗಳಾಗಿದ್ದು, ಇವುಗಳನ್ನು ಕಕ್ಷಾಸನದ ಮೇಲೆ ನಿಲ್ಲಿಸಲಾಗಿದೆ. ಪೂರ್ಣ ಸ್ತಂಭಗಳು ಪೀಠ, ಚತುರಶ್ರವಾದ ದಿಂಡು, ಘಂಟಾಕಾರದ ದಿಂಡು, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ, ಬೋದಿಗೆಯನ್ನು ಹೊಂದಿವೆ. ಅರ್ಧ ಸ್ತಂಭಗಳು ಸಹ ಪೀಠವನ್ನು ಹೊರತುಪಡಿಸಿ ಇನ್ನುಳಿದ ಎಲ್ಲಾ ಭಾಗಗಳನ್ನು ಒಳಗೊಂಡಿವೆ. ಈ ಮಂಟಪದ ಮಧ್ಯದ ಭುವನೇಶ್ವರಿಯು ಆಕರ್ಷಕವಾಗಿದ್ದು 3 ಹಂತಗಳನ್ನು ಹೊಂದಿದೆ. ಹಾಗೂ ಇದರಲ್ಲಿ ದಿಕ್ಕಿಗನುಗುಣವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನೂ ಸಹ ಕೆತ್ತಲಾಗಿದ್ದು ಇದರ ಒಳಭಾಗದಲ್ಲಿ ಅಲಂಕಾರಿಕ ಕೆತ್ತನೆಗಳಿವೆ. ಈ ಮಂಟಪದ ಅಧಿಷ್ಠಾನದ ಮೇಲ್ಭಾಗದಲ್ಲಿ ಕುಳಿತುಕೊಳ್ಳಲು ಸುತ್ತಲೂ ಕಕ್ಷಾಸನಗಳನ್ನು ನಿರ್ಮಿಸಿದ್ದು ಇವುಗಳ ಹಿಂಬದಿಯಲ್ಲಿ ಪುಷ್ಪಪತ್ರಾಲಂಕಾರ, ಸುರುಳಿ ಕೆತ್ತನೆಗಳನ್ನು ಮಾಡಿದ್ದಾರೆ. ಈ ಮಂಟಪದ

ಛಾವಣಿಯು ಛಾದ್ಯ ಮತ್ತು ಕಪೋತ ಭಾಗಗಳನ್ನು ಒಳಗೊಂಡಿದೆ.[40] ಒಟ್ಟಿನಲ್ಲಿ ನಾಕೇಶ್ವರ ಮತ್ತು ಗೋವಿಂದೇಶ್ವರ ದೇವಾಲಯಗಳ ಸಮುಚ್ಚಯದಲ್ಲಿ ಕಂಡುಬರುವ ಈ ತೆರೆದ ಮಂಟಪವು ಪ್ರಮುಖ ಆಕರ್ಷಣೀಯ ಭಾಗವೆಂದೇ ಹೇಳಬಹುದು.

**ರಸ್ತೆಯ ಬಳಿ ಇರುವ ಮುಖಮಂಟಪ ಮತ್ತು ದೇವಾಲಯದ ಅವಶೇಷಗಳು**: ಗೋವಿಂದೇಶ್ವರ ಮತ್ತು ನಾಕೇಶ್ವರ ದೇವಾಲಯಗಳಿಗೆ ಹೋಗುವುದಕ್ಕೆ ಮುಂಚೆ ರಸ್ತೆ ಬದಿಯಲ್ಲಿ ಒಂದು ಮುಖಮಂಟಪ (ಚಿ.ಸಂ. 23) ಮತ್ತು ಒಳಭಾಗದಲ್ಲಿ 7 ಸ್ತಂಭಗಳನ್ನು ಹೊಂದಿರುವ ಒಂದು ಹಜಾರದ ರೀತಿಯ ನಿರ್ಮಾಣ ಕಂಡು ಬರುತ್ತದೆ. (ಚಿ.ಸಂ. 24) ಈ ಭಾಗವು ದೇವಾಲಯದ್ದೋ ಅಥವಾ ಪ್ರಾಕಾರದ್ದೋ ಎಂಬುದನ್ನು ಗ್ರಹಿಸಲು ಕಷ್ಟಸಾಧ್ಯವಾಗುತ್ತದೆ. ರಸ್ತೆಬದಿಯ ಈ ಮುಖಮಂಟಪವು ನಾಲ್ಕು ಶ್ರೀಕಾರ ಸ್ತಂಭಗಳನ್ನು ಹೊಂದಿದ್ದು ಇದರ ಪಶ್ಚಿಮ ದಿಕ್ಕಿನ ತೊಲೆಯ ಮೇಲೆ ಒಂದು ಶಾಸನ ಕಂಡು ಬರುತ್ತದೆ. ಕ್ರಿ.ಶ.1174ರ ಕಾಲಮಾನದ ಈ ಶಾಸನವು ಹೆರಗಿನ ಬಾಚರಸ ಹೆಗ್ಗಡೆ ಎಂಬಾತನು ಗೋವಿಂದೇಶ್ವರ ದೇವಾಲಯದ ನಂದಾದೀಪಕ್ಕೆ ಮತ್ತು ಅಭ್ಯಂಗನ ಸ್ನಾನಕ್ಕೆ ಒಂದು ಕೈಗಾಣವನ್ನು ಸುಂಕ ಪರಿಹಾರವಾಗಿ ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ.[41] ಈ ಮುಖಮಂಟಪದ ನಂತರ ಒಂದು ದ್ವಾರವಿದ್ದು, ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತ ಶೈವ ದ್ವಾರಪಾಲಕರಿದ್ದಾರೆ. ಈ ಶಿಲ್ಪಗಳು ಭಾಗಶಃ ನಶಿಸಿಹೋಗಿದ್ದು ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಈ ದ್ವಾರವನ್ನು ಪ್ರವೇಶಿಸಿದ ತಕ್ಷಣ ಉತ್ತರ-ದಕ್ಷಿಣವಾಗಿ ಒಂದು ಹಜಾರದ ರೀತಿಯ ನಿರ್ಮಾಣವಿದೆ. ಇದರಲ್ಲಿ ಪೀಠ, ಚೌಕಾಕಾರದ ದಿಂಡು, ವೃತ್ತಾಕಾರದ ದಿಂಡು, ಕಂಠ, ಮಂಡಿ ಫಲಕ ಮತ್ತು ಬೋದಿಗೆಯನ್ನು ಹೊಂದಿರುವ 7 ಸ್ತಂಭಗಳು ಈ ಹಜಾರದ ಛಾವಣಿಗೆ ಆಸರೆಯಾಗಿ ನಿಂತಿವೆ.[42]

**ಗೋವಿಂದೇಶ್ವರ, ನಾಕೇಶ್ವರ ದೇವಾಲಯಗಳು**: ತೆರೆದ ಮಂಟಪ ಮತ್ತು ರಸ್ತೆಬದಿಯ ಮುಖಮಂಟಪ ಇವುಗಳನ್ನು ಗಮನಿಸಿದಾಗ ಇದೊಂದು ದೇವಾಲಯ ಸಮುಚ್ಚಯದಂತೆ ಕಂಡು ಬರುತ್ತದೆ. ದೇವಾಲಯದ ಕೆಲವು ಅವಶೇಷಗಳನ್ನು ಗೋವಿಂದೇಶ್ವರ ದೇವಾಲಯದ ಪಕ್ಕದಲ್ಲಿ ರಾಶಿ ಹಾಕಿರುವುದರಿಂದ ಹಾಗೂ ಕೆಲವು ಸ್ತಂಭಗಳ ಘಂಟಾಕಾರದ ದಿಂಡಿನ ಭಾಗ, ಕಂಠಭಾಗ ಮತ್ತು ಇನ್ನಿತರ ಭಾಗಗಳು ಎಲ್ಲೆಂದರಲ್ಲಿ ಬಿದ್ದಿರುವುದರಿಂದ ಇಲ್ಲಿ ಯಾವುದೋ ದೇವಾಲಯ ಅಥವಾ ದೇವಾಲಯದ ಇನ್ನಿತರ ಭಾಗ ನಾಶವಾಗಿರಬಹುದೆಂದು ಅಭಿಪ್ರಾಯಿಸಬಹುದಾಗಿದೆ. ಗೋವಿಂದೇಶ್ವರ ಮತ್ತು ನಾಕೇಶ್ವರ ದೇವಾಲಯಗಳ ಗರ್ಭಗುಡಿಯಲ್ಲಿ ಅಥವಾ ದೇವಾಲಯದ ಇನ್ಯಾವುದೇ ಭಾಗದಲ್ಲಿ ಪೂಜಾರಾಧನೆಗೆ

ಒಳಪಡುವ ಅಂಗಗಳಾಗಲೀ ಅಥವಾ ಶಿಲ್ಪಗಳಾಗಲೀ ಕಂಡು ಬರದೇ ಇರುವುದರಿಂದ ಗ್ರಾಮಸ್ಥರು ಇವುಗಳ ಬಗ್ಗೆ ಆಸಕ್ತಿ ಹೊಂದಿರುವುದಿಲ್ಲ.[43] ಗ್ರಾಮದ ಜನರು ಈ ದೇವಾಲಯಗಳಿಗೆ ಭೇಟಿ ನೀಡುವುದು ಕಡಿಮೆಯಾಗಿರುವುದರಿಂದ ಇವು ಹಾವುಗಳ ಆವಾಸಸ್ಥಾನವಾಗಿದೆಯೆಂದೇ ಹೇಳಬಹುದು. ಏಕೆಂದರೆ ದೇವಾಲಯದ ಗರ್ಭಗುಡಿ, ಸ್ತಂಭಗಳ ಬೋದಿಗೆ ಭಾಗ ಹಾಗೂ ಇನ್ನಿತರ ಭಾಗಗಳಲ್ಲಿ ಹಾವುಗಳು ಪೊರೆ ಕಳಚಿರುವುದು ಕಾಣಸಿಗುತ್ತವೆ. ಒಟ್ಟಿನಲ್ಲಿ ಹೊಯ್ಸಳರ ಕಲೆ ಮತ್ತು ವಾಸ್ತುಶಿಲ್ಪದ ಅಧ್ಯಯನ ದೃಷ್ಟಿಯಿಂದ ಇಲ್ಲಿನ ದೇವಾಲಯಗಳು ಮತ್ತು ಇನ್ನಿತರ ರಚನೆಗಳು ಪ್ರಾಮುಖ್ಯತೆ ಪಡೆದಿದ್ದು ರಾಜ್ಯ ಪುರಾತತ್ವ ಇಲಾಖೆಯವರು ಇವುಗಳನ್ನು ಜೀರ್ಣೋದ್ಧಾರ ಮಾಡಿ ಸಂರಕ್ಷಿಸಿದ್ದಾರೆಂಬುದು ತಿಳಿದು ಬರುತ್ತದೆ.

**ಗೊರೂರು**

ಗೊರೂರು ಗ್ರಾಮವು ಹಾಸನ ನಗರದಿಂದ ದಕ್ಷಿಣಕ್ಕೆ ಹಾಸನ-ಅರಕಲಗೂಡು ರಸ್ತೆಯಲ್ಲಿ 25 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ 10 ಶಾಸನಗಳು ಮತ್ತು ತ್ರಿಕೂಟೇಶ್ವರ, ಕೈಲಾಸೇಶ್ವರ, ವಾಸುದೇವ ಮತ್ತು ಯೋಗಾನರಸಿಂಹ ಎಂಬ ದೇವಾಲಯಗಳು ಕಂಡು ಬರುತ್ತವೆ. ಇವುಗಳಲ್ಲಿ ತ್ರಿಕೂಟೇಶ್ವರ ಮತ್ತು ಕೈಲಾಸೇಶ್ವರ ದೇವಾಲಯಗಳು ಹೊಯ್ಸಳರ ಆಳ್ವಿಕೆಯ ಕಾಲಾವಧಿಯಲ್ಲಿ ನಿರ್ಮಾಣವಾಗಿರುತ್ತವೆ. ಈ ಗೊರೂರು ಗ್ರಾಮವು ಹೊಯ್ಸಳರ ಆಳ್ವಿಕೆಯಲ್ಲಿ ಒಂದು ಪ್ರಮುಖ ಅಗ್ರಹಾರವಾಗಿತ್ತೆಂಬುದು ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ. ಇಲ್ಲಿ ಹೇಮಾವತಿ ನದಿಗೆ ಅಡ್ಡಲಾಗಿ ಜಲಾಶಯವನ್ನು ನಿರ್ಮಿಸಲಾಗಿದ್ದು, ಇದು ಪ್ರವಾಸೀ ಕೇಂದ್ರವೂ ಸಹ ಆಗಿದೆ. ಪ್ರಾಚೀನ ಕಾಲದಲ್ಲಿ ಈ ಗ್ರಾಮವನ್ನು ಶತರುದ್ರಿಯಪುರ ಎಂಬ ಹೆಸರಿನಿಂದ ಕರೆಯುತ್ತಿದ್ದರೆಂಬುದು ತಿಳಿದು ಬರುತ್ತದೆ.

**ತ್ರಿಕೂಟೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ, ತ್ರಿಕೂಟಾಚಲ ಮಾದರಿಯಲ್ಲಿ ಕಂಡು ಬಂದಿದ್ದು, (ಚಿ.ಸಂ. 25) ಹೊಯ್ಸಳ ಒಂದನೇ ನರಸಿಂಹ ಆಳ್ವಿಕೆಯ ಕಾಲದಲ್ಲಿ ಸುರಿಗೆಯ ವಿಜಯಾದಿತ್ಯ ಹೆಗ್ಗಡೆಯು ಕ್ರಿ.ಶ.1167ರಲ್ಲಿ ಶತರುದ್ರಿಯಪುರವಾದ ಗೊರೂರಿನಲ್ಲಿ ತ್ರಿಕೂಟೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ಅಂಶವನ್ನು ಇಲ್ಲಿನ ಶಾಸನ ತಿಳಿಸುತ್ತದೆ.[44] ಈ ದೇವಾಲಯದ ವಿವಿಧ ಭಾಗಗಳಲ್ಲಿ ಮೇಲೆ ಹೆಸರಿಸಿದ ಶಾಸನವೂ ಸೇರಿದಂತೆ ಒಟ್ಟು ಐದು ಶಾಸನಗಳು ಕಂಡು ಬಂದಿದ್ದು ಈ ಐದೂ ಶಾಸನಗಳು ಈ

ತ್ರಿಕೂಟೇಶ್ವರ ದೇವಾಲಯ ನಿರ್ಮಾಣದ ಬಗ್ಗೆ ತಿಳಿಸುತ್ತವೆ.[45] ಈ ದೇವಾಲಯವು ಮೂರು ಗರ್ಭಗುಡಿಗಳು, ಮೂರು ತೆರೆದ ಸುಖನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ.[46, 47]

**ಪಶ್ಚಿಮ ದಿಕ್ಕಿನ ಗರ್ಭಗೃಹ ಮತ್ತು ಸುಖನಾಸಿ:** ಇದು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರಲ್ಲಿ ಎರಡು ಅಡಿ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದೆ.ಇದರ ವಿತಾನವು ಒಂದು ಹಂತವನ್ನು ಹೊಂದಿರುವ ನಾಭಿಚ್ಛಂಧ ಮಾದರಿಯದ್ದಾಗಿದ್ದು ಮಧ್ಯಭಾಗದಲ್ಲಿ ಶತಾತಪತ್ರ ಪದ್ಮ ರಚನೆ ಕಂಡು ಬರುತ್ತದೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಇದರ ಎರಡೂ ಪಾರ್ಶ್ವದಲ್ಲಿ ಇಳಿಬಿದ್ದಂತೆ ಗುಬುಟುಗಳನ್ನು ಕೆತ್ತಲಾಗಿದೆ. ಗರ್ಭಗುಡಿಯ ನಂತರ ಸುಖನಾಸಿಯು ತೆರೆದುಕೊಂಡಿದ್ದು ಇದರ ಮಧ್ಯಭಾಗದಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಸುಖನಾಸಿಯ ವಿತಾನವೂ ಕೂಡ ಸರಳ ಪದ್ಮದ ರಚನೆಯಿರುವ ನಾಭಿಚ್ಛಂಧ ಮಾದರಿಯದ್ದಾಗಿದೆ. ಇದರ ನಾಲ್ಕೂ ಮೂಲೆಗಳಲ್ಲಿ ಆಕರ್ಷಕವಾದ ಕೀರ್ತಿಮುಖಗಳ ಕೆತ್ತನೆಯೂ ಕಂಡು ಬಂದಿದೆ.

**ಉತ್ತರ ದಿಕ್ಕಿನ ಗರ್ಭಗೃಹ ಮತ್ತು ಸುಖನಾಸಿ:** 6X6 ಅಡಿ ವಿಸ್ತೀರ್ಣವನ್ನು ಹೊಂದಿರುವ ಈ ಗರ್ಭಗೃಹದಲ್ಲಿಯೂ ಸಹ ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದ್ದು ಇದರ ಮೇಲ್ಭಾಗದ ಛಾವಣಿಯಲ್ಲಿ ನಾಬಿಚ್ಛಂಧ ಮಾದರಿಯ ವಿತಾನವಿದೆ. ಇದರ ಮಧ್ಯಭಾಗದಲ್ಲಿ ಸರಳ ಪದ್ಮದ ರಚನೆಯಿರುವ ಶಿಲಾಫಲಕವಿದೆ. ಈ ಗರ್ಭಗುಡಿಯ ದ್ವಾರವೂ ಸಹ ಸರಳವಾಗಿದ್ದು ಇದರ ಛಾವಣಿಯು ಎರಡು ಹಂತವನ್ನು ಹೊಂದಿರುವ ನಾಭಿಚ್ಛಂಧ ಮಾದರಿಯದ್ದಾಗಿದ್ದು ಇದರಲ್ಲಿ ಕೀರ್ತಿಮುಖಗಳನ್ನು ಅಲಂಕಾರಿಕವಾಗಿ ಕೆತ್ತನೆ ಮಾಡಲಾಗಿದೆ. ಈ ಸುಖನಾಸಿಯ ಬಲಪಾರ್ಶ್ವದಲ್ಲಿ ಸಪ್ತಮಾತೃಕೆಯರ ಶಿಲ್ಪ ಪಟ್ಟಿಕೆಯನ್ನು ಪ್ರತಿಷ್ಠಾಪಿಸಲಾಗಿದೆ.

**ದಕ್ಷಿಣ ದಿಕ್ಕಿನ ಗರ್ಭಗೃಹ ಮತ್ತು ಸುಖನಾಸಿ:** ಈ ಗರ್ಭಗೃಹವೂ ಸಹ 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಎರಡು ಎತ್ತರದ ಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದೆ. ಇದರ ಮೇಲ್ಭಾಗದಲ್ಲಿ ಸರಳ ಪದ್ಮದ ರಚನೆಯಿರುವ ನಾಭಿಚ್ಛಂಧ ವಿತಾನವಿದೆ. ಸರಳವಾದ ಬಾಗಿಲುವಾಡವನ್ನು ಹೊಂದಿರುವ ಈ ಗರ್ಭಗುಡಿಯ ಮುಂಭಾಗದಲ್ಲಿ ತೆರೆದ ಸುಖನಾಸಿಯಿದ್ದು, ಇದರ ಎಡಪಾರ್ಶ್ವದಲ್ಲಿ ಎರಡು ನಾಗರಕಲ್ಲುಗಳಿವೆ. ಸಖನಾಸಿಯ ವಿತಾನವು

ಸರಳವಾಗಿದ್ದು ಚತುರಶ್ರವಾಗಿರುವ ಶಿಲಾಫಲಕದ ಮಧ್ಯಭಾಗದಲ್ಲಿ ಶತಾತಪತ್ರ ಪದ್ಮ ರಚನೆಯಿದೆ.

**ನವರಂಗ**: ಈ ದೇವಾಲಯದ ಮೂರೂ ಸುಖನಾಸಿಗಳಗೂ ಹೊಂದಿಕೊಂಡಂತೆ ನವರಂಗವಿದ್ದು, ಇದು ನಾಲ್ಕು ಸ್ವತಂತ್ರ ಕಂಬಗಳನ್ನು ಹೊಂದಿದೆ. ಈ ಕಂಬಗಳು ಪೀಠ, ಚತುರಶ್ರವಾದ ದಿಂಡು, 16 ಕೋನ, ನಾಲ್ಕು ಕೋನದ ದಿಂಡು, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ ಪೋತಿಕಾವನ್ನು ಹೊಂದಿದ್ದು, ದೇವಾಲಯದ ಛಾವಣಿಗೆ ಆಸರೆಯಾಗಿವೆ. (ಚಿ.ಸಂ. 26) ಈ ನವರಂಗದ ಭುವನೇಶ್ವರಿಗಳು ಸರಳವಾದ ಪದ್ಮರಚನೆಯ ನಾಭಿಛ್ಛಂಧ ಮಾದರಿಯಿಂದ ಕೂಡಿವೆ. ಮಧ್ಯದಂಕಣದ ಭುವನೇಶ್ವರಿಯು ಉಳಿದ ಭುವನೇಶ್ವರಿಗಳಗಿಂತ ಸ್ವಲ್ಪ ವಿಶಾಲವಾಗಿದ್ದು ಇದರಲ್ಲಿ ಪದ್ಮದ ಸುತ್ತಲೂ ಕೀರ್ತಿಮುಖಗಳ ಕೆತ್ತನೆ ಕಂಡು ಬರುತ್ತದೆ. (ಚಿ.ಸಂ. 27) ನವರಂಗದ ಬಲಭಾಗದಲ್ಲಿ ಸುಮಾರು ಮೂರು ಅಡಿ ಎತ್ತರದ ಗಣೇಶ ಶಿಲ್ಪವಿದ್ದು ಇದು ಪಾಶ, ಅಂಕುಶ, ಫಲ ಮತ್ತು ಪುಷ್ಪವನ್ನು ಹಿಡಿದಿದ್ದು ಸುಖಾಸನದಲ್ಲಿ ಕುಳಿತಿರುವಂತೆ ಕೆತ್ತಲಾಗಿದೆ. ಹಾರ, ಯಜ್ಞೋಪವೀತ, ಉದರಬಂಧ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದು, ಹಿಂಭಾಗದಲ್ಲಿ ಸುಂದರವಾದ ಪ್ರಭಾವಳಿ ಮತ್ತು ಮೇಲ್ಭಾಗದಲ್ಲಿ ಕೀರ್ತಿಮುಖವನ್ನು ಹೊಂದಿದೆ. ನವರಂಗದ ಎಡಭಾಗದಲ್ಲಿ ಸರ್ವಾಲಂಕಾರ ಭೂಷಿತಳಾದ ಅಷ್ಟಭುಜದಾರಿ ಮಹಿಷಾಸುರಮರ್ಧಿನಿಯ ಸುಂದರ ಶಿಲ್ಪವಿದೆ. ಇದರ ಪಕ್ಕದಲ್ಲೇ ಭೂದೇವಿ–ಶ್ರೀದೇವಿ ಸಮೇತ ಸರ್ವಾಭರಣಭೂಷಿತವಾದ ಸ್ಥಾನಕ ಭಂಗಿಯ ಕೇಶವ ಶಿಲ್ಪವಿದೆ. ಈ ಶಿಲ್ಪದ ಕೆಳಭಾಗದ ಎರಡು ಕೈಗಳು ಭಗ್ನವಾಗಿದ್ದು, ಶಿಲ್ಪದ ಹಿಂಭಾಗದಲ್ಲಿ ಸುಂದರವಾದ ಪ್ರಭಾವಳಿಯಿದೆ.

**ಮುಖಮಂಟಪ**: ಇದು ಒಂದು ಅಂಕಣದಷ್ಟು ವಿಸ್ತಾರವನ್ನು ಮತ್ತು ಎರಡು ಸ್ತಂಭಗಳನ್ನು ಹೊಂದಿದ್ದು ಸರಳವಾಗಿದೆ. ಇದರಲ್ಲಿ ಕಕ್ಷಾಸನಗಳನ್ನು ನಿರ್ಮಿಸಿದ್ದಂತೆ ಕಂಡು ಬರುತ್ತದೆಯಾದರೂ ಸಹ ಇಂದು ಕುಳಿತುಕೊಳ್ಳಲು ಇರುವಂತಹ ಭಾಗಗಳು ಕಾಣಸಿಗುವುದಿಲ್ಲ. ಇದರ ಭುವನೇಶ್ವರಿಯು ಸರಳ ಪದ್ಮದ ಅಲಂಕರಣೆಯನ್ನು ಹೊಂದಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ಈ ದೇವಾಲಯದ ಅಧಿಷ್ಠಾನವೂ ಭಾಗಶಃ ಭೂಮಿಯಲ್ಲಿ ಮುಚ್ಚಿಹೋಗಿದ್ದು ಪ್ರಸ್ತುತ ಕೇವಲ ಒಂದೂವರೆ ಅಡಿಯಷ್ಟು ಮಾತ್ರ ಕಂಡು ಬರುತ್ತದೆ. ಇದನ್ನು ಗಮನಿಸಿದಾಗ ಈ ದೇವಾಲಯವು ಮಂಚಬಂಧ ಅಧಿಷ್ಠಾನವನ್ನು ಹೊಂದಿರುವಂತೆ ತೋರುತ್ತದೆ. ಅಧಿಷ್ಠಾನದ ಮೇಲೆ ಭಿತ್ತಿ ಭಾಗವಿದ್ದು ಇದರಲ್ಲಿ ಬ್ರಹ್ಮಕಾಂತ ಭಿತ್ತಿಪಾದಗಳ

ರಚನೆಯನ್ನು ಗುರುತಿಸಬಹುದು. ಭಿತ್ತಿಯ ನಂತರ ಪ್ರಸ್ತರ ಭಾಗದಲ್ಲಿ ಉತ್ತರ, ವಾಜನ ಮತ್ತು ಕಪೋತ ಭಾಗಗಳು ಕಂಡು ಬರುತ್ತವೆ.

**ಶಿಖರ**: ತ್ರಿಕೂಟೇಶ್ವರ ದೇವಾಲಯದ ಮೂರು ಗರ್ಭಗುಡಿಗಳ ಮೇಲ್ಭಾಗದಲ್ಲಿ ಶಿಖರಗಳನ್ನು ನಿರ್ಮಿಸಲಾಗಿದ್ದು ಎಲ್ಲವೂ ಒಂದೇ ಮಾದರಿಯಲ್ಲಿ ಕಂಡು ಬರುತ್ತವೆ. ಇವು ಒಂಭತ್ತು ಹಂತಗಳ ಕಪೋತ, ವೇದಿ, ಚತುರಶ್ರವಾದ ಅಧೋಪದ್ಮ ಮತ್ತು ಕಳಸವನ್ನು ಹೊಂದಿದ್ದು ಈ ಮಾದರಿಯ ಶಿಖರಗಳನ್ನು ವಾಸ್ತುಶಾಸ್ತ್ರ ಗ್ರಂಥಗಳು ಫಾಂಸಾನ ಶೈಲಿಯ ಶಿಖರಗಳೆಂದು ಹೆಸರಿಸಿವೆ.[48] (ಚಿ.ಸಂ. 28) ಶಿಖರದ ಮುಂಭಾಗದಲ್ಲಿ ಸರಳವಾದ ಸುಖನಾಸದ ರಚನೆ ಕಂಡು ಬಂದಿದ್ದು ಇದರ ಫಲಕ ಅಥವಾ ಯಾವುದೇ ಭಾಗದಲ್ಲಿ ಅಲಂಕರಣೆಗಳು, ಶಿಲ್ಪಗಳು ಕಂಡು ಬರುವುದಿಲ್ಲ.

ತ್ರಿಕೂಟೇಶ್ವರ ದೇವಾಲಯವು ಒಂದು ಸರಳವಾದ ಹೊಯ್ಸಳ ದೇವಾಲಯವಾಗಿದ್ದು ಇಂದು ಇದಕ್ಕೆ ಸುಣ್ಣ ಬಣ್ಣಗಳನ್ನು ಬಳಿಯಲಾಗಿದೆ ಹಾಗೂ ಇಡೀ ದೇವಾಲಯದ ನೆಲಕ್ಕೆ ಇತ್ತೀಚಿನ ನವೀನ ಮಾದರಿಯ ಟೈಲ್ಸ್‌ಗಳನ್ನು ಅಳವಡಿಸಲಾಗಿದ್ದು ದೇವಾಲಯದ ಮೂಲ ಲಕ್ಷಣಗಳು ಸ್ವಲ್ಪ ವ್ಯತ್ಯಾಸದಿಂದ ಕೂಡಿವೆ. ಪ್ರಸ್ತುತ ಈ ದೇವಾಲಯವು ರಾಜ್ಯ ಪುರಾತತ್ವ ಇಲಾಖೆಯ ಸಂರಕ್ಷಿತ ಸ್ಮಾರಕವಾಗಿದೆ.

**ಜಕೇನಹಳ್ಳಿ**: ಈ ಗ್ರಾಮವು ಹಾಸನ ನಗರದಿಂದ ಆಗ್ನೇಯ ದಿಕ್ಕಿಗೆ 15 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಹೊಯ್ಸಳ ಒಂದನೇ ನರಸಿಂಹನ ಆಳ್ವಿಕೆಯ ಕಾಲಘಟ್ಟದಲ್ಲಿ ಕೋರವಂಗಲ ಮನ್ನಮಹಾಗ್ರಹಾರದ ಒಂದು ಉಪಗ್ರಾಮವಾಗಿದ್ದ ಜಕ್ಕೇನಹಳ್ಳಿಯಲ್ಲಿ ಮಹಾಪ್ರಧಾನ, ಹೆಗ್ಗಡೆ ಕಾಳಮಯ್ಯನು ಕಾಳೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ಕ್ರಿ.ಶ.1170–71ರ ಶಾಸನ[49] ತಿಳಿಸುತ್ತದೆ. ಈ ದೇವಾಲಯದ ನಿರ್ಮಾತೃ ಕಾಳಮಯ್ಯನು ಮದ್ದಿಮಯ್ಯ ಮಾಕವ್ವೆಯ ಸುಪುತ್ರನಾಗಿದ್ದು ಈತನ ವಂಶಾವಳಿಯನ್ನು ಈ ಶಾಸನ ವಿವರಿಸುತ್ತದೆ.

**ಕಲ್ಲೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಉತ್ತರ ದಿಕ್ಕಿನಲ್ಲಿ ಸಂಪೂರ್ಣವಾಗಿ ಹೊಸದಾಗಿ ನಿರ್ಮಾಣಗೊಂಡಿದೆ. ಆದರೆ ಈ ದೇವಾಲಯದ ಹಳೆಯ ಅವಶೇಷಗಳು ಒಂದು ಮಂಟಪದಲ್ಲಿ ಕಂಡು ಬರುತ್ತವೆ. (ಚಿ.ಸಂ. 29) ದೇವಾಲಯದ ನಾಲ್ಕು ಕಂಬಗಳು, ಬಾಗಿಲುವಾಡ ಮತ್ತು ಭಗ್ನವಾಗಿರುವ ವೀರಗಲ್ಲು ಈ ಮಂಟಪದಲ್ಲಿ ಕಂಡು ಬಂದಿದ್ದು, ಸ್ತಂಭಗಳು ಪೀಠ, ಚತುರಶ್ರವಾದ ದಿಂಡು, 16 ಕೋನ, ಅಷ್ಟಕೋನ, ಚತುರಶ್ರವಾದ ದಿಂಡು, ಕಂಠ, ಮಂಡಿ

ಫಲಕ ಮತ್ತು ಆಧಾರ ಪೋತಿಕೆಯನ್ನು ಹೊಂದಿವೆ. ಪ್ರಾಚೀನ ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನವು ಹೊಸದಾಗಿ ನಿರ್ಮಾಣವಾಗಿರುವ ದೇವಾಲಯದ ಬಲಪಾರ್ಶ್ವದಲ್ಲಿ ಕಂಡು ಬರುತ್ತದೆ. ಒಟ್ಟಿನಲ್ಲಿ ಇಲ್ಲಿರುವ ಶಾಸನ ಮತ್ತು ಅವಶೇಷಗಳಿಂದ ಇಲ್ಲೊಂದು ಪ್ರಾಚೀನವಾದ ದೇವಾಲಯವಿತ್ತೆಂದು ಗ್ರಹಿಸಬಹುದಾಗಿದೆ.

**ಬೂಚೇಶ್ವರ ದೇವಾಲಯ–ಕೋರವಂಗಲ**

ಈ ದೇವಾಲಯವು ಗ್ರಾಮದ ಉತ್ತರ ದಿಕ್ಕಿನಲ್ಲಿ ಕೆರೆ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. (ಚಿ.ಸಂ. 30) ಇದನ್ನು ಎರಡನೇ ಬಲ್ಲಾಳನ ಪಟ್ಟಾಭಿಷೇಕದ ದಿನದಂದೇ ಮಹಾಪ್ರಧಾನ, ಶ್ರೀಕರಣ ಮತ್ತು ತಂತ್ರಾಧಿಕಾರಿಯಾಗಿದ್ದ ಬೂಚಿರಾಜನು ಲೋಕಾರ್ಪಣೆ ಮಾಡಿದನೆಂದು ಕ್ರಿ.ಶ.1173ರ ಕೋರವಂಗಲ ಶಾಸನ[50] ತಿಳಿಸುತ್ತದೆ. ಹೊಯ್ಸಳರ ಅಪೂರ್ವ ಕಲಾ ಪ್ರೌಢಿಮೆಗೆ ಸಾಕ್ಷಿಯಂತಿರುವ ಈ ದೇವಾಲಯವು ದ್ವಿಕೂಟಾಚಲವಾಗಿದ್ದು ಗರ್ಭಗೃಹ, ತೆರೆದ ಸುಖನಾಸಿ, ನವರಂಗ, ಮುಖಮಂಟಪ, ತೆರೆದ ಮಂಟಪ ಮತ್ತು ಸೂರ್ಯನಿಗಾಗಿ ನಿರ್ಮಿಸಿರುವ ಮತ್ತೊಂದು ಗರ್ಭಗುಡಿಯನ್ನು ಹೊಂದಿದೆ. ದೇವಾಲಯವನ್ನು ಪ್ರವೇಶಿಸಲು ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ದ್ವಾರಗಳಿವೆ. ಬೂಚೇಶ್ವರ ದೇವಾಲಯದ ಗರ್ಭಗುಡಿ ಮತ್ತು ಸೂರ್ಯ ವಿಗ್ರಹವಿರುವ ಗರ್ಭಗುಡಿ ಒಂದೇ ನವರಂಗವನ್ನು ಹಂಚಿಕೊಳ್ಳದಿದ್ದರೂ, ಎರಡೂ ಕೂಡ ಒಂದಕ್ಕೊಂದು ಅಭಿಮುಖವಾಗಿ ದೇವಾಲಯದ ಇತರ ಭಾಗಗಳೊಂದಿಗೆ ಸಂಬಂಧ ಹೊಂದಿರುವುದರಿಂದ ಇದನ್ನು ದ್ವಿಕೂಟಾಚಲವೆಂದೇ ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.[51] ಈ ರೀತಿಯ ತಲವಿನ್ಯಾಸದ ರಚನೆಯನ್ನು ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯದಲ್ಲಿ ನೋಡಬಹುದಾಗಿದೆ.

**ಗರ್ಭಗೃಹ ಮತ್ತು ಸುಖನಾಸಿ:** ಇದು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಎರಡು ಅಡಿ ಪೀಠದ ಮೇಲೆ ಒಂದು ಅಡಿ ಎತ್ತರದ ಬೂಚೇಶ್ವರ ಲಿಂಗವಿದೆ. (ಚಿ.ಸಂ. 31) ಈ ಲಿಂಗಕ್ಕೆ ಲೋಹದಿಂದ ಮಾಡಿದ ಶಿವನ ಮುಖವಾಡವನ್ನು ಮತ್ತು ಇದರ ಹಿಂಭಾಗದಲ್ಲಿ ಏಳು ಹೆಡೆಗಳನ್ನು ಎತ್ತಿರುವ ಸರ್ಪಾಕೃತಿಯನ್ನು ಅಳವಡಿಸಲಾಗಿದೆ. ಗರ್ಭಗುಡಿಯು ಎರಡು ಹಂತಗಳನ್ನು ಹೊಂದಿರುವ ನವಪದ್ಮ ಮಂಡಲ ವಿತಾನವನ್ನು ಹೊಂದಿದೆ. ಇದರ ದ್ವಾರಬಂಧವು ಸರಳವಾದ ಅಲಂಕರಣೆಯನ್ನು ಹೊಂದಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಇದರ ಮೇಲ್ಭಾಗದಲ್ಲಿ ಸಣ್ಣ ಸಣ್ಣ ಶಿಖರದ ಆಕೃತಿಗಳನ್ನು ಕೆತ್ತಿದ್ದಾರೆ. ದ್ವಾರದ ಇಕ್ಕೆಲಗಳಲ್ಲಿ ತ್ರಿಶೂಲ, ಢಮರು, ಗದಾಧಾರಿಗಳಾಗಿ ಅಭಯ ಹಸ್ತವನ್ನು ಹೊಂದಿ

ಸರ್ವಾಭರಣ ಭೂಷಿತರಾಗಿ ತ್ರಿಭಂಗಿಯಲ್ಲಿ ನಿಂತಿರುವ ಶೈವ ದ್ವಾರಪಾಲಕರ ಶಿಲ್ಪಗಳಿವೆ. (ಚಿ.ಸಂ. 32) ಗರ್ಭಗೃಹದ ನಂತರ ತೆರೆದ ಸುಖನಾಸಿ ಭಾಗವಿದ್ದು ಇದರ ಛಾವಣಿಯಲ್ಲಿ ಗರ್ಭಗೃಹದಲ್ಲಿರುವ ಮಾದರಿಯಲ್ಲೇ ನವಪದ್ಮಮಂಡಲ ವಿತಾನವಿದೆ.

**ನವರಂಗ:** ಸುಖನಾಸಿಯ ನಂತರ ನವರಂಗ ಭಾಗವಿದ್ದು ಇದು 20X20 ಅಡಿ ವಿಸ್ತೀರ್ಣವನ್ನು ಮತ್ತು ನಾಲ್ಕು ಆಕರ್ಷಕವಾದ ಶ್ರೀಕಾರ ಸ್ತಂಭಗಳನ್ನು ಹೊಂದಿದೆ. (ಚಿ.ಸಂ. 33) ಈ ಸ್ತಂಭಗಳನ್ನು ಲೇತ್ ಯಂತ್ರದ ಸಹಾಯದಿಂದ ನಿರ್ಮಿಸಲಾಗಿದ್ದು ಇವು ಪೀಠ, ಚತುರಶ್ರವಾದ ದಿಂಡು, ವೃತ್ತಾಕಾರದ ಬಳೆಗಳು ಮತ್ತು ಘಂಟಾಕಾರವನ್ನು ಹೊಂದಿರುವ ದಿಂಡು, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ ಬೋದಿಗೆಯನ್ನು ಹೊಂದಿವೆ. ನವರಂಗದ ದಕ್ಷಿಣ ಭಿತ್ತಿಯಲ್ಲಿ ಎರಡು ಮತ್ತು ಉತ್ತರ ಭಿತ್ತಿಯಲ್ಲಿ ಎರಡು ಹಾಗೂ ಸುಖನಾಸಿ ದ್ವಾರದ ಭಿತ್ತಿಯ ಎರಡೂ ಪಾರ್ಶ್ವಗಳಲ್ಲಿ ಒಂದೊಂದು ಒಟ್ಟು ಆರು ದೇವಕೋಷ್ಠಗಳ ನಿರ್ಮಾಣವು ಕಂಡು ಬರುತ್ತದೆ. ನವರಂಗದ ದಕ್ಷಿಣ ಭಿತ್ತಿಯ ಮೊದಲ ದೇವಕೋಷ್ಠದಲ್ಲಿ ಸಪ್ತಮಾತೃಕೆಯರ ಶಿಲ್ಪಪಟ್ಟಿಕೆಯನ್ನು ಇಡಲಾಗಿದೆ. ಈ ಸಪ್ತಮಾತೃಕೆಯರ ಪಾದ ಭಾಗದಲ್ಲಿ ಅವರವರ ವಾಹನಗಳನ್ನು ಕೆತ್ತಿದ್ದು ದೇವಕೋಷ್ಠದ ಮೇಲೆ ದ್ರಾವಿಡ ಶೈಲಿಯ ಶಿಖರದ ಮಾದರಿಯನ್ನು ನಿರ್ಮಿಸಲಾಗಿದೆ. (ಚಿ.ಸಂ. 34) ದಕ್ಷಿಣ ದಿಕ್ಕಿನ ಭಿತ್ತಿಯ ಎರಡನೇ ದೇವಕೋಷ್ಠದಲ್ಲಿ ಅತ್ಯಂತ ಸುಂದರವಾದ ಸರಸ್ವತಿಯ ಶಿಲ್ಪವಿದೆ. ಸರ್ವಾಭರಣಭೂಷಿತಳಾಗಿ ಪದ್ಮಾಸನದಲ್ಲಿ ಕುಳಿತಿರುವ ದೇವಿಯು ಹಿಂಬದಿಯ ಕೈಗಳಲ್ಲಿ ಪಾಶ, ಅಂಕುಶ, ಬಲ ಮುಂಗೈಯಲ್ಲಿ ಅಕ್ಷಮಾಲೆಯನ್ನು ಮತ್ತು ಎಡ ಮುಂಗೈನಲ್ಲಿ ಪುಸ್ತಕವನ್ನು ಹಿಡಿದಿದ್ದಾಳೆ.[52] ಈ ದೇವಕೋಷ್ಠದ ಮೇಲ್ಭಾಗದಲ್ಲೂ ಸಹ ಕೂಟ ಮಾದರಿಯ ಶಿಖರವನ್ನು ನಿರ್ಮಿಸಲಾಗಿದೆ. ಸುಖನಾಸಿ ದ್ವಾರದ ಬಲಭಾಗದ ಕೋಷ್ಠಕದಲ್ಲಿ ಯಾವುದೇ ಶಿಲ್ಪ ಕಂಡು ಬರುವುದಿಲ್ಲ. ಸುಖನಾಸಿ ದ್ವಾರದ ಎಡಭಾಗದ ಕೋಷ್ಠದಲ್ಲಿ ಎರಡು ನಾಗರ ಶಿಲ್ಪಗಳನ್ನು, ಉತ್ತರ ದಿಕ್ಕಿನ ಭಿತ್ತಿಯ ಒಂದು ಕೋಷ್ಠದಲ್ಲಿ ಇತ್ತೀಚಿನ ನಂದಿ ಶಿಲ್ಪವನ್ನು ಮತ್ತು ಇದರ ಪಕ್ಕದ ದೇವಕೋಷ್ಠದಲ್ಲಿ ವೀರಗಲ್ಲಿನ ರೀತಿಯಿರುವ ಶಿಲ್ಪವನ್ನು ಇಟ್ಟಿದ್ದಾರೆ. ನವರಂಗದ ಎಡಭಾಗದ ಈ ಮೂರೂ ಕೋಷ್ಠಗಳ ಮೇಲೂ ದ್ರಾವಿಡ ಶೈಲಿಯ ಶಿಖರದ ಮಾದರಿಗಳನ್ನು ನಿರ್ಮಿಸಿದ್ದಾರೆ. ನವರಂಗದಲ್ಲಿ ಸುಖನಾಸಿ ಮುಂದಿನ ಎರಡು ಸ್ತಂಭಗಳ ನಡುವೆ ನಂದಿ ಶಿಲ್ಪವನ್ನು ಇಡಲಾಗಿದೆ. ನವರಂಗವು ಒಂಭತ್ತು ಭುವನೇಶ್ವರಿಗಳನ್ನು ಒಳಗೊಂಡಿದ್ದು ಇವು ಅತ್ಯಾಕರ್ಷಕವಾಗಿದ್ದು, ದೇವಾಲಯದ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

1. **ಪೂರ್ವದಿಕ್ಕಿನ ಭುವನೇಶ್ವರಿ:** ಇದು ವೃತ್ತಾಕಾರದಿಂದ ಕೂಡಿ ಒಳಭಾಗದಲ್ಲಿಯೂ ಸಹ ವೃತ್ತಾಕಾರವನ್ನು ಮತ್ತು ಶಿಲಾಮೊಗ್ಗುಗಳನ್ನು ಹೊಂದಿದ್ದು ಇವು ಆಳಕ್ಕೆ ಹೋದಂತೆ ಕಿರಿದಾಗಿವೆ. ಇದರ ಮಧ್ಯಭಾಗದಲ್ಲಿ ಪದ್ಮಕೇಸರವನ್ನು ನೇತಾಡುತ್ತಿರುವಂತೆ ಕೆತ್ತಲಾಗಿದೆ. (ಚಿ.ಸಂ. 35)

2. **ಆಗ್ನೇಯ ದಿಕ್ಕಿನ ಭುವನೇಶ್ವರಿ:** ಇದು ಅಷ್ಟಕೋನಾಕೃತಿಯಲ್ಲಿದ್ದು, ಇದೇ ಆಕಾರದಲ್ಲಿ ಒಳಹೋಗುತ್ತಾ ಕಿರಿದಾಗಿದ್ದು ಮಧ್ಯಭಾಗದಲ್ಲಿ ಪದ್ಮಕೇಸರದ ಕೆತ್ತನೆಯಿದೆ.

3. **ದಕ್ಷಿಣ ದಿಕ್ಕಿನ ಭುವನೇಶ್ವರಿ:** ಇದು ಚೌಕಾಕಾರದಲ್ಲಿದ್ದು, ಒಳಹೋದಂತೆ ಚೌಕಾಕಾರದೊಳಗೆ ಚೌಕಾಕಾರ ನಿರ್ಮಾಣವಾಗುತ್ತಾ ಕಿರಿದಾಗಿದೆ. ಇದರಲ್ಲಿಯೂ ಪದ್ಮಕೇಸರದ ರಚನೆಯಿದೆ.

4. **ನೈರುತ್ಯ ದಿಕ್ಕಿನ ಭುವನೇಶ್ವರಿ:** ಇದು ಶ್ರೀಚಕ್ರ ಮಾದರಿಯ ವಿತಾನವಾಗಿದ್ದು, ಒಳಭಾಗದಲ್ಲಿ ಚಿಕ್ಕ ಚಿಕ್ಕ ಶಿಲಾಮೊಗ್ಗುಗಳ ರಚನೆ ಕಂಡು ಬರುತ್ತದೆ.

5. **ಪಶ್ಚಿಮ ದಿಕ್ಕಿನ ಭುವನೇಶ್ವರಿ:** ಅತ್ಯಂತ ಆಕರ್ಷಕವಾಗಿರುವ ಈ ಭುವನೇಶ್ವರಿಯು ಪಾದಭಾಗದಲ್ಲಿ ಚತುರಶ್ರವಾಗಿದ್ದು ಒಳಹೋದಂತೆ ಚಿಕ್ಕದಾಗುತ್ತಾ ಅಷ್ಟಕೋನಗಳನ್ನು ಮತ್ತು ಶಿಲಾಮೊಗ್ಗುಗಳನ್ನು ಹೊಂದಿದೆ. (ಚಿ.ಸಂ. 36)

6. **ವಾಯುವ್ಯ ದಿಕ್ಕಿನ ಭುವನೇಶ್ವರಿ:** ಇದು ದಕ್ಷಿಣ ದಿಕ್ಕಿನಲ್ಲಿ ಕಂಡು ಬರುವ ವಿತಾನದ ರೀತಿಯಲ್ಲೇ ಇದ್ದು ಚೌಕಾಕಾರದೊಳಗೆ ಚೌಕಾಕಾರ ನಿರ್ಮಾಣವಾಗುತ್ತಾ ಕಿರಿದಾಗಿದೆ. (ಚಿ.ಸಂ. 37)

7. **ಉತ್ತರ ದಿಕ್ಕಿನ ಭುವನೇಶ್ವರಿ:** ವೃತ್ತಾಕಾರವನ್ನು ಹೊಂದಿರುವ ಈ ವಿತಾನವು ಅತ್ಯಂತ ಆಕರ್ಷಕವಾಗಿದ್ದು ಮೂರು ಹಂತಗಳಲ್ಲಿ ವೃತ್ತಗಳನ್ನು ನಿರ್ಮಿಸುತ್ತಾ ಒಳಹೋದಂತೆ ಕಿರಿದಾಗಿದ್ದು ಇದರ ಮಧ್ಯಭಾಗದ ಫಲಕದಲ್ಲಿ ಕೃಷ್ಣನ ಶಿಲ್ಪವಿದೆ.[53] (ಚಿ.ಸಂ. 38)

8. **ಈಶಾನ್ಯ ದಿಕ್ಕಿನ ಭುವನೇಶ್ವರಿ:** ಮೂರು ಹಂತಗಳನ್ನು ಹೊಂದಿರುವ ಈ ಭುವನೇಶ್ವರಿಯು ಎಂಟು ಕೋನಗಳನ್ನು ಹೊಂದಿರುವ ನಕ್ಷತ್ರಾಕಾರದಲ್ಲಿದೆ. ಇದರ ಒಳಭಾಗದಲ್ಲಿ ಚಿಕ್ಕ ಚಿಕ್ಕ ಶಿಖರದ ಮಾದರಿಗಳನ್ನು ಅಲಂಕಾರಿಕವಾಗಿ ಕೆತ್ತಿರುವುದನ್ನು ಗಮನಿಸಬಹುದು. (ಚಿ.ಸಂ. 39)

**ನವರಂಗದ ಮಧ್ಯದಂಕಣದ ಭುವನೇಶ್ವರಿ**: ಇದು ಅಷ್ಟಕೋನಾಕೃತಿಯಲ್ಲಿದ್ದು ಮೂರು ಹಂತಗಳನ್ನು ಹೊಂದಿದೆ. ಇದರ ಪಾದಭಾಗದ ದಿಂಡಿನ ಮೇಲೆ ದಿಕ್ಕಿಗನುಗುಣವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ವಿತಾನದ ಮಧ್ಯಭಾಗದಲ್ಲಿ ಬಾಳೆಯ ಹೂವಿನ ಆಕೃತಿಯನ್ನು ನೇತಾಡುತ್ತಿರುವಂತೆ ಕೆತ್ತಲಾಗಿದೆ ಹಾಗೂ ಸುತ್ತಲೂ ಎರಡು ಹಂತಗಳ ಶಿಲಾಮೊಗ್ಗಿನ ರಚನೆ ಕಂಡು ಬರುತ್ತದೆ. (ಚಿ.ಸಂ. 40) ನವರಂಗದ ಭುವನೇಶ್ವರಿಗಳು ಸುಮಾರು ಐದು ಅಡಿ ಆಳವನ್ನು ಮತ್ತು ಆರು ಅಡಿ ವ್ಯಾಸವನ್ನು ಹೊಂದಿವೆ.[54]

**ನವರಂಗದ ದ್ವಾರಬಂಧ**: ಇದು ವಜ್ರ, ವಲ್ಲೀ, ಸ್ತಂಭ ಮತ್ತು ವಲ್ಲೀ ಎಂಬ ನಾಲ್ಕು ಶಾಖೆಗಳನ್ನು ಒಳಗೊಂಡಿದ್ದು, ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವು ಕಂಡು ಬರುತ್ತದೆ. ಇದರ ಮೇಲ್ಭಾಗದಲ್ಲಿ ಐದು ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಿದ್ದಾರೆ. (ಚಿ.ಸಂ. 41) ಲಲಾಟಬಿಂಬದ ಎರಡೂ ಪಾರ್ಶ್ವದಲ್ಲಿ ಎರಡು ಗುಬುಟುಗಳನ್ನು ಇಳಬಿಟ್ಟಂತೆ ಅಲಂಕಾರಿಕವಾಗಿ ನಿರ್ಮಿಸಿದ್ದಂತೆ ತೋರುತ್ತದೆ. ಆದರೆ ಅವುಗಳಲ್ಲಿ ಒಂದು ಮಾತ್ರ ಕಂಡು ಬಂದಿದ್ದು ಮತ್ತೊಂದು ನಷ್ಟವಾಗಿದೆ. ದ್ವಾರದ ಎರಡೂ ಪಾರ್ಶ್ವದಲ್ಲಿ ತ್ರಿಶೂಲ, ಢಮರು, ಗದೆಯನ್ನು ಹಿಡಿದು ಇನ್ನೊಂದು ಕೈಯಲ್ಲಿ ಅಭಯ ಹಸ್ತವನ್ನು ಹೊಂದಿ ದ್ವಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರ ಶಿಲ್ಪಗಳಿವೆ. ನವರಂಗ ದ್ವಾರದ ಬಲಭಾಗದ ದ್ವಾರಪಾಲಕನ ಶಿಲ್ಪವು ಭಾಗಶಃ ನಶಿಸಿ ಹೋಗಿದೆ. ಈ ದ್ವಾರಪಾಲಕರು ಕಂಠೀಹಾರ, ಹಾರ, ಯಜ್ಞೋಪವೀತ, ಕೇಯೂರ, ಅಂಗುಲಿಯಕ ಇನ್ನೂ ಮುಂತಾದ ಆಭರಣಧಾರಿಗಳಾಗಿದ್ದು ಕಿರೀಟ ಮುಕುಟವನ್ನು ಧರಿಸಿದ್ದಾರೆ. ಇವರ ಶಿರೋಭಾಗದಲ್ಲಿ ಕೀರ್ತಿಮುಖಗಳ ಕೆತ್ತನೆಯೂ ಸಹ ಇದೆ.

**ಸೂರ್ಯ ವಿಗ್ರಹವಿರುವ ಗರ್ಭಗುಡಿ**: ಇದು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಪಶ್ಚಿಮಾಭಿಮುಖವಾಗಿ ನಿರ್ಮಾಣವಾಗಿರುತ್ತದೆ. ಈ ಗರ್ಭಗುಡಿಯ ಮಧ್ಯಭಾಗದಲ್ಲಿ ಅರುಣನು ಒಳಗೊಂಡಂತೆ ಸಪ್ತಾಶ್ವಗಳಿರುವ ಒಂದೂವರೆ ಅಡಿ ಪೀಠದ ಮೇಲೆ ನಾಲ್ಕೂವರೆ ಅಡಿ ಎತ್ತರವಿರುವ ಸ್ಥಾನಕ ಸೂರ್ಯನ ಶಿಲ್ಪವಿದೆ. ಇದರಲ್ಲಿ ಸೂರ್ಯನು ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದು ಹಾರ, ಕಂಠೀಹಾರ, ಯಜ್ಞೋಪವೀತ, ಉದರಬಂಧ, ರತ್ನಾಂಗುಲೀಯಕಗಳು, ಪಾದಸರ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದಾನೆ. (ಚಿ.ಸಂ. 42) ಪಾದದ ಎರಡೂ ಪಾರ್ಶ್ವದಲ್ಲಿ ಉಷೆ-ಪ್ರತ್ಯುಷೆಯರು ಬಿಲ್ಲನ್ನು ಹಿಡಿದು ಬಾಣವನ್ನು ಬಿಡುತ್ತಿರುವಂತೆ ಸುಂದರವಾದ ಶಿಲ್ಪಗಳನ್ನು ಕೆತ್ತಲಾಗಿದೆ. ಸೂರ್ಯಶಿಲ್ಪವು ಮಕರದ ಬಾಯಿಂದ ಹೊರಬಂದಿರುವ ಸುರುಳಿಯಾಕಾರದ ಪ್ರಭಾವಳಿಯನ್ನು ಹೊಂದಿದ್ದು ಇದರಲ್ಲಿ 12 ಆದಿತ್ಯರ ಶಿಲ್ಪಗಳಿವೆ.[55] ಈ ಗರ್ಭಗುಡಿಯು ಚತುರಶ್ರವಾದ ಶಿಲಾಫಲಕದ ಮಧ್ಯಭಾಗದಲ್ಲಿ

ಹಂಸ ಮತ್ತು ಸುತ್ತಲೂ ಎಂಟು ಪದ್ಮಗಳಿರುವ ವಿತಾನವನ್ನು ಹೊಂದಿದೆ. ಇದರ ದ್ವಾರಬಂಧವು ಸರಳವಾಗಿದ್ದು ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರ ಶಿಲ್ಪಗಳಿವೆ. ಬಲಭಾಗದ ದ್ವಾರಪಾಲಕನು ಬಿಲ್ಲು, ಬಾಣ, ಪದ್ಮ ಮತ್ತು ಗದೆಯನ್ನು ಹಿಡಿದಿದ್ದು ಕಂಠೀಹಾರ, ಹಾರ, ಉದರಬಂಧ, ಕೇಯೂರ, ಯಜ್ಞೋಪವೀತ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದಾನೆ. ಎಡಭಾಗದ ದ್ವಾರಪಾಲಕನು ಅಂಕುಶ, ಒನಕೆ, ಪದ್ಮ ಮತ್ತು ಗದೆಯನ್ನು ಹಿಡಿದಿದ್ದು ಸರ್ವಾಭರಣಭೂಷಿತನಾಗಿದ್ದಾನೆ. ಗರ್ಭಗೃಹದ ನಂತರ ಸುಖನಾಸಿ ಭಾಗವಿದ್ದು ಇದರ ಛಾವಣಿಯು ನವಪದ್ಮ ಮಂಡಲ ವಿತಾನವನ್ನು ಹೊಂದಿದೆ.

**ಮುಖಮಂಟಪ**: ಈ ದೇವಾಲಯವು ಬೂಚೇಶ್ವರ ದೇವಾಲಯ ಮತ್ತು ಸೂರ್ಯಗುಡಿ ಎರಡಕ್ಕೂ ಹೊಂದಿಕೊಂಡಂತೆ 32 ಸ್ತಂಭಗಳು ಮತ್ತು 13 ಭುವನೇಶ್ವರಿಗಳನ್ನು ಒಳಗೊಂಡ ಮುಖಮಂಟಪವನ್ನು ಹೊಂದಿದೆ.[56] ಈ ಸ್ತಂಭಗಳು ಲೇತ್ ಯಂತ್ರದ ಸಹಾಯದಿಂದ ನಿರ್ಮಿಸಲ್ಪಟ್ಟ ಶ್ರೀಕಾರ ಸ್ತಂಭಗಳಾಗಿದ್ದು ಇವು ಪೀಠ, ಚತುರಶ್ರವಾದ ದಿಂಡು, ವೃತ್ತಾಕಾರದ ಬಳೆಗಳು ಮತ್ತು ಘಂಟಾಕಾರವನ್ನು ಹೊಂದಿರುವ ದಿಂಡು, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ ಪೋತಿಕಾವನ್ನು ಹೊಂದಿವೆ. (ಚಿ.ಸಂ. 43) ಹಾಗೂ ಭುವನೇಶ್ವರಿಗಳು ಅತ್ಯಾಕರ್ಷಕವಾಗಿದ್ದು ಸುಮಾರು ನಾಲ್ಕು ಅಡಿಯಷ್ಟು ಆಳವನ್ನು ಹೊಂದಿವೆ. ಇವು ವೃತ್ತಾಕಾರ, ಷಟ್ಕೋನ ಮತ್ತು ಅಷ್ಟಕೋನಾಕೃತಿಯಲ್ಲಿ ಒಳಭಾಗಕ್ಕೆ ಸರಿದು ಮೂರು ಹಂತಗಳಲ್ಲಿ ಕಿರಿದಾಗುತ್ತಾ ಹೋಗಿದ್ದು ಮಧ್ಯದಲ್ಲಿ ಪದ್ಮಕೇಸರವನ್ನು ಹೊಂದಿವೆ. ಈ ವಿತಾನಗಳು ಸೂಕ್ಷ್ಮವಾದ ಅಲಂಕಾರಿಕ ಕೆತ್ತನೆಗಳನ್ನು ಹೊಂದಿದ್ದು ವೃತ್ತ, ಷಟ್ಕೋನ ಮತ್ತು ಅಷ್ಟಕೋನಾಕೃತಿಯ ವೃತ್ತಗಳ ಕೆಳಭಾಗದಲ್ಲಿ ಇಳಿಬಿಟ್ಟಂತೆ ಚಿಕ್ಕ ಚಿಕ್ಕ ಶಿಲಾ ಮೊಗ್ಗುಗಳು ಮತ್ತು ಆಕರ್ಷಕವಾದ ಕೀರ್ತಿಮುಖಗಳ ರಚನೆಯನ್ನು ಹೊಂದಿವೆ. (ಚಿ.ಸಂ. 44) ಈ ಮುಖಮಂಟಪದ ಒಳಭಾಗದಲ್ಲಿ ಸುತ್ತಲೂ ಕಕ್ಷಾಸನಗಳ ನಿರ್ಮಾಣವು ಕಂಡು ಬರುತ್ತದೆ. ಒಟ್ಟಾರೆಯಾಗಿ ಈ ಮಂಟಪ ಮತ್ತು ಇಲ್ಲಿನ ಭುವನೇಶ್ವರಿಗಳು ದೇವಾಲಯಕ್ಕೆ ಹೆಚ್ಚಿನ ಅಂದವನ್ನು ನೀಡಿವೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

**ಅಧಿಷ್ಠಾನ**: ಈ ದೇವಾಲಯದ ಅಧಿಷ್ಠಾನವು ನಾಲ್ಕು ಅಡಿ ಎತ್ತರವನ್ನು ಹೊಂದಿದ್ದು ಉಪಾನ, ಜಗತಿ, ಪದ್ಮ, ಕುಮುದ, ಕಪೋತ, ಆಲಿಂಗ ಮತ್ತು ಪ್ರತೀ ಭಾಗಗಳನ್ನು ಒಳಗೊಂಡಿದೆ. ಈಗಾಗಲೇ ಮೊದಲೇ ತಿಳಿಸಿರುವಂತೆ ಇದು ದ್ವಿಕೂಟ ದೇವಾಲಯವಾಗಿರುವುದರಿಂದ ಬೂಚೇಶ್ವರ ಲಿಂಗವಿರುವ ದೇವಾಲಯದ ಅಧಿಷ್ಠಾನ ಮತ್ತು ಸೂರ್ಯ ವಿಗ್ರಹವಿರುವ ಗುಡಿಯ ಅಧಿಷ್ಠಾನ ಎರಡೂ ಕೂಡ ಒಂದೇ ಮಾದರಿಯ ರಚನೆಯನ್ನು ಹೊಂದಿವೆ. ಆದರೆ

ಮುಖಮಂಟಪದ ಅಧಿಷ್ಠಾನವು ದೇವಾಲಯದ ಅಧಿಷ್ಠಾನಕ್ಕಿಂತ ಭಿನ್ನವಾಗಿ ಕಂಡು ಬರುತ್ತದೆ. ಇದು ಉಪಾನ, ಜಗತಿ, ಪದ್ಮ, ಗಳ, ಚತುರಶ್ರ ಕುಮುದ ಮತ್ತು ಪ್ರತೀ ಭಾಗಗಳನ್ನು ಒಳಗೊಂಡಿದ್ದು ಮಂಚಬಂಧ ಅಧಿಷ್ಠಾನದ ರೀತಿಯಲ್ಲಿ ಕಂಡು ಬರುತ್ತದೆ. (ಚಿ.ಸಂ. 45) ಈ ಅಧಿಷ್ಠಾನದಲ್ಲಿ ಕೆಲವು ಕೋಷ್ಠಗಳನ್ನು ನಿರ್ಮಿಸಿ ಇವುಗಳ ಒಳಗೆ ಯಕ್ಷ ಯಕ್ಷಿಯರ ಶಿಲ್ಪಗಳನ್ನು ಕೆತ್ತಲಾಗಿದ್ದು ಇವುಗಳ ಮೇಲ್ಭಾಗದಲ್ಲಿ ಚಿಕ್ಕ ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದೆ. ಹಾಗೂ ಯಕ್ಷ ಯಕ್ಷಿಯರ ಶಿಲ್ಪಗಳಲ್ಲದೇ ಇತರೇ ವಿವಿಧ ಸ್ತ್ರೀ-ಪುರುಷರ ಶಿಲ್ಪಗಳು ಕಂಡು ಬಂದಿದ್ದು ಇವುಗಳ ನಡುವೆ ಎಂಟು ಕೋನದ ಮತ್ತು ನಕ್ಷತ್ರಾಕಾರದ ಚಿಕ್ಕ ಚಿಕ್ಕ ಅರೆಗಂಬಗಳ ಕೆತ್ತನೆ ಮತ್ತು ಇವುಗಳ ಮೇಲ್ಭಾಗದಲ್ಲಿ ಸಣ್ಣ ಸಣ್ಣ ಶಿಖರದ ಮಾದರಿಗಳ ನಡುವೆ ಸಿಂಹಾಕೃತಿಗಳನ್ನು ನಿರ್ಮಿಸಲಾಗಿದೆ.[57] ಈ ಅಧಿಷ್ಠಾನದ ಚತುರಶ್ರವಾದ ಕುಮುದ ಪಟ್ಟಿಕೆಯ ಮೇಲೆ ಸುರುಳಿಯಾಕಾರದ ಕೆತ್ತನೆಯನ್ನು ಮಾಡಲಾಗಿದೆ.

**ಭಿತ್ತಿ**: ಅಧಿಷ್ಠಾನದ ನಂತರ ಭಿತ್ತಿಯು ಕಂಡು ಬಂದಿದ್ದು, ಇದು ಈ ದೇವಾಲಯದ ಪ್ರಮುಖ ಆಕರ್ಷಣೀಯ ಭಾಗವಾಗಿದೆ. ಈ ಭಿತ್ತಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಉಬ್ಬು ಶಿಲ್ಪಗಳು ಕಂಡು ಬರುತ್ತವೆ. (ಚಿ.ಸಂ. 46) ಮೂಲತಃ ಇದು ಶೈವ ದೇವಾಲಯವಾಗಿರುವುದರಿಂದ ಭಿತ್ತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಶೈವ ಪರಂಪರೆಯ ಶಿಲ್ಪಗಳು ಕಂಡು ಬರುವುದರ ಜೊತೆಗೆ ವೈಷ್ಣವ ಪರಂಪರೆಯನ್ನು ಬಿಂಬಿಸುವ ಶಿಲ್ಪಗಳು, ಶಾಕ್ತ ಪರಂಪರೆಯ ಶಿಲ್ಪಗಳು, ರಾಮಾಯಣ, ಮಹಾಭಾರತ ಮತ್ತು ಭಾಗವತದ ಕಥಾನಕ ಶಿಲ್ಪಗಳೂ ಕಂಡು ಬರುತ್ತವೆ. ಪ್ರಧಾನ ದೇವತಾ ಶಿಲ್ಪಗಳ ಮೇಲ್ಭಾಗದಲ್ಲಿ ವಿವಿಧ ಶೈಲಿಯ ಶಿಖರದ ಮಾದರಿಗಳನ್ನು ಮತ್ತು ಇನ್ನಿತರ ಶಿಲ್ಪಗಳ ಮೇಲ್ಭಾಗದಲ್ಲಿ ಲಂಬ ಕೋನದಲ್ಲಿ ಸುರುಳಿಯಾಕಾರದ ಕೆತ್ತನೆಗಳನ್ನು ಮಾಡಲಾಗಿದೆ. ಹಾಗೂ ಈ ಭಿತ್ತಿ ಶಿಲ್ಪಗಳ ನಡುವೆ ಅಲಂಕಾರಿಕವಾಗಿ ಅರೆಗಂಬಗಳ ನಿರ್ಮಾಣವನ್ನು ಗುರುತಿಸಬಹುದಾಗಿದೆ. ಈ ದೇವಾಲಯದ ಭಿತ್ತಿ ಶಿಲ್ಪಗಳು ಬಹಳ ಆಕರ್ಷಣೀಯವೂ, ಮನಮೋಹಕವೂ ಆಗಿದ್ದು ಇವುಗಳನ್ನು ಪ್ರದಕ್ಷಿಣಾ ಕ್ರಮದಲ್ಲಿ ಆಯಾ ದಿಕ್ಕುಗಳಿಗನುಗುಣವಾಗಿ ಈ ಕೆಳಕಂಡಂತೆ ಹೆಸರಿಸಲಾಗಿದೆ.

**ಬೂಚೇಶ್ವರ ದೇವಾಲಯದ ಭಿತ್ತಿ ಶಿಲ್ಪಗಳು**

**ಪೂರ್ವ ದಿಕ್ಕಿಗೆ ಅಭಿಮುಖವಾಗಿರುವ ಶಿಲ್ಪಗಳು**

1. ಸ್ಥಾನಕ ಸರಸ್ವತಿ- ಈಕೆಯು ಪಾಶ, ಅಂಕುಶ, ಅಕ್ಷಮಾಲೆ ಮತ್ತು ಪುಸ್ತಕವನ್ನು ಹಿಡಿದಿದ್ದಾಳೆ.

2. ಗಣೇಶನು ಮೂಷಿಕ ಪೀಠದ ಮೇಲೆ ನರ್ತನ ಮಾಡುತ್ತಿರುವ ಶಿಲ್ಪ

3. ಅರ್ಜುನ ಶಿಲ್ಪ-ಮತ್ಸ್ಯಕ್ಕೆ ಗುರಿ ಇಡುತ್ತಿರುವುದು

4. ಪಾರ್ವತಿ-ಢಮರು, ತ್ರಿಶೂಲ, ಪಾಶ ಮತ್ತು ಅಂಕುಶಧಾರಿಯಾಗಿದ್ದಾಳೆ.

**ದಕ್ಷಿಣ ದಿಕ್ಕಿಗೆ ಅಭಿಮುಖವಾಗಿರುವ ಶಿಲ್ಪಗಳು:**

5. ಭೈರವ ಶಿಲ್ಪ

6, 7. ಹಿರಣ್ಯಕಶಿಪು ಮತ್ತು ಈತನ ಸೈನಿಕನು ಪ್ರಹ್ಲಾದನನ್ನು ಎಳೆದೊಯ್ಯುತ್ತಿರುವ ಶಿಲ್ಪಗಳು

8. ಪ್ರಹ್ಲಾದನನ್ನು ಬೆಂಕಿಯಲ್ಲಿರಿಸಿರುವ ಶಿಲ್ಪ

9. ಪ್ರಹ್ಲಾದನನ್ನು ಆನೆಗಳ ಮೂಲಕ ಹಿಂಸಿಸುತ್ತಿರುವ ಶಿಲ್ಪ

10. ಪ್ರಹ್ಲಾದನನ್ನು ಸರ್ಪಗಳ ನಡುವೆ ಚಿತ್ರಿಸಿರುವ ಶಿಲ್ಪ

11. ನರಸಿಂಹನು ಹಿರಣ್ಯಕಶಿಪುವಿಗೆ ಕಂಬದಲ್ಲಿ ಕಾಣಿಸಿಕೊಂಡಿರುವುದು

12. ನರಸಿಂಹನು ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳಿ, ಕರುಳನ್ನು ಹಾರವಾಗಿ ಧರಿಸಿರುವ ಶಿಲ್ಪ, ಈ ಶಿಲ್ಪದ ಎಡಬದಿಯಲ್ಲಿ ಪ್ರಹ್ಲಾದನು ಬಲಭಾಗದಲ್ಲಿ ಲಕ್ಷ್ಮಿಯು ನಿಂತಿರುವಂತೆ ಕೆತ್ತಲಾಗಿದೆ

13. ವಾದ್ಯ ನುಡಿಸುತ್ತಿರುವ ಶಿಲ್ಪ

14. ಭಗ್ನ ಶಿಲ್ಪ

15. ಕೊಳಲನ್ನು ನುಡಿಸುತ್ತಿರುವ ತ್ರಿಭಂಗಿಯ ಶಿಲ್ಪ

16. ಭೈರವ-ಬಲಹಿಂಬದಿಯ ಕೈಯಲ್ಲಿ ತ್ರಿಶೂಲ, ಮುಂಬದಿಯ ಕೈಯಲ್ಲಿ ಕತ್ತಿ, ಎಡ ಹಿಂಬದಿಯ ಕೈಯಲ್ಲಿ ಢಮರು ಮತ್ತು ಎಡ ಮುಂಗೈನಲ್ಲಿ ರುಂಡವನ್ನು ಹಿಡಿದಿದ್ದಾನೆ

17. ಕಾಪಾಲಿಕ-ದ್ವಿಭಂಗಿಯಲ್ಲಿದು ಆಭರಣ ಭೂಷಿತನಾಗಿದ್ದಾನೆ

18. ಪದ್ಮ ಮತ್ತು ಕಳಸವನ್ನು ಹಿಡಿದಿರುವ ದೇವಿ ಶಿಲ್ಪ

19. ಗಜಾಸುರ ಸಂಹಾರ ಮೂರ್ತಿ

**ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿರುವ ಶಿಲ್ಪಗಳು**:

20. ಶ್ವೇತವರಾಹ ಮೂರ್ತಿ

21. ಸ್ಥಾನಕ ಲಕ್ಷ್ಮಿ-ಎಡಗೈಯಲ್ಲಿ ಫಲ ಮತ್ತು ಬಲಗೈಯಲ್ಲಿ ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ಶಿಲ್ಪ

22. ಸೂರ್ಯ ಶಿಲ್ಪ-ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದಿರುತ್ತಾನೆ

23. ಮೋಹಿನಿ ಶಿಲ್ಪ-ನರ್ತನ ರೂಪದಲ್ಲಿದ್ದಾಳೆ

**ದಕ್ಷಣ ದಿಕ್ಕಿಗೆ ಅಭಿಮುಖವಾಗಿರುವ ಶಿಲ್ಪಗಳು**:

24. ಶ್ರೀದೇವಿ ಶಿಲ್ಪ

25. ತ್ರಿವಿಕ್ರಮ-ಸರ್ವಾಲಂಕಾರ ಭೂಷಿತನಾಗಿದ್ದು ಎಡಪಾರ್ಶ್ವದ ಕೈಗಳು ನಷ್ಟವಾಗಿವೆ

26. ಭೂದೇವಿ ಶಿಲ್ಪ

27. ಲಕ್ಷ್ಮಣ-ದ್ವಿಭಂಗಿಯಲ್ಲಿ ಬಿಲ್ಲು ಮತ್ತು ಬಾಣವನ್ನು ಹಿಡಿದಿದ್ದಾನೆ

28. ಕೋದಂಡರಾಮ ಶಿಲ್ಪ-ಬಿಲ್ಲು ಮತ್ತು ಬಾಣವನ್ನು ಹಿಡಿದಿದ್ದು ದ್ವಿಭಂಗಿಯಲ್ಲಿದ್ದಾನೆ

29. ಹನುಮಂತ-ಕೈಮುಗಿದು ನಿಂತಿರುವ ಶಿಲ್ಪ

30. ಉಮಾಮಹೇಶ್ವರ ಶಿಲ್ಪ

31. ಬ್ರಹ್ಮನ ಸ್ಥಾನಕ ಭಂಗಿಯ ಶಿಲ್ಪ

32. ಶಾರದಾ ಶಿಲ್ಪ-ಬಲಗೈಯಲ್ಲಿ ಅಕ್ಷಮಾಲೆ ಮತ್ತು ಎಡಗೈಯಲ್ಲಿ ಪುಸ್ತಕವನ್ನು ಹಿಡಿದ ತ್ರಿಭಂಗಿಯ ಶಿಲ್ಪ

33. ಕೇಶವ ಶಿಲ್ಪ

34. ದುರ್ಗಾ-ಎಡಗೈನಲ್ಲಿ ಕಳಸ ಮತ್ತು ಬಲಗೈನಲ್ಲಿ ಕತ್ತಿಯನ್ನು ಹಿಡಿದಿದ್ದು ಭಾಗಶಃ ಭಗ್ನವಾಗಿದೆ

೩೫. ದಕ್ಷಿಣಾಮೂರ್ತಿ–ಅಕ್ಷಮಾಲೆ, ಪಾಶ, ಫಲ ಮತ್ತು ಪುಸ್ತಕವನ್ನು ಹಿಡಿದಿದ್ದಾನೆ

**ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿರುವ ಶಿಲ್ಪಗಳು:**

೩೬, ೩೭. ಭಗ್ನವಾದ ದೇವ–ದೇವಿಯ ಶಿಲ್ಪ, ಮನ್ಮಥ–ರತಿ (?)

೩೮. ಪುರುಷ–ಮಹಿಳೆಯ ಚುಂಬನ ರೂಪದ ಶಿಲ್ಪ

೩೯, ೪೦, ೪೧. ಧರಣಿ ವರಾಹ ಮತ್ತು ಇಬ್ಬರು ಪರಿಚಾರಕಿಯರ ಶಿಲ್ಪಗಳು

೪೨. ದಕ್ಷಿಣಾಮೂರ್ತಿಯು ತ್ರಿಭಂಗಿಯಲ್ಲಿ ನಿಂತಿರುವ ಶಿಲ್ಪ

೪೩. ದೇವತಾ ಶಿಲ್ಪ–ಭಗ್ನವಾಗಿದೆ

೪೪. ಸ್ಥಾನಕ ಶಿವ–ಅಕ್ಷಮಾಲೆ, ತ್ರಿಶೂಲ, ಢಮರು ಮತ್ತು ಫಲವನ್ನು ಹಿಡಿದಿದ್ದಾನೆ

೪೫. ಭಗ್ನ ಶಿಲ್ಪ

೪೬. ಸರಸ್ವತಿ–ಫಲ, ಅಕ್ಷಮಾಲೆ, ಕಳಸ ಮತ್ತು ಪುಸ್ತಕವನ್ನು ಹಿಡಿದಿದ್ದಾಳೆ

೪೭. ಸರಸ್ವತಿ–ವೀಣೆಯನ್ನು ನುಡಿಸುತ್ತಿರುವ ಶಿಲ್ಪ

೪೮, ೪೯, ೫೦. ತಾಂಡವೇಶ್ವರ ಮೂರ್ತಿ–ಬಲಭಾಗದಲ್ಲಿ ದೇವಿ, ಎಡಭಾಗದಲ್ಲಿ ಮೃದಂಗ ನುಡಿಸುತ್ತಿರುವ ಶಿಲ್ಪ

೫೧. ಭಗ್ನ ಶಿಲ್ಪ

೫೨. ಪದ್ಮ ಮತ್ತು ಫಲವನ್ನು ಹಿಡಿದಿರುವ ದೇವಿ ಶಿಲ್ಪ

೫೩. ಭಗ್ನ ಶಿಲ್ಪ

೫೪. ದಂಪತಿಗಳ ಮಿಥುನ ಶಿಲ್ಪ

೫೫. ಮೋಹಿನಿಯ ನರ್ತನ ಶಿಲ್ಪ

೫೬. ದೇವಿಯು ಢಮರನ್ನು ಹಿಡಿದು ನರ್ತಿಸುತ್ತಿರುವ ಶಿಲ್ಪ

೫೭. ಸ್ತ್ರೀ ಶಿಲ್ಪ–ಎಡಗೈ ಮೇಲೆ ಗಿಳಿ ಮತ್ತು ಬಲಗೈಯಲ್ಲಿ ಹಣ್ಣುಗಳಿರುವಂತೆ ಕೆತ್ತಲಾಗಿದೆ

58. ಕಾಪಾಲಿಕ-ತ್ರಿಶೂಲ, ಕತ್ತಿ, ಢಮರನ್ನು ಹಿಡಿದು ನಗ್ನವಾಗಿದ್ದಾಳೆ, ಒಂದು ಕೈ ಭಗ್ನವಾಗಿದೆ.

59. ಲಕ್ಷ್ಮಿ-ಪಾಶ ಮತ್ತು ಕಳಸವನ್ನು ಹಿಡಿದಿದ್ದಾಳೆ

60. ಪ್ರದ್ಯುಮ್ನ-ಶಂಖ, ಚಕ್ರ, ಗದಾಧಾರಿಯಾಗಿ ಪದ್ಮವನ್ನು ಹಿಡಿದಿದ್ದಾನೆ

**ಉತ್ತರ ದಿಕ್ಕಿಗೆ ಅಭಿಮುಖವಾಗಿರುವ ಶಿಲ್ಪಗಳು:**

61. ಅನಂತಶಯನ

62. ಕಾಳಿಂಗಮರ್ಧನ ಶಿಲ್ಪ

63. ವೇಣುಗೋಪಾಲ-ಇದರಲ್ಲಿ ಕೃಷ್ಣನು ತ್ರಿಭಂಗಿಯಲ್ಲಿ ನಿಂತು ಕೊಳಲನ್ನು ನುಡಿಸುತ್ತಿದ್ದು, ಸುತ್ತಲೂ ಗೋವುಗಳ ಶಿಲ್ಪಗಳು ಕಂಡು ಬರುತ್ತವೆ

64. ನವನೀತ ಕೃಷ್ಣ

65. ನಾಗನಾಗಿಣಿಯ ಶಿಲ್ಪ

66. ವಾಮನ ಬಲಿಚಕ್ರವರ್ತಿಯಿಂದ ವರವನ್ನು ಪಡೆಯುತ್ತಿರುವ ಶಿಲ್ಪ

67. ತ್ರಿವಿಕ್ರಮ ಶಿಲ್ಪ-ಇದರಲ್ಲಿ ತ್ರಿವಿಕ್ರಮನು ಬ್ರಹ್ಮಲೋಕಕ್ಕೆ ಕಾಲನ್ನು ಎತ್ತಿರುವಂತೆ ಕೆತ್ತಲಾಗಿದೆ

68. ರಾವಣನು ಕೈಲಾಸ ಪರ್ವತವನ್ನು ಎತ್ತುತ್ತಿರುವ ಶಿಲ್ಪ

69, 70. ಮೋಹಿನಿ ಮತ್ತು ದಕ್ಷಿಣಾಮೂರ್ತಿಯ ಶಿಲ್ಪ

71. ಭೈರವ ಶಿಲ್ಪ-ತ್ರಿಶೂಲ, ಕತ್ತಿ, ಢಮರು ಮತ್ತು ರುಂಡವನ್ನು ಹಿಡಿದಿದ್ದಾನೆ

72. ಗರುಡ ಶಿಲ್ಪ

73. ಗೋವರ್ಧನ ಗಿರಿಧಾರಿ

74. ಲಕ್ಷ್ಮಿ-ಫಲ ಮತ್ತು ಪಾಶವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿದ್ದಾಳೆ

75. ವೃಷಭಾರೂಢ ಉಮಾಮಹೇಶ್ವರ

**ಪೂರ್ವಾಭಿಮುಖವಾಗಿರುವ ಶಿಲ್ಪಗಳು**

76. ಭೈರವ ಶಿಲ್ಪ

77. ವೀರಭದ್ರ ಶಿಲ್ಪ-ಬಲಗೈಯಲ್ಲಿ ಗದೆಯನ್ನು ಹಿಡಿದಿದ್ದಾನೆ. ಭಾಗಶಃ ಈ ಶಿಲ್ಪವು ಭಗ್ನವಾಗಿದೆ.

78. ಷಣ್ಮುಖ-ಪಾಶ, ಅಂಕುಶ, ಅಕ್ಷಮಾಲೆ ಮತ್ತು ಫಲವನ್ನು ಹಿಡಿದಿರುವ ಈತನು ನವಿಲಿನ ಪೀಠದ ಮೇಲೆ ನಿಂತಿದ್ದಾನೆ

79. ಮಹಿಷಮರ್ಧಿನಿ-ಸಿಂಹ ಪೀಠದ ಮೇಲಿರುವ ದೇವಿಯು ತ್ರಿಶೂಲದಿಂದ ಮಹಿಷನ ಹೊಟ್ಟೆಗೆ ತಿವಿಯುತ್ತಿರುವಂತೆ ಶಿಲ್ಪವನ್ನು ಕೆತ್ತಿದ್ದಾರೆ

**ಸೂರ್ಯಗುಡಿಯ ಭಿತ್ತಿಯಲ್ಲಿ ಕಂಡು ಬರುವ ಶಿಲ್ಪಗಳು:**

**ಉತ್ತರಾಭಿಮುಖವಾಗಿರುವ ಶಿಲ್ಪಗಳು:**

೮೦. ಪದ್ಮವನ್ನು ಹಿಡಿದು ನಿಂತಿರುವ ಸ್ತ್ರೀ ಶಿಲ್ಪ

೮1. ಮೋಹಿನಿ ಶಿಲ್ಪ

೮2. ಸರಸ್ವತಿಯ ಭಗ್ನ ಶಿಲ್ಪ

೮3. ಸ್ಥಾನಕ ಶಿವ-ಬಹುಶಃ ಇದು ಪೂರ್ಣವಾಗಿ ಕೆತ್ತಿಲ್ಲದಿರುವಂತೆ ತೋರುತ್ತದೆ

೮4. ಮಹಿಳೆಯು ಗಿಳಿಗೆ ಫಲವನ್ನು ನೀಡುತ್ತಿರುವ ಶಿಲ್ಪ

೮5, ೮6. ವಾದ್ಯಗಾರರು ವಾದ್ಯವನ್ನು ನುಡಿಸುತ್ತಿರುವುದು

೮7. ದುರ್ಗಿಯು ನರ್ತಿಸುತ್ತಿರುಂತೆ ಶಿಲ್ಪವನ್ನು ಕೆತ್ತಲಾಗಿದೆ

೮೮, ೮9. ವಾದ್ಯಗಾರರು

90. ಮಹಿಳೆಯು ಒಂದು ರೀತಿಯ ಸಂಗೀತ ಉಪಕರಣವನ್ನು ನುಡಿಸುತ್ತಿರುವಂತಿರುವ ಶಿಲ್ಪ

91. ಚಂದ್ರ-ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದು ಸಮಭಂಗಿಯಲ್ಲಿ ನಿಂತಿರುವ ಶಿಲ್ಪ

**ಪೂರ್ವಾಭಿಮುಖವಾಗಿರುವ ಶಿಲ್ಪಗಳು**

೯೨. ಸ್ಥಾನಕ ಸೂರ್ಯ ಶಿಲ್ಪ-ಭಗ್ನವಾಗಿದೆ

೯೩. ಚಾಮರಧಾರಿಣಿಯ ಶಿಲ್ಪ

೯೪, ೯೫. ವಾದ್ಯಗಾರರು ವಾದ್ಯವನ್ನು ನುಡಿಸುತ್ತಿರುವ ಶಿಲ್ಪಗಳು

೯೬. ನರ್ತನ ಗಣಪತಿಯ ಶಿಲ್ಪ

೯೭, ೯೮. ವಾದ್ಯಗಾರರು ಮೃದಂಗವನ್ನು ನುಡಿಸುತ್ತಿರುವ ಶಿಲ್ಪಗಳು

೯೯. ಮಹಿಳಾ ಶಿಲ್ಪ-ಬಲಗೈಯಲ್ಲಿ ಪದ್ಮವನ್ನು ಎಡಗೈಯಲ್ಲಿ ಫಲವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿದ್ದಾಳೆ

೧೦೦. ಸ್ಥಾನಕ ಸೂರ್ಯ ಶಿಲ್ಪ-ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದು ಸರ್ವಾಲಂಕಾರ ಭೂಷಿತನಾಗಿದ್ದಾನೆ.

**ದಕ್ಷಿಣಾಭಿಮುಖವಾಗಿರುವ ಶಿಲ್ಪಗಳು**

೧೦೧. ಸಪ್ತಾಶ್ವ ಪೀಠದ ಮೇಲಿರುವ ಸ್ಥಾನಕ ಸೂರ್ಯ ಶಿಲ್ಪ

೧೦೨. ಮನ್ಮಥ-ಬಿಲ್ಲು ಮತ್ತು ಹೂಬಾಣವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿದ್ದಾನೆ

೧೦೩. ಗಜೇಂದ್ರ ಮೋಕ್ಷ ಶಿಲ್ಪ

೧೦೪. ಛಾಮರಧಾರಿಣಿಯ ಶಿಲ್ಪ

೧೦೫. ಸುಖಾಸನದಲ್ಲಿ ಕುಳಿತಿರುವ ಉಮಾಮಹೇಶ್ವರ ಶಿಲ್ಪ

೧೦೬. ಛಾಮರಧಾರಿಣಿಯ ಶಿಲ್ಪ

೧೦೭. ಈ ಶಿಲ್ಪದಲ್ಲಿ ಒಂದು ಜಿಂಕೆಯನ್ನು ಹಾವು ನುಂಗುತ್ತಿದ್ದು, ಹಾವನ್ನು ಆನೆಯು ಸೊಂಡಿಲಿನ ಮೂಲಕ ಹಿಡಿದಿದೆ. ನಂತರ ಆನೆಯ ಮೇಲೆ ಸಿಂಹವು, ಸಿಂಹದ ಮೇಲೆ ಶರಭ, ಶರಭದ ಮೇಲೆ ಗಂಡಬೇರುಂಡದ ಶಿಲ್ಪವನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ

೧೦೮, ೧೦೯, ೧೧೦. ಪರಿಚಾರಕಿಯರ ನಡುವೆ ಇರುವ ದೇವತಾ ಶಿಲ್ಪ

111. ಮೋಹಿನಿ ಶಿಲ್ಪ-ಭಗ್ನವಾಗಿದೆ

112. ದಕ್ಷಿಣಾಮೂರ್ತಿ ಶಿಲ್ಪ-ಭಗ್ನವಾಗಿದೆ

ಹೀಗೆ ಭಿತ್ತಿಯು ಶೈವ ಮತ್ತು ವೈಷ್ಣವ ಪರಂಪರೆಯ ಶಿಲ್ಪಗಳು ಮತ್ತು ರಾಮಾಯಣ, ಮಹಾಭಾರತ ಹಾಗೂ ಭಾಗವತದ ಕಥಾನಿರೂಪಣಾ ಶಿಲ್ಪಗಳಿಂದ ಅಲಂಕೃತವಾಗಿದ್ದು, ಈ ಶಿಲ್ಪಗಳು ದೇವಾಲಯದ ಸೌಂದರ್ಯವನ್ನು ಹೆಚ್ಚಿಸುವುದರ ಜೊತೆಗೆ ಭಾರತದ ಧಾರ್ಮಿಕ ಪರಂಪರೆ, ಸಂಸ್ಕೃತಿ ಮತ್ತು ಪೌರಾಣಿಕ ಹಿನ್ನೆಲೆಯನ್ನು ನೋಡುಗರಿಗೆ ಮನಮುಟ್ಟುವಂತೆ ತಿಳಿಸುತ್ತವೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ ಎಂಬುದಾಗಿ ಅಭಿಪ್ರಾಯಿಸಬಹುದಾಗಿದೆ.

**ಪ್ರಸ್ತರ**:ಈ ದೇವಾಲಯದ ಪ್ರಸ್ತರದ ಭಾಗವು ಸುಂದರವಾದ ರೀತಿಯಲ್ಲಿ ಜೋಡಣೆಗೊಂಡಿದ್ದು, ಉತ್ತರ, ವಲ್ಲಭಿ, ಕಪೋತ ಮತ್ತು ವಾಜನಗಳನ್ನು ಒಳಗೊಂಡಿದೆ. ಕಪೋತದ ಮೇಲ್ಭಾಗದಲ್ಲಿ ಪದ್ಮ ಅದರ ಮೇಲ್ಭಾಗದಲ್ಲಿ ಆಲಿಂಗವನ್ನು ಅಳವಡಿಸಲಾಗಿದೆ. ಈ ಆಲಿಂಗ ಭಾಗದಲ್ಲಿ ಯಕ್ಷ-ಯಕ್ಷಿಯರ ಶಿಲ್ಪಗಳು, ವ್ಯಾಳ, ಸಿಂಹ, ಮಕರ, ಹಂಸ, ಸಳನ ಶಿಲ್ಪಗಳು, ಕೀರ್ತಿಮುಖ, ನಂದಿ, ಕುದುರೆ, ಗರುಡ ಇನ್ನೂ ಮುಂತಾದ ಶಿಲ್ಪಗಳನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ.

**ಹಾರ**: ಈ ಭಾಗವು ಹೆಚ್ಚಿನ ಅಲಂಕರಣಗಳಿಂದ ಕೂಡಿದ್ದು ಕೂಟ, ಶಾಲಾ, ಪಂಜರ, ನಾಸೀ ಮತ್ತು ಅರ್ಧನಾಸಿಗಳು, ಕೀರ್ತಿಮುಖಗಳನ್ನು ಹೊಂದಿದೆ. ಈ ಹಾರ ಭಾಗದ ನಾಸಿ ಮತ್ತು ಅರ್ಧನಾಸಿಗಳ ಒಳಗೆ ಯಕ್ಷ-ಯಕ್ಷಿಯರು, ದೇವತೆಯರ ಶಿಲ್ಪಗಳನ್ನು ಕೆತ್ತಲಾಗಿದ್ದು, ಇವುಗಳ ಮೇಲ್ಭಾಗದಲ್ಲಿ ಕೀರ್ತಿಮುಖಗಳ ರಚನೆ ಕಂಡು ಬರುತ್ತದೆ. ದಕ್ಷಿಣ ದಿಕ್ಕಿನ ಹಾರ ಭಾಗದ ಭದ್ರಶಾಲಾದಲ್ಲಿ ಯೋಗಾನರಸಿಂಹನ ಶಿಲ್ಪವಿದ್ದು ಇದರ ಎರಡೂ ಪಾರ್ಶ್ವದಲ್ಲಿ ಮಕರಗಳ ಬಾಯಿಂದ ಹೊರಬಂದಂತಹ ತೋರಣದ ಕೆತ್ತನೆ ಕಂಡು ಬರುತ್ತದೆ. (ಚಿ.ಸಂ. 47) ಉತ್ತರ ದಿಕ್ಕಿನ ಹಾರ ಭಾಗದ ಭದ್ರಶಾಲಾದಲ್ಲಿ ಅತ್ಯಂತ ಸುಂದರವಾದ ಉಮಾಮಹೇಶ್ವರ ಶಿಲ್ಪವಿದ್ದು ಇದರ ಮೇಲ್ಭಾಗದಲ್ಲಿ ಕೀರ್ತಿಮುಖದ ಕೆತ್ತನೆ ಕಂಡು ಬರುತ್ತದೆ.[58]

**ಶಿಖರ**: ಈ ದೇವಾಲಯವು ಮೂರು ತಲಗಳನ್ನು ಹೊಂದಿರುವ ಸುಂದರವಾದ ದ್ರಾವಿಡ ಶೈಲಿಯ ವಿಮಾನವನ್ನು ಹೊಂದಿದೆ.[59] (ಚಿ.ಸಂ. 48) ಇದು ಕರ್ಣಕೂಟಗಳು, ಶಾಲಾ, ಭದ್ರಶಾಲಾ, ನಾಸೀ, ಅರ್ಧನಾಸಿ, ಕೀರ್ತಿಮುಖ ಮುಂತಾದವುಗಳನ್ನು ಹೊಂದುವ ಮೂಲಕ ಆಕರ್ಷಕವಾಗಿ ನಿರ್ಮಾಣವಾಗಿದೆ. ನಾಸೀ, ಅರ್ಧನಾಸೀಗಳ ಒಳಗೆ ಯಕ್ಷ-ಯಕ್ಷಿಯರು, ದೇವ-ದೇವತೆಗಳ ಶಿಲ್ಪಗಳನ್ನು ನಿರ್ಮಿಸಲಾಗಿದ್ದು ಪೂರ್ಣ ನಾಸಿಗಳ ಮೇಲೆ ಪೂರ್ಣ ಕೀರ್ತಿಮುಖಗಳನ್ನು, ಅರ್ಧ ನಾಸಿಗಳ ಮೇಲೆ ಅರ್ಧ ಕೀರ್ತಿಮುಖಗಳನ್ನು ಕೆತ್ತಲಾಗಿದೆ.

ಉತ್ತರ ದಿಕ್ಕಿನ ಮೊದಲನೇ ತಲದಲ್ಲಿ ಕಂಡು ಬರುವ ಭದ್ರಶಾಲಾದಲ್ಲಿ ಇಂದ್ರನು ಆನೆಯ ಮೇಲೆ ಕುಳಿತಿರುವ ಶಿಲ್ಪವನ್ನು ಕೆತ್ತಲಾಗಿದೆ.[60] ಇದೇ ರೀತಿಯಾಗಿ ಶಿಖರದ ವಿವಿಧ ಭಾಗದ ನಾಸಿಗಳಲ್ಲಿ ಶಿವಲೀಲಾ ಮೂರ್ತಿಯ ಶಿಲ್ಪಗಳನ್ನು ಸಹ ನಿರ್ಮಿಸಲಾಗಿದೆ. ಶಿಖರದ ಮೂರು ತಲಗಳ ನಂತರ ವೇದಿ ಭಾಗವಿದ್ದು ಇದರ ಮೇಲ್ಭಾಗದಲ್ಲಿ ಚತುರಶ್ರವಾಗಿ, ಅಲಂಕಾರಿಕ ಕೆತ್ತನೆಗಳಿಂದ ಕೂಡಿರುವ ಅದೋಪದ್ಮ, ಇದರ ಮೇಲ್ಭಾಗದಲ್ಲಿ ಅತ್ಯಂತ ಸುಂದರವಾದ ಕಳಸ ಕಂಡು ಬರುತ್ತದೆ. ಈ ಶಿಖರದ ಮುಂಭಾಗದ ಸುಖನಾಸದಲ್ಲಿ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪವನ್ನು ಆಕರ್ಷಕವಾಗಿ ನಿರ್ಮಿಸಲಾಗಿದೆ. ಈ ಸುಖನಾಸವು ಶಾಲಾ ಮಾದರಿಯಲ್ಲಿ ನಿರ್ಮಾಣವಾಗಿದ್ದು ಇದರ ಮುಂಭಾಗದ ಫಲಕದಲ್ಲಿ ತಾಂಡವೇಶ್ವರ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.[61, 62] ಹೀಗೆ ಬೂಚೇಶ್ವರ ದೇವಾಲಯದ ಶಿಖರವು ಹೊಯ್ಸಳ-ದ್ರಾವಿಡ ಶೈಲಿಯಲ್ಲಿ ಅತ್ಯಂತ ಸುಂದರವಾದ ಶಿಖರವನ್ನು ಹೊಂದಿದ್ದರೆ (ಚಿ.ಸಂ. 49) ಇದರ ಮುಂಭಾಗವಿರುವ ಸೂರ್ಯಗರ್ಭಗುಡಿಗೆ ಶಿಖರವು ಕಂಡು ಬರುವುದಿಲ್ಲ. ಈ ಗುಡಿಯ ಮೇಲ್ಭಾಗದಲ್ಲಿ ಕೇವಲ ಆಲಿಂಗ ರಚನೆಯು ಮಾತ್ರ ಕಂಡು ಬರುತ್ತದೆ.

**ಮುಖಮಂಟಪದ ದ್ವಾರ ಮತ್ತು ದ್ವಾರಪಾಲಕರು:** ಈ ದೇವಾಲಯವು ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ದ್ವಾರಗಳನ್ನು ಹೊಂದಿದ್ದು ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಾರಪಾಲಕರ ಶಿಲ್ಪಗಳು ಕಂಡು ಬರುತ್ತವೆ. ದಕ್ಷಿಣ ದಿಕ್ಕಿನ ದ್ವಾರದ ಮೆಟ್ಟಿಲುಗಳ ಎರಡು ಪಾರ್ಶ್ವದಲ್ಲಿ ಎರಡು ಬೃಹತ್ ಆನೆಯ ಶಿಲ್ಪಗಳು ಕಂಡು ಬರುತ್ತವೆ. ಇವುಗಳಲ್ಲಿ ಬಲಭಾಗದ ಆನೆಯು ಪೂರ್ಣಾಲಂಕಾರಗಳಿಂದ ಕೆತ್ತಲ್ಪಟ್ಟಿದ್ದರೆ ಎಡಭಾಗದ ಆನೆಯ ಶಿಲ್ಪವು ಅಪೂರ್ಣ ಕೆತ್ತನೆಯಿಂದ ಕೂಡಿದೆ. ಈ ದ್ವಾರದ ಎರಡೂ ಪಾರ್ಶ್ವದಲ್ಲಿ ಶೈವ ದ್ವಾರಪಾಲಕರಾದ ಕಾಲ ಮಹಾಕಾಲರ ಶಿಲ್ಪಗಳು ಕಂಡು ಬಂದಿದ್ದು ಇವು ಸುಮಾರು 5 ಅಡಿ ಎತ್ತರವನ್ನು ಹೊಂದಿವೆ. (ಚಿ.ಸಂ. 50) ಬಲಭಾಗದ ದ್ವಾರಪಾಲಕನು ದ್ವಿಭಂಗಿಯಲ್ಲಿ ನಿಂತಿದ್ದು ಬಲ ಹಿಂಭಾಗದ ಕೈಯಲ್ಲಿ ಢಮರು ಮತ್ತು ಎಡ ಹಿಂಭಾಗದ ಕೈಯಲ್ಲಿ ಸರ್ಪವನ್ನು ಹಿಡಿದಿದ್ದಾನೆ. ಮುಂದಿನ ಎರಡೂ ಕೈಗಳು ನಷ್ಟವಾಗಿದ್ದು ಈತನು ಹಾರ, ಕಂಠೀಹಾರ, ಉದರ ಬಂಧ, ಯಜ್ಞೋಪವೀತ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದು ಈತನ ಬಲಭಾಗದಲ್ಲಿ ಚಾಮರಧಾರಿಣಿಯ ಶಿಲ್ಪವು ಕಂಡು ಬರುತ್ತದೆ. ಎಡಭಾಗದ ದ್ವಾರಪಾಲಕನು ಸಹ ಸರ್ವಾಭರಣ ಭೂಷಿತನಾಗಿದ್ದು ದ್ವಿಭಂಗಿಯಲ್ಲಿ ನಿಂತಿದ್ದಾನೆ. ಈತನ ಮೂರು ಕೈಗಳು ನಷ್ಟವಾಗಿದ್ದು ಎಡ ಹಿಂಭಾಗದ ಕೈಯಲ್ಲಿ ಢಮರನ್ನು ಹಿಡಿದಿದ್ದಾನೆ. ಈತನ ಎಡ ಪಾರ್ಶ್ವದಲ್ಲಿಯೂ ಸಹ ಚಾಮರಧಾರಿಣಿಯ ಶಿಲ್ಪವು ಕಂಡು ಬರುತ್ತದೆ. ಉತ್ತರ ದಿಕ್ಕಿನ ದ್ವಾರದಲ್ಲೂ ಸರ್ವಾಭರಣ ಭೂಷಿತರಾದ ದ್ವಾರಪಾಲಕರು ಮತ್ತು

ಚಾಮರಧಾರಿಣಿಯರ ಶಿಲ್ಪಗಳು ಕಂಡು ಬರುತ್ತವೆ. ಇದರಲ್ಲಿ ಬಲಭಾಗದ ದ್ವಾರಪಾಲಕನು ಢಮರು, ತ್ರಿಶೂಲ ಮತ್ತು ಸರ್ಪವನ್ನು ಹಿಡಿದಿದ್ದು ಒಂದು ಕೈ ಭಗ್ನವಾಗಿದೆ. ಎಡಭಾಗದ ದ್ವಾರಪಾಲಕನು ಹಿಂಬದಿಯ ಕೈಗಳಲ್ಲಿ ಗದೆ ಮತ್ತು ಚಕ್ರವನ್ನು ಹಿಡಿದಿದ್ದು, ಒಂದು ಕೈ ಅಭಯ ಹಸ್ತವನ್ನು ಹೊಂದಿದ್ದರೆ ಇನ್ನೊಂದು ಕೈ ನಷ್ಟವಾಗಿದೆ. ಎರಡೂ ದ್ವಾರದ ಈ ದ್ವಾರಪಾಲಕರ ಶಿಲ್ಪಗಳನ್ನು ಗಮನಿಸಿದಾಗ ಇವುಗಳ ಮುಖ ಭಾಗವು ಜಜ್ಜಿದ ರೀತಿಯಲ್ಲಿ ನಶಿಸಿಹೋಗಿದ್ದು, ಬಹುಶಃ ಯಾವುದೋ ದಾಳಿಗೆ ಒಳಗಾದಂತೆ ತೋರುತ್ತದೆ.

**ಭೈರವ ಗುಡಿ**: ಬೂಚೇಶ್ವರ ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ಭೈರವ ಗುಡಿಯಿದ್ದು, ಇದು ಗರ್ಭಗೃಹ ಮತ್ತು ಸುಖನಾಸಿ ಭಾಗವನ್ನು ಹೊಂದಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಐದೂವರೆ ಅಡಿ ಎತ್ತರದ ಭೈರವ ಶಿಲ್ಪವಿದ್ದು ಈತನು ತ್ರಿಶೂಲ, ಢಮರು, ಕತ್ತಿ ಮತ್ತು ರುಂಡವನ್ನು ಹಿಡಿದಿದ್ದು, ಈ ರುಂಡವನ್ನು ನೆಕ್ಕುತ್ತಿರುವಂತೆ ನಾಯಿ ಶಿಲ್ಪವನ್ನು ಮತ್ತು ಬೇತಾಳಗಳನ್ನು ಎಡಭಾಗದಲ್ಲಿ ಕೆತ್ತಲಾಗಿದೆ.[63, 64] ಗರ್ಭಗುಡಿ ಮತ್ತು ಸುಖನಾಸಿ ಎರಡೂ ಕೂಡ ನವಪದ್ಮಮಂಡಲ ವಿತಾನವನ್ನು ಹೊಂದಿವೆ. ಈ ಗುಡಿಯ ಭಿತ್ತಿಯು ಬ್ರಹ್ಮಕಾಂತ ಭಿತ್ತಿ ಪಾದಗಳನ್ನು ಹೊಂದಿದ್ದು, ದ್ವಾರದ ಎರಡೂ ಪಾರ್ಶ್ವದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ. (ಚಿ.ಸಂ. 51) ಈ ಭೈರವ ಗುಡಿಯ ಉತ್ತರ ದಿಕ್ಕಿನ ಸ್ವಲ್ಪ ಅನತಿ ದೂರದಲ್ಲಿ ಒಂದು ವೀರಗಲ್ಲು ಶಾಸನ ಮತ್ತು ದೇವಾಲಯದ ದಕ್ಷಿಣ ದಿಕ್ಕಿನ ದ್ವಾರದ ಬಳಿ ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನ ಕಂಡು ಬರುತ್ತದೆ. ಒಟ್ಟಿನಲ್ಲಿ ಈ ಬೂಚೇಶ್ವರ ದೇವಾಲಯವು ಹೊಯ್ಸಳರ ಕಲಾ ಪ್ರೌಢಿಮೆಗೆ ಸಾಕ್ಷಿಯಾಗಿ ನಿಂತಿದ್ದು ಇದನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿಸಿದೆ.

**ಮೊಸಳೆ**

ಈ ಗ್ರಾಮವು ಹಾಸನ ನಗರದಿಂದ ದಕ್ಷಿಣಕ್ಕೆ 13 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಪುರಾಣದ ಪ್ರಕಾರ ಈ ಗ್ರಾಮವು ಜಮದಗ್ನಿ ಋಷಿಯ ಆಶ್ರಮವಾಗಿತ್ತೆಂದು ಹಾಗೂ ಪ್ರಾರಂಭದಲ್ಲಿ ಇದನ್ನು ಮುಸಲ ಎಂಬ ಹೆಸರಿನಿಂದ ಕರೆಯುತ್ತಿದ್ದರೆಂಬುದು ತಿಳಿದು ಬರುತ್ತದೆ.[65] 'ಮುಸಲ' ಎಂದರೆ ಒನಕೆ ಎಂದರ್ಥ. ಈ ಗ್ರಾಮದಲ್ಲಿ ನಾಗೇಶ್ವರ, ಚನ್ನಕೇಶವ, ಕಲ್ಲೇಶ್ವರ, ಆಂಜನೇಯ, ದ್ಯಾವಮ್ಮ ಮತ್ತು ಮಾರಿಯಮ್ಮ ಕಂಡು ಬಂದಿದ್ದು ಇವುಗಳಲ್ಲಿ ನಾಗೇಶ್ವರ, ಚನ್ನಕೇಶವ ಮತ್ತು ಕಲ್ಲೇಶ್ವರ ದೇವಾಲಯಗಳು ಹೊಯ್ಸಳರ ಆಳ್ವಿಕೆಯಲ್ಲಿ ನಿರ್ಮಾಣವಾದಂತಹ ಅತ್ಯಂತ ಸುಂದರವಾದ ಕಲಾಕೃತಿಗಳಾಗಿವೆ. ಆದರೆ ಈ

ದೇವಾಲಯಗಳ ನಿರ್ಮಾಣದ ಕಾಲಮಾನ ಮತ್ತು ಅರಸನ ಬಗ್ಗೆ ತಿಳಿಸುವ ಯಾವುದೇ ಶಾಸನ ಕಂಡು ಬರುವುದಿಲ್ಲ. ನಾಗೇಶ್ವರ ದೇವಾಲಯದ ಮುಂದೆ ಎರಡು ಶಾಸನಗಳು ಕಂಡು ಬಂದಿದ್ದು ಅವುಗಳಲ್ಲಿ ಒಂದು ಶಾಸನ ಓದಲಾಗದಷ್ಟು ತ್ರುಟಿತವಾಗಿದ್ದು, ಇನ್ನೊಂದು ಶಾಸನ[66] ಕ್ರಿ.ಶ.1577ರಲ್ಲಿ ವಿಜಯನಗರ ಅರಸರ ಸಾಮಂತ ಎರಕೃಷ್ಣಪ್ಪ ನಾಯಕನು ಈ ದೇವಾಲಯಗಳಿಗೆ ದಾನ ನೀಡಿದ ಅಂಶಗಳನ್ನು ಉಲ್ಲೇಖಿಸುತ್ತದೆ. ನಾಗೇಶ್ವರ ಮತ್ತು ಚನ್ನಕೇಶವ ದೇವಾಲಯಗಳು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಒಂದು ಎತ್ತರವಾದ ಪ್ರದೇಶದ ಮೇಲೆ ಪೂರ್ವಾಭಿಮುಖವಾಗಿ ಅವಳಿ ದೇವಾಲಯಗಳಾಗಿ ನಿರ್ಮಾಣವಾಗಿದ್ದು ಒಂದೇ ರೀತಿಯ ತಲವಿನ್ಯಾಸ ಮತ್ತು ಏರುವಿನ್ಯಾಸದ ಲಕ್ಷಣಗಳನ್ನು ಹೊಂದಿವೆ.[67] (ಚಿ.ಸಂ. 52)

**ನಾಗೇಶ್ವರ ದೇವಾಲಯ**

ಇದು ಪೂರ್ವಾಭಿಮುಖವಾಗಿ ಚನ್ನಕೇಶವ ದೇವಾಲಯದ ಬಲಭಾಗದಲ್ಲಿ ಕಂಡು ಬರುತ್ತದೆ. (ಚಿ.ಸಂ. 53) ಇದು ಏಕಕೂಟ ದೇವಾಲಯವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳನ್ನು, ಏರುವಿನ್ಯಾಸದಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ ಭಾಗಗಳನ್ನು ಹೊಂದಿದ್ದು ಬಹಳ ಆಕರ್ಷಕವಾಗಿ ನಿರ್ಮಾಣವಾಗಿರುತ್ತದೆ.

**ಗರ್ಭಗೃಹ:** ಇದು 8X7 ಅಡಿ ಉದ್ದಗಲವನ್ನು ಹೊಂದಿದ್ದು ಪದ್ಮ, ಕುಮುದಾದಿ ಅಲಂಕರಣಗಳಿಂದ ಕೂಡಿರುವ ಅದ್ಭುತವಾದ 2 ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ನಾಗೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಲಿಂಗದ ಮುಖಭಾಗದಲ್ಲಿ ಬ್ರಹ್ಮಸೂತ್ರಪಾಥದ ಗೆರೆಗಳನ್ನು ಗಮನಿಸಬಹುದು. ಈ ಗರ್ಭಗುಡಿಯು ಸರಳ ಪದ್ಮದ ರಚನೆ ಹೊಂದಿರುವ ನಾಭಿಚ್ಛಂಧ ವಿತಾನವನ್ನು ಹೊಂದಿದೆ. ಇದರ ಬಾಗಿಲುವಾಡವು ವಜ್ರ, ವಲ್ಲೀ, ಸ್ತಂಭ ಮತ್ತು ವಲ್ಲೀ ಎಂಬ ಚತುರ್ಶಾಖೆಗಳನ್ನು ಹೊಂದಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವು ಕಂಡುಬರುತ್ತದೆ. (ಚಿ.ಸಂ. 54) ದ್ವಾರಬಂಧದ ಮೇಲ್ಭಾಗದಲ್ಲಿ ಪಿರಮಿಡ್ಡಿನಾ ಕೃತಿಯಲ್ಲಿರುವ 5 ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದ್ದು, ದ್ವಾರದ ಎರಡೂ ಪಾರ್ಶ್ವದಲ್ಲಿ ತ್ರಿಶೂಲ, ಢಮರು, ಗದೆ ಮತ್ತು ಅಭಯ ಹಸ್ತವನ್ನು ಹೊಂದಿರುವ ತ್ರಿಭಂಗಿಯಲ್ಲಿ ಸರ್ವಾಭರಣ ಭೂಷಿತರಾಗಿ ನಿಂತಿರುವ ಶೈವ ದ್ವಾರಪಾಲಕರಾದ ಕಾಲ ಮಹಾಕಾಲರ ಶಿಲ್ಪಗಳಿವೆ.

**ಸುಖನಾಸಿ**: ಗರ್ಭಗೃಹದ ನಂತರ ಸುಖನಾಸಿ ಭಾಗವಿದ್ದು ಇದು ಕೂಡ 8X7 ಅಡಿ ವಿಸ್ತೀರ್ಣವನ್ನು ಹೊಂದಿದೆ. ಇದರ ಎಡಪಾರ್ಶ್ವದಲ್ಲಿ ಒಂದು ಚಿಕ್ಕ ಲಿಂಗ ಮತ್ತು ಬಲಪಾರ್ಶ್ವದಲ್ಲಿ ಗಣೇಶ ಹಾಗೂ ನಾಗಶಿಲ್ಪವನ್ನು ಇಡಲಾಗಿದೆ. ಇದರ ಛಾವಣಿಯಲ್ಲಿ ಅಷ್ಟಪದ್ಮಗಳ ನಡುವೆ ತಾಂಡವ ಗಣೇಶ ಶಿಲ್ಪವನ್ನು ಚಿತ್ರಿಸಲಾಗಿದೆ. ಅಂತರಾಳದ ದ್ವಾರಬಂಧವು ಅತ್ಯಂತ ಸುಂದರವಾಗಿದ್ದು, ದ್ವಾರದ ಎರಡೂ ಬದಿಯಲ್ಲಿ ಕಂಬದ[68] ಹಾಗೂ ಜಾಲಾಂಧ್ರಗಳ ರಚನೆಯನ್ನು ಮಾಡಲಾಗಿದೆ. ಇವುಗಳ ಕೆಳಭಾಗದಲ್ಲಿ ದ್ವಾರಪಾಲಕಿಯರ ಶಿಲ್ಪಗಳು ಕಂಡು ಬರುತ್ತವೆ. ಬಲಭಾಗದ ದ್ವಾರಪಾಲಕಿಯು ತ್ರಿಭಂಗಿಯಲ್ಲಿ ನಿಂತಿದ್ದು ಬಲಭಾಗದ ಕೈಗಳಲ್ಲಿ ಚಕ್ರ, ಆಯುಧ, ಎಡಭಾಗದ ದ್ವಾರಪಾಲಕಿ ಮಹಾಕಾಳಿಯಾಗಿದ್ದು ಪಾಶ, ಅಂಕುಶವನ್ನು ಹಿಡಿದು ತರ್ಜನಿ ಹಸ್ತಮುದ್ರೆಯನ್ನು ಹೊಂದಿದ್ದಾಳೆ. ಈ ಇಬ್ಬರೂ ದ್ವಾರಪಾಲಕಿಯರ ಪಾರ್ಶ್ವದಲ್ಲಿ ಚಾಮರವನ್ನು ಹಿಡಿದ ಪರಿಚಾರಕಿಯರಿದ್ದಾರೆ. ಸುಖನಾಸಿ ದ್ವಾರಬಂಧದ ಮೇಲ್ಭಾಗದಲ್ಲಿ ಅತ್ಯಾಕರ್ಷಕವಾದ ಮಕರ ತೋರಣಗಳ ನಡುವೆ ಉಮಾಮಹೇಶ್ವರ ಶಿಲ್ಪವನ್ನು ನಿರ್ಮಿಸಲಾಗಿದೆ. (ಚಿ.ಸಂ. 55)

**ನವರಂಗ**: ಒಂಬತ್ತು ಅಂಕಣವನ್ನು ಒಳಗೊಂಡಿರುವ ನವರಂಗವಿದ್ದು, ಪ್ರತಿಯೊಂದು ಅಂಕಣದ ಮೇಲ್ಭಾಗದಲ್ಲಿ ಆಕರ್ಷಕವಾದ ಭುವನೇಶ್ವರಿಗಳನ್ನು ಅಳವಡಿಸಲಾಗಿದೆ. ನವರಂಗದಲ್ಲಿ ರಾಟಣೆಯಿಂದ ತಿರುಗಿಸಿ ಮಾಡಿರುವ ಸುಂದರವಾದ ನಾಲ್ಕು ಶ್ರೀಕಾರ ಸ್ತಂಭಗಳಿವೆ. (ಚಿ.ಸಂ. 56) ಇವುಗಳ ನಡುವೆ ನಾಗೇಶ್ವರ ಲಿಂಗಕ್ಕೆ ಅಭಿಮುಖವಾಗಿ ಆಭರಣಗಳಿಂದ ಅಲಂಕೃತವಾಗಿರುವ ಸುಂದರವಾದ ನಂದಿಯನ್ನು ಇರಿಸಲಾಗಿದೆ. ನವರಂಗದಲ್ಲಿ ಆರು ದೇವಕೋಷ್ಠಕಗಳಿದ್ದು, ಇವುಗಳನ್ನು ದೇವಾಲಯ ರಚನೆ ಮಾದರಿಯಲ್ಲಿಯೇ ಅಂದರೆ ಷಡ್ವರ್ಗ ಕ್ರಮದಲ್ಲಿಯೇ ನಿರ್ಮಿಸಲಾಗಿದೆ.[69] ಇವುಗಳನ್ನು ಪ್ರದಕ್ಷಿಣಾ ಕ್ರಮದಲ್ಲಿ ಅವಲೋಕಿಸಿದಾಗ ಮೊದಲನೇ ದೇವಕೋಷ್ಠದಲ್ಲಿ ಅವರವರ ವಾಸಹಸಮೇತರಾಗಿ ಆಸೀನರಾಗಿರುವ ಸಪ್ತಮಾತೃಕೆಯರ ಶಿಲ್ಪಪಟ್ಟಿಕೆಯು ಕಂಡು ಬರುತ್ತದೆ. ಎರಡನೇ ದೇವಕೋಷ್ಠವು ಖಾಲಿ ಇದ್ದು, ಇದರೊಳಗಿದ್ದ ಸರಸ್ವತಿ ವಿಗ್ರಹವು ಕಳವಾಗಿದೆ. ಮೂರನೇ ದೇವಕೋಷ್ಠದಲ್ಲಿ ಅಂಕುಶ, ಪದ್ಮ, ಫಲವನ್ನು ಹಿಡಿದು ತರ್ಜನಿ ಹಸ್ತಮುದ್ರೆಯನ್ನು ಹೊಂದಿ ಅಗಲವಾದ ಕಿವಿಗಳಿರುವ ಮುಕ್ತಾಹಾರ, ಯಜ್ಞೋಪವೀತ, ಉದರಬಂಧ, ವನಮಾಲೆಯನ್ನು ಧರಿಸಿರುವ ಸುಂದರವಾದ ಗಣೇಶ ಶಿಲ್ಪವಿದೆ. ನವರಂಗದ ಎಡಭಾಗದಲ್ಲಿರುವ ನಾಲ್ಕನೇ ದೇವಕೋಷ್ಠದಲ್ಲಿ ತ್ರಿಮೂರ್ತಿಗಳ ಕಲ್ಪನೆಯ ಆಧಾರದ ಮೇಲೆ ನಿರ್ಮಾಣವಾಗಿರುವ ಸ್ಥಾಣು ಲಿಂಗವಿದೆ. ಇದರ ಪಕ್ಕದ ಆರನೇ ದೇವಕೋಷ್ಠದಲ್ಲಿ ಶಂಖ, ಚಕ್ರ,

ಗದಾ ಮತ್ತು ಪದ್ಮವನ್ನು ಹಿಡಿದ ಹಾಗೂ ಸರ್ವಾಭರಣ ಭೂಷಿತನಾದ, ಶ್ರೀದೇವಿ ಭೂದೇವಿ ಸಮೇತನಾಗಿರುವ ಸ್ಥಾನಕ ಭಂಗಿಯ ಸುಂದರವಾದ ಕೇಶವನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಕೋಷ್ಠವು ಎರಡು ಸ್ತಂಭಿಕೆಗಳು ಮತ್ತು ಮೂರು ಹೂವಿನ ಅಲಂಕರಣಗಳನ್ನು ಹೊಂದಿರುವ ಪಂಚಶಾಖಾ ದ್ವಾರಬಂಧವನ್ನು ಹೊಂದಿದೆ. ಈ ಕೋಷ್ಠದ ಮೇಲ್ಭಾಗದಲ್ಲಿ ಮೂರು ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದೆ.

**ನವರಂಗದ ಭುವನೇಶ್ವರಿಗಳು:** ಈ ದೇವಾಲಯದ ಭುವನೇಶ್ವರಿಗಳು ಅತ್ಯಂತ ಆಖರ್ಷಣೀಯವಾಗಿಯೂ ಮತ್ತು ಕಲಾತ್ಮಕವಾಗಿಯೂ ರಚನೆಗೊಂಡಿದ್ದು ಅವುಗಳನ್ನು ಈ ಕೆಳಕಂಡಂತೆ ಪ್ರದಕ್ಷಿಣಾ ಕ್ರಮದಲ್ಲಿ ವಿವರಿಸಲಾಗಿದೆ.

**ವಿತಾನ–1:** ಇದು ಅಷ್ಟಕೋನಾಕಾರದಲ್ಲಿ ಒಳಭಾಗಕ್ಕೆ ಹೋಗಿದ್ದು ಆಕರ್ಷಕವಾಗಿ ನಿರ್ಮಾಣವಾಗಿದೆ. ಸುಮಾರು ಮೂರು ಅಡಿಗೂ ಹೆಚ್ಚು ಆಳಕ್ಕೆ ಹೋಗಿರುವ ಈ ವಿತಾನದಲ್ಲಿ ಶಿಲಾಮೊಗ್ಗುಗಳ ರಚನೆ ಕಂಡು ಬಂದಿದೆ. (ಚಿ.ಸಂ. 57)

**ವಿತಾನ–2:** ಇದು ಚತುರಶ್ರಾಕಾರವನ್ನು ಹೊಂದಿದ್ದು, ಇದೇ ಆಕಾರದಲ್ಲಿ ಒಳಭಾಗಕ್ಕೆ ಹೋಗಿದ್ದು ಮಧ್ಯಭಾಗದಲ್ಲಿ ಪದ್ಮಕೇಸರದ ನಿರ್ಮಾಣವಿದೆ. ಮೂರು ಹಂತಗಳನ್ನು ಹೊಂದಿರುವ ಈ ವಿತಾನದಲ್ಲಿಯೂ ಶಿಲಾಮೊಗ್ಗುಗಳ ರಚನೆ ಕಂಡು ಬರುತ್ತದೆ. (ಚಿ.ಸಂ. 58)

**ವಿತಾನ–3:** ಇದರ ನಾಲ್ಕು ದಿಕ್ಕುಗಳು ಕುದುರೆ ಲಾಳಾಕಾರ ಅಥವಾ ಗಜಪೃಷ್ಠಾಕಾರದಂತೆ ಕಂಡು ಬರುತ್ತದೆ. ಈ ವಿತಾನವು ಮೂರು ಹಂತಗಳಲ್ಲಿ ಒಳಕ್ಕೆ ಸರಿದಿರುವ ಪಟ್ಟಿಕೆಗಳನ್ನು ಹೊಂದಿದ್ದು ಇವುಗಳ ಮೂಲೆ ಹಂತಗಳಲ್ಲಿ ಶಿಲಾ ಮೊಗ್ಗುಗಳನ್ನು ನಿರ್ಮಿಸಲಾಗಿದೆ. ಮಧ್ಯದಲ್ಲಿ ಪದ್ಮಕೇಸರವಿದೆ. (ಚಿ.ಸಂ. 59)

**ವಿತಾನ–4:** ಎರಡು ಅಷ್ಟಕೋನಾಕೃತಿಯ ಪಟ್ಟಿಕೆಗಳ ಮಧ್ಯೆ ವೃತ್ತಾಕಾರದಲ್ಲಿ ಈ ಭುವನೇಶ್ವರಿಯು ಕಂಡು ಬರುತ್ತದೆ. ಮೊದಲ ಪಟ್ಟಿಕೆಯಲ್ಲಿ ಅಷ್ಟದಿಕ್ಪಾಲಕರ ಚಿಕ್ಕ ಚಿಕ್ಕ ಉಬ್ಬು ಶಿಲ್ಪಗಳ ರಚನೆಯಿದೆ. (ಚಿ.ಸಂ. 60) ಈ ಭುವನೇಶ್ವರಿಯ ಪ್ರಾರಂಭದ ಚತರುಶ್ರ ಭಾಗದ ಮೂಲೆ ಮೂಲೆಗಳಲ್ಲಿ ಕೀರ್ತಿಮುಖಗಳ ರಚನೆ ಕಂಡು ಬಂದಿದ್ದು ಪ್ರಧಾನ ವೃತ್ತದಿಂದ ಒಳಹೋದಂತೆ ವೃತ್ತಗಳು ಕಿರಿದಾಗುತ್ತಾ ಮಧ್ಯದಲ್ಲಿ ಪದ್ಮಕೇಸರವನ್ನು ಹೊಂದಿವೆ.

**ವಿತಾನ-5**: ನಾಲ್ಕು ಕೋನಗಳನ್ನು ಹೊಂದಿರುವ ಈ ವಿತಾನವು ಚತುರಶ್ರವಾಗಿಯೇ ಒಳಕ್ಕೆ ಸರಿದಿದ್ದು 28 ಲಂಬಪಟ್ಟಿಕೆಗಳನ್ನು ಮತ್ತು ಮೂರು ಅಡ್ಡಪಟ್ಟಿಕೆಗಳನ್ನು ಹೊಂದಿದೆ. ಅಡ್ಡ ಮತ್ತು ಲಂಬಪಟ್ಟಿಕೆಗಳು ಸಂಧಿಸುವ ಸ್ಥಳದಲ್ಲಿ ಶಿಲಾಮೊಗ್ಗುಗಳಿವೆ. (ಚಿ.ಸಂ. 61)

**ವಿತಾನ-6**: ವೃತ್ತಾಕಾರದಲ್ಲಿಯೇ ಒಳಕ್ಕೆ ಹೋಗಿರುವ ಈ ಭುವನೇಶ್ವರಿಯು 16 ಲಂಬ ಪಟ್ಟಿಕೆಗಳನ್ನು ಮತ್ತು 3 ವೃತ್ತಾಕಾರದ ಪಟ್ಟಿಕೆಗಳನ್ನು ಹೊಂದಿದ್ದು, ಈ ವೃತ್ತ ಮತ್ತು ಲಂಬಪಟ್ಟಿಕೆಗಳು ಸಂಧಿಸುವ ಭಾಗದಲ್ಲಿ ಶಿಲಾಮೊಗ್ಗುಗಳು ಕಂಡು ಬರುತ್ತವೆ. (ಚಿ.ಸಂ. 62)

**ವಿತಾನ-7**: ನಕ್ಷತ್ರಾಕಾರದಲ್ಲಿರುವ ಈ ವಿತಾನವು ಇದೇ ಆಕಾರದಲ್ಲಿಯೇ ಒಳಕ್ಕೆ ಹೋಗಿದ್ದು ಈ ನಕ್ಷತ್ರಾಕಾರದ ಪಟ್ಟಿಕೆಗಳ ಮೇಲೆ ಶಿಲಾಮೊಗ್ಗುಗಳಿವೆ. (ಚಿ.ಸಂ. 63)

**ವಿತಾನ-8**: ವೃತ್ತಾಕಾರದಲ್ಲಿಯೇ ಒಳಸರಿದು ಕಿರಿದಾಗಿರುವ ಈ ವಿತಾನವು 13 ಲಂಬಪಟ್ಟಿಕೆಗಳನ್ನು ಮತ್ತು ಮೂರು ವೃತ್ತಾಕಾರದ ಪಟ್ಟಿಕೆಗಳನ್ನು ಹೊಂದಿದ್ದು ಇವುಗಳ ಮೇಲೆ ಶಿಲಾಮೊಗ್ಗುಗಳಿವೆ. (ಚಿ.ಸಂ. 64)

**ವಿತಾನ-9**: ಇದು ನವರಂಗದ ಮಧ್ಯ ಅಂಕಣದ ಮುಖ್ಯ ವಿತಾನವಾಗಿದ್ದು ಉಳಿದ ಎಲ್ಲಾ ವಿತಾನಗಳಿಗಿಂತ ಆಕರ್ಷಕವಾಗಿಯೂ, ವಿಶಾಲವಾಗಿಯೂ ಕಂಡು ಬಂದಿದೆ. ಮೊದಲು ಎರಡು ಅಷ್ಟಾಕಾರದ ದಿಂಡು ಅಥವಾ ಪಟ್ಟಿಕೆಗಳನ್ನು ಹೊಂದಿರುವ ಈ ವಿತಾನವು ಒಳಕ್ಕೆ ಹೋದಂತೆ ವೃತ್ತಾಕಾರವನ್ನು ಹೊಂದಿದೆ. (ಚಿ.ಸಂ. 65) ಮೊದಲ ಪಟ್ಟಿಕೆಯಲ್ಲಿ ಆಯಾ ದಿಕ್ಕಿಗನುಗುಣವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಒಳಕ್ಕೆ ಹೋದಂತೆ ಯಕ್ಷ-ಯಕ್ಷಿಯರು, ನಾಗದೇವತೆಗಳ ಶಿಲ್ಪಗಳನ್ನು ಮತ್ತು ಪುಷ್ಪಾಲಂಕರಣೆಗಳನ್ನು ಹೊಂದಿರುವ ಈ ವಿತಾನದ ಮಧ್ಯಭಾಗದಲ್ಲಿ ಪದ್ಮಕೇಸರವನ್ನು ಜೋತಾಡುತ್ತಿರುವಂತೆ ಕೆತ್ತಲಾಗಿದೆ. ಹಾಗೂ ಈ ವಿತಾನದಲ್ಲಿ ಅಲಂಕಾರಿಕವಾಗಿ ವಾದ್ಯಗಾರರು, ನರ್ತಕರು ಮತ್ತು ಸಳನ ಶಿಲ್ಪಗಳನ್ನು ಕಂಡರಿಸಲಾಗಿದೆ.

ನವರಂಗದ ದ್ವಾರವು ವಜ್ರ, ವಲ್ಲೀ, ಸ್ತಂಭ ಮತ್ತು ಹೂಬಳ್ಳಿಗಳಿಂದ ಅಲಂಕೃತವಾದ ಪಂಚಶಾಖಾ ಮಾದರಿಯದ್ದಾಗಿದ್ದು, ಲಲಾಟಬಿಂಬದಲ್ಲಿ ಶಿವಪಾರ್ವತಿಯ ವಿಗ್ರಹವನ್ನು ಮತ್ತು ಇವರ ಎರಡೂ ಪಾರ್ಶ್ವದಲ್ಲಿ ಚಾಮರಧಾರಿಣಿಯರನ್ನು ಕೆತ್ತಲಾಗಿದೆ. (ಚಿ.ಸಂ. 66) ದ್ವಾರಬಂಧದ ಮೇಲ್ಭಾಗದಲ್ಲಿ 5 ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದ್ದು, ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತ ಶೈವ ದ್ವಾರಪಾಲಕರಾದ ಕಾಲಮಹಾಕಾಲರ ಶಿಲ್ಪಗಳನ್ನು ಕೆತ್ತಲಾಗಿದೆ.

**ಮುಖಮಂಟಪ:** ನಾಗೇಶ್ವರ ದೇವಾಲಯವು ಚಿಕ್ಕದಾದ ತೆರೆದ ಮುಖಮಂಟಪವನ್ನು ಹೊಂದಿದ್ದು, ಇದು ಭಾಗಶಃ ಶಿಥಿಲವಾಗಿದೆ. ಇದರ ಅಧಿಷ್ಠಾನ ಭಾಗದಲ್ಲಿ ಯೋಧರು, ಮಿಥುನ ಶಿಲ್ಪಗಳು, ಕೀರ್ತಿಮುಖ, ಸಿಂಹ ಮುಖ, ಲತೆಗಳು ಮತ್ತು ಚಿಕ್ಕ ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದೆ. ಈ ಮಂಟಪದಲ್ಲಿ ಎರಡು ಶ್ರೀಕಾರ ಮಾದರಿಯ ಅರೆಗಂಬಗಳ ರಚನೆಯನ್ನು ಮಾಡಲಾಗಿದ್ದು ಇದರ ಭುವನೇಶ್ವರಿಯು ಅತ್ಯಂತ ಸುಂದರವಾಗಿ ಮೂಡಿ ಬಂದಿದೆ. ಇದು ಪ್ರಾರಂಭದಲ್ಲಿ ಚತುರಶ್ರವಾಗಿ ನಂತರ ಅಷ್ಟಕೋನಾಕೃತಿಯಲ್ಲಿ ಒಳಕ್ಕೆ ಸರಿದಿದ್ದು, ಮಧ್ಯಭಾಗದ ಶಿಲಾಫಲಕದಲ್ಲಿ ಗಜಾಸುರ ಸಂಹಾರ ಮೂರ್ತಿ ಶಿಲ್ಪವನ್ನು ಕೆತ್ತಲಾಗಿದೆ. ಹಾಗೂ ಆಯಾ ದಿಕ್ಕಿಗನುಗುಣವಾಗಿ ಅಷ್ಟಕೋನಗಳ ದಿಂಡಿನ ಮೇಲೆ ಅಷ್ಟದಿಕ್ಪಾಲಕರ ಶಿಲ್ಪಗಳನ್ನು, ಇವುಗಳ ನಡುವೆ ಸಂಗೀತ ಮತ್ತು ವಾದ್ಯಗಾರರ ಶಿಲ್ಪಗಳನ್ನು ನಿರ್ಮಿಸಿದ್ದಾರೆ.[71]

**ಅಧಿಷ್ಠಾನ:** ಇದು ನಾಲ್ಕು ಅಡಿ ಎತ್ತರವನ್ನು ಹೊಂದಿದ್ದು ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ, ಗಳ, ಕಪೋತ, ಆಲಿಂಗ ಮತ್ತು ಮಹಾಪಟ್ಟಿಗಳನ್ನು ಒಳಗೊಂಡಿರುವ ಪಾದಬಂಧ ಅಧಿಷ್ಠಾನದ ಮಾದರಿಯಾಗಿದೆ. ಆದರೆ ಮುಖಮಂಟಪದ ಅಧಿಷ್ಠಾನವು ಮಂಚಬಂಧವಾಗಿದ್ದು ಭಿತ್ತಿಯ ಅಧಿಷ್ಠಾನಕ್ಕಿಂತ ವ್ಯತ್ಯಾಸದಿಂದ ಕೂಡಿದೆ. ಇದು ಉಪಾನ, ಜಗತಿ, ಗಳ ಮತ್ತು ಕಪೋತಗಳನ್ನು ಹೊಂದಿದ್ದು ಗಳದಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಆದರೆ ಅವುಗಳು ಗುರುತಿಸಲಾಗದ ಮಟ್ಟದಲ್ಲಿ ತೃಟಿತಗೊಂಡಿವೆ. ಅಧಿಷ್ಠಾನದ ದಿಂಡುಗಳು ತುಂಬಾ ಸರಳವಾಗಿದು 6 ಹಂತಗಳಲ್ಲಿ ಸುಮಾರು ನಾಲ್ಕು ಅಡಿ ಎತ್ತರಕ್ಕೆ ದೇವಾಲಯದ ಉದ್ದಕ್ಕೂ ಬಳುಕಿ ಹರಿದಂತೆ ರೂಪಿಸಲ್ಪಟ್ಟಿವೆ. (ಚಿ.ಸಂ. 67)

**ಭಿತ್ತಿ:** ದೇವಾಲಯದ ಭಿತ್ತಿಯು ಹಿನ್‌ಸರಿತ ಮುನ್‌ಸರಿತ ಮಾದರಿಯಲ್ಲಿದ್ದು ಭಿತ್ತಿಯ ಮೇಲೆ ಉಬ್ಬು ಶಿಲ್ಪಗಳು, ವಿಮಾನದ ಶಿಖರಾಕೃತಿಗಳು, ಕೋಷ್ಠಗಳು, ಭಿತ್ತಿ ಪಾದಗಳು ಹಾಗೂ ಹೂಬಳ್ಳಿಗಳನ್ನು ಮತ್ತು ಪದ್ಮದ ಅಲಂಕರಣಗಳನ್ನು ಸುಂದರವಾಗಿ ಕೆತ್ತಲಾಗಿದೆ. (ಚಿ.ಸಂ. 68) ದೇವಾಲಯದ ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಎರಡು ದೇವಕೋಷ್ಠಗಳನ್ನು ನಿರ್ಮಿಸಲಾಗಿದ್ದು ಇಂದು ಇವುಗಳ ಒಳಗೆ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ. ಈ ಕೋಷ್ಠಗಳ ಮೇಲೆ ಶಿಖರಾಕೃತಿಗಳನ್ನು ಸಹ ನಿರ್ಮಿಸಲಾಗಿದ್ದು,[72] ಈ ದೇವಕೋಷ್ಠಗಳು ಒಂದು ಮಂಟಪದಂತೆ ಭಾಸವಾಗುತ್ತವೆ. ಈ ದೇವಾಲಯದ ಗೋಡೆಯು ಸುಮಾರು 10 ಅಡಿ ಎತ್ತರವಾಗಿದ್ದು ಇದರ ತುದಿಯಲ್ಲಿ ಮಳೆಯ ನೀರಿನಿಂದ ರಕ್ಷಣೆ ನೀಡಲು ಕಲ್ಲಿನ ಮುಂಚಾಚು ಅಥವಾ ಬೋದಿಗೆಯನ್ನು ನಿರ್ಮಿಸಲಾಗಿದೆ. ಭಿತ್ತಿಯಲ್ಲಿ ಕಂಡು ಬರುವ ಪ್ರಮುಖ ದೇವತಾ

ಶಿಲ್ಪಗಳ ಮೇಲೆ ಪಿರಿಮಿಡ್ಡಿನಾಕಾರದಲ್ಲಿರುವಂತೆ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದೆ. (ಚಿ.ಸಂ. 69) ನಾಗೇಶ್ವರ ದೇವಾಲಯದ ಭಿತ್ತಿಯಲ್ಲಿ ಶೈವ ಮತ್ತು ಶಾಕ್ತ ಪರಂಪರೆಯನ್ನು ಬಿಂಬಿಸುವ ಹಲವಾರು ಶಿಲ್ಪಗಳು ಕಂಡು ಬಂದಿದ್ದು ಅವುಗಳನ್ನು ಈ ಕೆಳಕಂಡಂತೆ ಪ್ರದಕ್ಷಿಣಾ ಕ್ರಮದಲ್ಲಿ ಹೆಸರಿಸಲಾಗಿದೆ.

**ಪೂರ್ವಾಭಿಮುಖವಾಗಿರುವ ಶಿಲ್ಪಗಳು**:

1. ಭಗ್ನ ಶಿಲ್ಪ
2. ದುರ್ಗಾ (ಆಸೀನ ಮೂರ್ತಿ) ಅಷ್ಟಭುಜಧಾರಿಯಾಗಿರುವ ದೇವಿಯ ಕೈಗಳು ಭಗ್ನವಾಗಿವೆ
3. ದುರ್ಗಾ-ಸ್ಥಾನಕ ಶಿಲ್ಪ
4. ಶಿವ-ಸ್ಥಾನಕ ಮೂರ್ತಿಯಾಗಿರುವ ಶಿವನು ಬಲಗೈಯಲ್ಲಿ ಸರ್ಪವನ್ನು ಎಡಗೈಯಲ್ಲಿ ತ್ರಿಶೂಲವನ್ನು ಹಿಡಿದಿದ್ದು, ಮುಂದಿನ ಎರಡು ಕೈಗಳು ಭಗ್ನವಾಗಿವೆ.

**ದಕ್ಷಿಣಾಭಿಮುಖವಾಗಿರುವ ಶಿಲ್ಪಗಳು**:

5. ಸ್ಥಾನಕ ಶಿವ-ಸರ್ವಾಭರಣ ಭೂಷಿತನಾಗಿರುವ ಶಿವನು ತ್ರಿಶೂಲ, ಢಮರನ್ನು ಹಿಡಿದು ಒಂದು ಕೈ ಅಭಯ ಹಸ್ತವನ್ನು ಹೊಂದಿದ್ದು ಮತ್ತೊಂದು ಕೈ ಭಗ್ನವಾಗಿದೆ. ಈ ಶಿಲ್ಪದ ಕೆಳಗೆ ದಕ್ಷಿಣ ದೇಶಪಾಳಕ ಎಂಬ ಶಾಸನವಿದೆ. (ಚಿ.ಸಂ. 70)
6. ಭಗ್ನ ಶಿಲ್ಪ
7. ಅಷ್ಟಭುಜಧಾರಿಯಾಗಿರುವ ದೇವಿ ಶಿಲ್ಪ

8, 9, 10, 11. ಶಾಕ್ತ ಪರಂಪರೆಯ ದೇವತೆಯರ ಭಗ್ನ ಶಿಲ್ಪಗಳು

12, 13. ದೇವಕೋಷ್ಠಕ ಮತ್ತು ಸಳನ ಶಿಲ್ಪಗಳು (ಚಿ.ಸಂ. 71)

14. ಶ್ರಿಯಾದೇವಿ-ಭಾಗಶಃ ಭಗ್ನವಾಗಿರುವ ಈ ಶಿಲ್ಪದ ಕೆಳಭಾಗದಲ್ಲಿ ಶ್ರಿಯಾದೇವಿ ಎಂಬ ಶಾಸನವಿದೆ. (ಚಿ.ಸಂ. 72)
15. ಲಕ್ಷ್ಮೀದೇವಿ-ಭಗ್ನ ಶಿಲ್ಪ

16, 17. ಪರಿಚಾರಕಿಯರು

18. ನವಿಲಿನ ಮೇಲೆ ಕುಳಿತಿರುವ ಕೌಮಾರಿಯ ಶಿಲ್ಪ (ಚಿ.ಸಂ. 73)

19. ಸ್ಥಾನಕ ಗೌರಿ–ಅಕ್ಷಮಾಲೆ, ಪಾಶ, ಸರ್ಪ ಮತ್ತು ಪದ್ಮವನ್ನು ಹಿಡಿದಿದ್ದಾಳೆ (ಚಿ.ಸಂ. 74)

20. ಮಾಹೇಶ್ವರಿ–ಪಾಶ, ಢಮರು ಮತ್ತು ಅಕ್ಷಮಾಲೆಯನ್ನು ಹಿಡಿದಿರುವ ದೇವಿಯು ವರದ ಹಸ್ತಳಾಗಿದ್ದಾಳೆ (ಚಿ.ಸಂ. 75)

21. ದೇವಿ ಶೀಲ್ಪ–ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದು ಒಂದು ಕೈ ಚಿನ್ಮುದ್ರಾ, ಮತ್ತೊಂದು ಕೈ ತರ್ಜನಿ ಹಸ್ತವನ್ನು ಹೊಂದಿದೆ

22. ಮನೋಹರಿ–ಈಟಿ, ತಲೆಬುರುಡೆಯನ್ನು ಹೊಂದಿರುವ ತ್ರಿಶೂಲ, ಕಳಸವನ್ನು ಹಿಡಿದಿದ್ದು ಅಭಯ ಹಸ್ತವನ್ನು ಹೊಂದಿದ್ದಾಳೆ (ಚಿ.ಸಂ. 76)

23. ದುರ್ಗಾ–ಅಷ್ಟಭುಜಧಾರಿಯಾಗಿದ್ದು ಬಲಭಾಗದಲ್ಲಿ ಕಳಸ ಮತ್ತು ಎಡಭಾಗದಲ್ಲಿ ಸಿಂಹ ಶಿಲ್ಪವಿದೆ. (ಚಿ.ಸಂ. 77)

24. ವೈಷ್ಣವಿ–ಭಗ್ನವಾಗಿದೆ

25. ಕೈಮುಗಿದು ನಿಂತಿರುವ ಭಗ್ನ ಶಿಲ್ಪ

26. ಭಗ್ನ ಶಿಲ್ಪ

27. ದುರ್ಗಾ–ಆಸೀನ ಶಿಲ್ಪ

28. ದುರ್ಗಾ–ಭಗ್ನ ಶಿಲ್ಪ

29. ಸ್ಥಾನಕ ಶಿವ–ಈಟಿ ಮತ್ತು ಢಮರನ್ನು ಹಿಡಿದಿರುವ ಶಿಲ್ಪದ ಕೆಳಗೆ ವಜ್ರಭೂತ ಎಂಬ ಶಾಸನವಿದೆ (ಚಿ.ಸಂ. 78)

30, 31, 32. ಸ್ತ್ರೀ ಶಿಲ್ಪಗಳು ಭಗ್ನವಾಗಿವೆ

33. ಬ್ರಹ್ಮ–ಮೂರು ತಲೆಗಳನ್ನು ಹೊಂದಿರುವ ಈ ಶಿಲ್ಪವು ಭಾಗಶಃ ಭಗ್ನವಾಗಿದ್ದು ಕೆಳಭಾಗದಲ್ಲಿ ಬ್ರಹ್ಮ ಎಂಬ ಶಾಸನವಿದೆ. (ಚಿ.ಸಂ. 79)

34. ಸರಸ್ವತಿ–ಮೂರು ತಲೆಗಳನ್ನು ಹೊಂದಿರುವ ಶಿಲ್ಪವು ಸ್ಥಾನಕ ಭಂಗಿಯಲ್ಲಿದೆ

35. ಚಾಮರಧಾರಿಣಿ

36. ದುರ್ಗಾ–ತ್ರಿಶೂಲ, ಢಮರು, ಪುಸ್ತಕವನ್ನು ಹಿಡಿದು ತರ್ಜನಿ ಹಸ್ತವನ್ನು ಹೊಂದಿದ್ದಾಳೆ

37. ಚಿತ್ರಸೇನ–ಸರ್ವಾಭರಣ ಭೂಷಿತವಾಗಿರುವ ಈ ಶಿಲ್ಪವು ಭಗ್ನವಾಗಿದ್ದು ಕೆಳಭಾಗದಲ್ಲಿ ಚಿತ್ರಸೇನ ಎಂಬ ಶಾಸನವಿದೆ. (ಚಿ.ಸಂ. ೮೦)

**ಪಶ್ಚಿಮಾಭಿಮುಖವಾಗಿರುವ ಶಿಲ್ಪಗಳು**

38. ಸ್ಥಾನಕ ಮಹಾಕಂಠ–ಬಲಭಾಗದ ಎರಡೂ ಕೈಗಳಲ್ಲಿ ಢಮರು ಮತ್ತು ಕತ್ತಿಯನ್ನು ಹಿಡಿದಿದ್ದು, ಎಡಭಾಗದ ಕೈಗಳು ಭಗ್ನವಾಗಿವೆ.

39. ಸ್ತ್ರೀದೇವತಾ ಶಿಲ್ಪ–ಪಾಶ, ಅಂಕುಶ ಮತ್ತು ಫಲವನ್ನು ಹಿಡಿದಿರುವ ಈ ಶಿಲ್ಪದ ಬಲಮುಂಗೈ ಭಗ್ನವಾಗಿದೆ.

40. ಪರಿಚಾರಕಿಯ ಶಿಲ್ಪ

41. ದುರ್ಗಾ–ಢಮರು, ತ್ರಿಶೂಲ ಮತ್ತು ಅಕ್ಷಮಾಲೆಯನ್ನು ಹಿಡಿದು ಆಸೀನ ಭಂಗಿಯಲ್ಲಿರುವ ಶಿಲ್ಪ

42. ಸದಾಶಿವ ಮೂರ್ತಿ–ಪದ್ಮಾಸನದಲ್ಲಿ ಕುಳಿತಿರುವ ಈ ಶಿಲ್ಪದಲ್ಲಿ ನಾಲ್ಕು ಶಿರಗಳಿವೆ (ಚಿ.ಸಂ. ೮1)

43. ಲಕ್ಷ್ಮೀ–ಈ ಶಿಲ್ಪವು ಭಾಗಶಃ ಭಗ್ನವಾಗಿದೆ

44. ಚಾಮರಧಾರಿಣಿ

45. ಭಗ್ನ ಶಿಲ್ಪ

46. ಶಿವ–ಗಂಭೀರ ಸ್ವರೂಪದಲ್ಲಿರುವ ಶಿವನು ಈಟಿ, ಢಮರನ್ನು ಹಿಡಿದಿದ್ದು ಅಭಯ ಹಸ್ತವನ್ನು ಹೊಂದಿದ್ದಾನೆ.

**ಉತ್ತರಾಭಿಮುಖವಾಗಿರುವ ಶಿಲ್ಪಗಳು**

47. ಹರಿಹರ ಶಿಲ್ಪ–ಒಂದು ಕೈಯಲ್ಲಿ ಢಮರು, ಇನ್ನೊಂದು ಕೈಯಲ್ಲಿ ಚಕ್ರವನ್ನು ಹಿಡಿದಿರುವ ಈ ಶಿಲ್ಪದ ಇನ್ನುಳಿದ ಎರಡು ಕೈಗಳು ಭಗ್ನವಾಗಿವೆ. (ಚಿ.ಸಂ. ೮2)

48. ಪರಿಚಾರಕಿಯ ಶಿಲ್ಪ

49. ಚಾಮರಧಾರಿಣಿಯ ಶಿಲ್ಪ

50. ಕಳಸವನ್ನು ಹಿಡಿದಿರುವ ಶ್ರೀದೇವಿಯ ಶಿಲ್ಪ

51. ನಾರಾಯಣ-ಸುಖಾಸನದಲ್ಲಿ ಕುಳಿತಿದ್ದು ಪದ್ಮ, ಗದಾ, ಚಕ್ರವನ್ನು ಹಿಡಿದಿರುವ ಈ ಶಿಲ್ಪದ ಒಂದು ಕೈ ಭಗ್ನವಾಗಿದೆ. (ಚಿ.ಸಂ. 83)

52. ಭೂದೇವಿ-ಸ್ಥಾನಕ ಶಿಲ್ಪ

53. ಚಾಮರಧಾರಿಣಿಯ ಶಿಲ್ಪ

54. ವೈಷ್ಣವಿ-ಈ ಶಿಲ್ಪವು ಭಾಗಶಃ ಭಗ್ನವಾಗಿದೆ

55. ಸ್ಥಾನಕ ಶಿವ-ತ್ರಿಶೂಲ, ಢಮರನ್ನು ಹಿಡಿದಿರುವ ಈ ಶಿಲ್ಪದ ಮುಂಭಾಗದ ಎರಡೂ ಕೈಗಳು ಭಗ್ನವಾಗಿದ್ದು ಶಿಲ್ಪದ ಕೆಳಗೆ ಚಿತ್ರಧರ ಎಂಬ ಶಾಸನವಿದೆ. (ಚಿ.ಸಂ. 84)

56. ಭಗ್ನ ಸ್ತ್ರೀ ಶಿಲ್ಪ

57. ಪಾರ್ವತಿ-ಪಾಶ, ಅಂಕುಶ, ಫಲವನ್ನು ಹಿಡಿದಿದ್ದು ಒಂದು ಕೈ ಭಗ್ನವಾಗಿದೆ (ಚಿ.ಸಂ. 85)

58. ಭಗ್ನ ಶಿಲ್ಪ

59. ಗರುಡ ಶಿಲ್ಪ

**ಪಶ್ಚಿಮಾಭಿಮುಖವಾಗಿರುವ ಶಿಲ್ಪಗಳು:**

60. ಸ್ಥಾನಕ ದುರ್ಗಾ-ಬಟ್ಟಲು ಮತ್ತು ಗಂಟೆಯನ್ನು ಹಿಡಿದಿರುವ ಈ ಶಿಲ್ಪದ ಎಡಭಾಗದ ಕೈಗಳು ಭಗ್ನವಾಗಿವೆ.

61. ಚಕ್ರೇಶ್ವರಿ ಆಸೀನ ಭಂಗಿಯಲ್ಲಿರುವ ಈ ಶಿಲ್ಪವು ಭಾಗಶಃ ಭಗ್ನವಾಗಿದೆ (ಚಿ.ಸಂ. 86)

62. ಸ್ಥಾನಕ ದುರ್ಗಾ

63. ಶಿವ-ಢಮರು, ತ್ರಿಶೂಲ, ಅಕ್ಷಮಾಲೆ ಹಿಡಿದಿರುವ ಈ ಶಿಲ್ಪದ ಒಂದು ಕೈ ಭಗ್ನವಾಗಿದೆ.

**ಉತ್ತರಾಭಿಮುಖವಾಗಿರುವ ಶಿಲ್ಪಗಳು**

64. ದೇವಿ ಶಿಲ್ಪ–ಅಕ್ಷಮಾಲೆಯನ್ನು ಹಿಡಿದು ಮೂರು ಶಿರಗಳನ್ನು ಹೊಂದಿರುವ ಶಿಲ್ಪದ ಕೈಗಳು ಭಗ್ನವಾಗಿವೆ.

65. ದುರ್ಗಾ–ತ್ರಿಶೂಲ, ಢಮರು, ಅಕ್ಷಮಾಲೆ ಮತ್ತು ಬಟ್ಟಲನ್ನು ಹಿಡಿದಿರುವ ಶಿಲ್ಪ

66. ದೇವೀ ಶಿಲ್ಪ–ಸರ್ವಾಭರಣ ಭೂಷಿತವಾಗಿರುವ ಈ ಶಿಲ್ಪವು ಗದೆ, ಈಟಿ, ಅಕ್ಷಮಾಲೆ ಮತ್ತು ಫಲವನ್ನು ಹಿಡಿದಿದೆ. (ಚಿ.ಸಂ. 87)

67. ವೈಷ್ಣವಿ–ಈ ಶಿಲ್ಪದಲ್ಲಿ ದೇವಿಯು ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದಿದ್ದಾಳೆ.

68. ಶಿವ–ಸಮಭಂಗಿಯಲ್ಲಿ ನಿಂತಿರುವ ಶಿವನು ತ್ರಿಶೂಲ, ಢಮರು, ಫಲವನ್ನು ಹಿಡಿದಿದ್ದು ಅಭಯ ಹಸ್ತವನ್ನು ಹೊಂದಿದ್ದಾನೆ.

69. ಪುರುಷ ಶಿಲ್ಪ–ಸರ್ವಾಭರಣವನ್ನು ಧರಿಸಿ ಬಲಗೈಯಲ್ಲಿ ಗದೆಯನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಶಿಲ್ಪದ ಎಡಗೈ ಭಗ್ನವಾಗಿದೆ.

70. ಚಾಮರಧಾರಿಣಿ

71. ದೇವಕೋಷ್ಠ–ಇದರ ಎರಡೂ ಕಡೆ ಸಳ ಮತ್ತು ಹುಲಿಯ ಶಿಲ್ಪಗಳಿವೆ

72. ಭಗ್ನ ಸ್ತ್ರೀ ಶಿಲ್ಪ

73. ಪುರುಷ ಶಿಲ್ಪ–ಎಡಗೈಯಲ್ಲಿ ಗದೆ ಹಿಡಿದಿದ್ದು, ಬಲಗೈ ಅಭಯ ಹಸ್ತ ಮುದ್ರೆಯಲ್ಲಿದೆ

74. ದೇವಿ ಶಿಲ್ಪ–ಬಲ ಭಾಗದ ಎರಡೂ ಕೈಗಳಲ್ಲಿ ಅಕ್ಷಮಾಲೆ ಮತ್ತು ಢಮರನ್ನು ಹಿಡಿದಿರುವ ಈ ಶಿಲ್ಪದ ಎಡಭಾಗದ ಕೈಗಳು ಭಗ್ನವಾಗಿವೆ.

75. ವರಾಹಿ ಶಿಲ್ಪ (ಚಿ.ಸಂ. 88)

76. ದೇವಿ ಶಿಲ್ಪ–ಪದ್ಮಾಸನದಲ್ಲಿರುವ ಈ ಶಿಲ್ಪ ಅಂಕುಶ, ಪಾಶ, ಫಲ ಮತ್ತು ವಜ್ರವನ್ನು ಹಿಡಿದಿದೆ. (ಚಿ.ಸಂ. 89)

77. ದೇವಿ ಶಿಲ್ಪ–ತ್ರಿಶೂಲ, ವಜ್ರ ಮತ್ತು ಬಟ್ಟಲನ್ನು ಹಿಡಿದಿದ್ದು ಶಿಲ್ಪದ ಇನ್ನೊಂದು ಕೈ ಭಗ್ನವಾಗಿದೆ.

78. ದೇವಿ ಶಿಲ್ಪ-ಸಮಭಂಗಿಯಲ್ಲಿ ನಿಂತಿರುವ ಈ ಶಿಲ್ಪದ ಎಲ್ಲಾ ಕೈಗಳು ಭಗ್ನವಾಗಿವೆ.

**ಪೂರ್ವಾಭಿಮುಖವಾಗಿರುವ ಶಿಲ್ಪಗಳು**

79. ಮಹಾಕಾಲ-ಸಮಭಂಗಿಯಲ್ಲಿ ನಿಂತಿರುವ ಈ ಶಿಲ್ಪವು ಅಕ್ಷಮಾಲೆ, ತ್ರಿಶೂಲ, ಢಮರು ಮತ್ತು ಫಲವನ್ನು ಹಿಡಿದಿದ್ದು ಇದರ ಕೆಳಭಾಗದಲ್ಲಿ ಮಹಾಕಾಲ ಎಂಬ ಶಾಸನವಿದೆ.

80, 81, 82. ಭಗ್ನ ಶಿಲ್ಪಗಳು.

ಹೀಗೆ ಭಿತ್ತಿಯು 82 ಭಿತ್ತಿ ಶಿಲ್ಪಗಳನ್ನು ಹೊಂದಿದ್ದು ಬಹುಪಾಲು ಶಿಲ್ಪಗಳು ಭಗ್ನವಾಗಿವೆ. ಭಿತ್ತಿಯಲ್ಲಿ ಶಿವಲೀಲಾ ಮೂರ್ತಿಗಳು ಮತ್ತು ಶಾಕ್ತ ದೇವತೆಗಳ ಶಿಲ್ಪಗಳೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತವೆ. ಕೆಲವು ಶಿಲ್ಪಗಳ ಮೇಲೆ ವಿಶಿಷ್ಟ ರೀತಿಯ ಲತಾಪಟ್ಟಿಕೆಗಳನ್ನು ಮತ್ತು ವಿವಿಧ ಶೈಲಿಯ ಶಿಖರದ ಮಾದರಿಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿ ದಕ್ಷಿಣ ದಿಕ್ಕಿನ ಭಿತ್ತಿಯ ಶ್ರೀದೇವಿ ಶಿಲ್ಪದ ಮೆಲೆ ಲತಾಪಟ್ಟಿಕೆಯನ್ನು, ವಜ್ರಭೂತ ಶಿಲ್ಪದ ಮೇಲೆ ಔತ್ತರೀಯ ಶೈಲಿಯ ಶಿಖರದ ಮಾದರಿಯನ್ನು, ಸದಾಶಿವಮೂರ್ತಿ ಶಿಲ್ಪದ ಮೇಲೆ 8 ತಲಗಳನ್ನು ಹೊಂದಿರುವ ದ್ರಾವಿಡ ವಿಮಾನ ಮಾದರಿಯನ್ನು ಮತ್ತು ಚಿತ್ರಧರ ಶಿಲ್ಪದ ಮೇಲೆ ಔತ್ತರೀಯ ಶೈಲಿಯ ಶಿಖರದ ಮಾದರಿಯನ್ನು ಆಕರ್ಷಕವಾಗಿ ನಿರ್ಮಿಸಲಾಗಿದೆ.[73]

**ಪ್ರಸ್ತರ**: ನಾಗೇಶ್ವರ ದೇವಾಲಯದ ಪ್ರಸ್ತರವು ಆಕರ್ಷಕವಾಗಿ ಜೋಡಣೆಗೊಂಡಿದ್ದು ಉತ್ತರ, ವಲ್ಲಭೀ, ಕಪೋತ ಮತ್ತು ವಾಜನಗಳನ್ನು ಒಳಗೊಂಡಿದೆ. ಕಪೋತದ ಮೇಲ್ಭಾಗದಲ್ಲಿ ಪದ್ಮ ಮತ್ತು ಕಾಮಸೂತ್ರವನ್ನು ವರ್ಣಿಸುವ ರತಿಬಂಧದ ಶಿಲ್ಪಗಳನ್ನು ಅದರಲ್ಲೂ ಕಪಿಗಳನ್ನು ಸಹ ರತಿಬಂಧದ ರೂಪದಲ್ಲಿ ತೋರಿಸಿರುವುದು ವಿಶೇಷ.[74] ಕಪೋತದ ಮೇಲಿನ ಆಲಿಂಗ ಭಾಗದಲ್ಲಿ ಯಕ್ಷ ಯಕ್ಷಿಯರ ಶಿಲ್ಪಗಳು, ಸಳನ ಶಿಲ್ಪಗಳು, ಮಕರ ಮುಖಗಳು, ಸಿಂಹಗಳು, ಹಂಸಗಳು, ನರ್ತಕರು, ವಾದ್ಯ ವೃಂದದವರು ಹೀಗೆ ಹಲವಾರು ಶಿಲ್ಪಗಳನ್ನು ನಿರ್ಮಿಸಲಾಗಿದ್ದು[75] ಇವು ದೇವಾಲಯಕ್ಕೆ ಹೆಚ್ಚಿನ ಅಂದವನ್ನು ನೀಡಿವೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

**ಹಾರ**: ನಾಗೇಶ್ವರ ದೇವಾಲಯದ ಹಾರವು ಬಹಳ ಸುಂದರವಾಗಿ ಮೂಡಿ ಬಂದಿದ್ದು ಇದು ಕೂಟ, ಶಾಲಾ, ಪಂಜರ, ನಾಸಿ, ಅರ್ಧನಾಸಿ ಮತ್ತು ಕೀರ್ತಿಮುಖಗಳ ಅಲಂಕರಣೆಗಳಿಂದ ಕೂಡಿದೆ. ಇದರಲ್ಲಿ ಕಂಡು ಬರುವ ಭದ್ರಶಾಲಾಗಳಲ್ಲಿ ತಾಂಡವೇಶ್ವರ, (ಚಿ.ಸಂ. 90) ಗಜಾಸುರ ಸಂಹಾರ ಮೂರ್ತಿ, ಅಂಧಕಾಸುರ ಸಂಹಾರ ಮೂರ್ತಿ, (ಚಿ.ಸಂ. 91) ಗಣೇಶ, ಯೋಗ ನರಸಿಂಹ ಶಿಲ್ಪಗಳನ್ನು ಮತ್ತು ಇತರ ನಾಸಿಗಳಲ್ಲಿ ಶೈವ ಮತ್ತು ವೈಷ್ಣವ ಪರಂಪರೆಯ

ದೇವ–ದೇವತೆಯರ ಶಿಲ್ಪಗಳು, ಯಕ್ಷ ಯಕ್ಷಿಯರ ಶಿಲ್ಪಗಳು, ಪರಿಚಾರಕಿಯರು, ವಾದ್ಯ ವೃಂದದವರು, ಮಿಥುನ ಶಿಲ್ಪಗಳು ಇನ್ನೂ ಮುಂತಾ ಹಲವಾರು ಶಿಲ್ಪಗಳನ್ನು ಬಹಳ ಕಲಾತ್ಮಕವಾಗಿ ಚಿತ್ರಿಸಲಾಗಿದೆ.[76]

**ಶಿಖರ**: ದೇವಾಲಯದ ಗರ್ಭಗುಡಿಯ ಮೇಲಿನ ಶಿಖರವು ದ್ರಾವಿಡ ಶೈಲಿಯಲ್ಲಿ ನಾಲ್ಕು ತಲಗಳನ್ನು ಹೊಂದಿರುವ ಬ್ರಹ್ಮಚ್ಛಂಧ ಮಾದರಿಯಲ್ಲಿದೆ. ಶಿಖರವು ಚತುರಶ್ರವಾಗಿದ್ದು ಇದರಲ್ಲಿ ನಾಸೀಗಳು, ಕರ್ಣಕೂಟಗಳು ಮತ್ತು ಭದ್ರವನ್ನು ಅಳವಡಿಸಲಾಗಿದ್ದು, ದಕ್ಷಿಣ ಮತ್ತು ಪಶ್ಚಿಮ ದಿಕ್ಕಿನ ಪ್ರಧಾನ ಭದ್ರನಾಸಿಗಳಲ್ಲಿ ಶಿವನ ವಿವಿಧ ರೂಪಗಳನ್ನು ಕಂಡರಿಸಲಾಗಿದೆ. (ಚಿ.ಸಂ. 92) ಉತ್ತರ ದಿಕ್ಕಿನ ಭದ್ರಶಾಲಾ ನಾಸಿಗಳಲ್ಲಿ ವೈಷ್ಣವ ಪರಂಪರೆಯನ್ನು ಬಿಂಬಿಸುವ ಯೋಗಾನರಸಿಂಹ, ವೇಣುಗೋಪಾಲ, ಸೂರ್ಯ ಶಿಲ್ಪಗಳನ್ನು ಕಂಡರಿಸಿದ್ದಾರೆ. ಶಿಖರದ ಪ್ರಧಾನ ಭದ್ರನಾಸಿಗಳ ಬಲ ಮತ್ತು ಎಡ ಭಾಗದಲ್ಲಿ ಕಂಡು ಬರುವ ನಾಸಿಗಳಲ್ಲಿ ಯಕ್ಷ ಯಕ್ಷಿಯರು ಹಾಗೂ ಇನ್ನಿತರ ದೇವ–ದೇವತೆಯರ ಶಿಲ್ಪಗಳಿದ್ದು ಇವುಗಳ ಮೇಲ್ಭಾಗದಲ್ಲಿ ಅರ್ಧ ಕೀರ್ತಿಮುಖಗಳ ರಚನೆ ಕಂಡು ಬರುತ್ತದೆ. ಶಿಖರದ ಮೂರು ತಲಗಳ ನಂತರ ವೇದಿಕೆಯಿದ್ದು ಇದರ ಮೇಲೆ ಬೋರಲು ಹಾಕಿದ ಕಮಲದ ರೀತಿಯ ಪುಷ್ಕರ ಶಿಲೆಯು ಕಂಡು ಬರುತ್ತದೆ. (ಚಿ.ಸಂ. 93) ಇದರ ಮಧ್ಯಭಾಗದಲ್ಲಿ ಸುಂದರವಾದ ಕಲ್ಲಿನ ಸ್ತೂಪಿಯನ್ನು ಪ್ರತಿಷ್ಠಾಪಿಸಲಾಗಿದ್ದು, (ಚಿ.ಸಂ. 94) ಸ್ತೂಪಿಯು ಅಲಂಕೃತವಾದ ಕುಂಭ, ಕುಂಭದ ಮುಖದಲ್ಲಿ ಪತ್ರಗಳು ಮತ್ತು ಮೇಲ್ಭಾಗದಲ್ಲಿ ಪೂರ್ಣಫಲವನ್ನು ಹೊಂದುವ ಮೂಲಕ ಇಂದಿಗೂ ಸಹ ಸುರಕ್ಷಿತವಾಗಿ ಉಳಿದು ಬಂದಿದೆ. ಶಿಖರದ ಮುಂಭಾಗದಲ್ಲಿ ಶಾಲಾಕಾರದ ಸುಖನಾಸವಿದ್ದು ಇದರ ಮೇಲ್ಭಾಗದಲ್ಲಿ ಹೊಯ್ಸಳರ ಲಾಂಛನವಾದ ಸಳನು ಹುಲಿಯೊಂದಿಗೆ ಹೋರಾಡುತ್ತಿರುವ ಶಿಲ್ಪವನ್ನು ಸುಂದರವಾಗಿ ಪ್ರತಿಷ್ಠಾಪಿಸಲಾಗಿದೆ. (ಚಿ.ಸಂ. 95) ಈ ಸುಖನಾಸದ ಪೂರ್ವದಿಕ್ಕಿನ ಫಲಕದಲ್ಲಿ ಅತ್ಯಂತ ಸುಂದರವಾದ ತಾಂಡವೇಶ್ವರನ ಶಿಲ್ಪವಿದ್ದು ಈ ಶಿಲ್ಪದ ಎರಡೂ ಪಾರ್ಶ್ವದಲ್ಲಿ ನಾಟ್ಯರೂಪದ ಶಿಲ್ಪಗಳನ್ನು ಮತ್ತು ವಾದ್ಯವೃಂದದವರ ಶಿಲ್ಪಗಳನ್ನು ಕೆತ್ತಲಾಗಿದೆ.[77, 78]

ಹೀಗೆ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಅಪೂರ್ವ ಕಲಾಕೃತಿಗಳಲ್ಲಿ ಮೊಸಳೆ ನಾಗೇಶ್ವರ ದೇವಾಲಯವು ಸಹ ಪ್ರಮುಖವಾಗಿದ್ದು ಇದು ತನ್ನ ಅನುಪಮ ಶಿಲ್ಪ ಸೌಂದರ್ಯದಿಂದ ಮತ್ತು ವಾಸ್ತುಶೈಲಿಯಿಂದ ಕಲಾಭಿರುಚಿಯುಳ್ಳ ಜನರನ್ನು ಆಕರ್ಷಿಸಿ ಅವರನ್ನು ಬೆರಗುಗೊಳಿಸುತ್ತದೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

**ವೀರಭದ್ರ ದೇವಾಲಯ-ಶಾಂತಿಗ್ರಾಮ**

ಈ ದೇವಾಲಯವು ಶಾಂತಿಗ್ರಾಮದ ಕೆರೆಯ ಬಲ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ಕಂಡುಬರುತ್ತದೆ. (ಚಿ.ಸಂ. 96) ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನಗಳು ಕಂಡುಬರುವುದಿಲ್ಲ. ಆದರೆ ದೇವಾಲಯದ ವಾಸ್ತುಶೈಲಿ ಮತ್ತು ಇದರ ಕೆಲವು ಭಾಗಗಳಿಂದ ಇದು ಹೊಯ್ಸಳರ ಆಳ್ವಿಕೆಯಲ್ಲಿ ನಿರ್ಮಾಣವಾಗಿದೆ ಎಂಬುದಾಗಿ ಹೇಳಬಹುದಾಗಿದೆ. ಈ ದೇವಾಲಯವು ಗರ್ಭಗುಡಿ, ಸುಕನಾಸಿ, ನವರಂಗ, ಮುಖಮಂಟಪ ಮತ್ತು ದ್ವಾರಮಂಟಪವನ್ನು ಹೊಂದಿದ್ದು, ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್ ಮತ್ತು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಇವರ ಸಹಯೋಗದಿಂದ ಜೀರ್ಣೋದ್ಧಾರವಾಗಿದೆ.

**ಗರ್ಭಗುಡಿ:** ಗರ್ಭಗುಡಿಯು 6x6 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯ ಭಾಗದಲ್ಲಿ ಎರಡು ಅಡಿ ಪೀಠದ ಮೇಲೆ ಕತ್ತಿ, ಅಲಗು ಅಥವಾ ಗುರಾಣಿ, ಬಿಲ್ಲು ಮತ್ತು ಬಾಣಗಳನ್ನು ಹಿಡಿದು ಉಗ್ರ ರೂಪದಲ್ಲಿರುವ ಮೂರು ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. (ಚಿ.ಸಂ. 97) ಈ ವೀರಭದ್ರ ಶಿಲ್ಪದ ಪೀಠದಲ್ಲಿ ಒಂದು ವಿಶೇಷತೆಯು ಕಂಡುಬರುತ್ತದೆ. ಮೊದಲು ಒಂದು ಅಡಿ ಎತ್ತರದ ಹಂಸ ಪೀಠವಿದ್ದು, ಅದರ ಮೇಲೆ ಒಂದು ಅಡಿ ಎತ್ತರದ ನಂದಿ ಪೀಠವಿದೆ. (ಚಿ.ಸಂ. 98) ಒಂದೇ ಮೂರ್ತಿಗೆ ಎರಡು ಪೀಠಗಳು ಸಾಮಾನ್ಯವಾಗಿ ಕಂಡುಬರುವುದಿಲ್ಲ. ಅದರಲ್ಲೂ ಹಂಸಪೀಠವು ಸರಸ್ವತಿ ಅಥವಾ ಬ್ರಹ್ಮನ ಮೂರ್ತಿಗಳ ಕೆಳಗೆ ಕಂಡುಬರುವಂತಹುದು. ಆದ್ದರಿಂದ ಬಹುಶಃ ಕಾಲಾನಂತರದಲ್ಲಿ ಈ ಹಂಸಪೀಠದ ಮೇಲೆ ನಂದಿ ಪೀಠವನ್ನು ಅಳವಡಿಸಿ ವೀರಭದ್ರನ ಶಿಲ್ಪವನ್ನು ಪ್ರತಿಷ್ಠಾಪಿಸಿರಬಹುದು. ವೀರಭದ್ರ ಶಿಲ್ಪದ ಹಿಂದೆ ಸುಂದರವಾದ ಪ್ರಭಾವಳಿ ಮತ್ತು ಕೀರ್ತಿಮುಖದ ರಚನೆಯಿದ್ದು, ಇದರ ಮೇಲ್ಭಾಗದಲ್ಲಿ ಗ್ರಾನೈಟ್ ಕಲ್ಲಿನ ಛಾವಣಿಯಲ್ಲಿ ಸರಳವಾದ ಪದ್ಮ ರಚನೆಯಿದೆ. ಗರ್ಭಗುಡಿಯ ಬಾಗಿಲುವಾಡವನ್ನು ಇತ್ತೀಚಿನ ಲೋಹದ ಕವಚದಿಂದ ಅಲಂಕರಿಸಲಾಗಿದ್ದು ಮೂಲ ದ್ವಾರಬಂಧವು ಕಂಡುಬರುವುದಿಲ್ಲ.

**ಸುಕನಾಸಿ:** ಇದು ಕೂಡ ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿದ್ದು ಇದರ ಬಲಭಾಗದಲ್ಲಿ ಇತ್ತೀಚಿನ ನಂದಿ, ನಾಗರಕಲ್ಲು ಮತ್ತು ಗಣೇಶ ಶಿಲ್ಪಗಳನ್ನು ಇಟ್ಟಿದ್ದಾರೆ. ಎಡಭಾಗದಲ್ಲಿ ಪೀಠವು ಸೇರಿದಂತೆ ಮೂರು ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. ಸುಕನಾಸಿಯ ಮಧ್ಯದಲ್ಲಿ ಲಿಂಗಕ್ಕೆ

ಅಭಿಮುಖವಾಗಿ ಸುಂದರವಾದ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಿದ್ದಾರೆ. ಇದರ ದ್ವಾರಬಂಧವೂ ಸಹ ಲೋಹದ ಕವಚದಿಂದ ಮುಚ್ಚಲ್ಪಟ್ಟಿದೆ. (ಚಿ.ಸಂ. 99)

**ನವರಂಗ:** ಇದು ಸುಮಾರು 20x20 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ನಾಲ್ಕು ಶ್ರೀಕಾರ ಸ್ತಂಭಗಳಿಂದ ಕೂಡಿದೆ. (ಚಿ.ಸಂ. 100) ಸುಕನಾಸಿ ದ್ವಾರದ ಮುಂಭಾಗದಲ್ಲಿ ನವರಂಗದ ಎರಡು ಸ್ತಂಭಗಳ ನಡುವೆ ಅಂಗಕ್ಕೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದ್ದು, ಈ ನವರಂಗದ ಬಲಭಾಗಕ್ಕೆ ಅಂದರೆ ದಕ್ಷಿಣ ದಿಕ್ಕಿಗೆ ಮತ್ತೊಂದು ದ್ವಾರವಿದೆ. ಇದರ ಭುವನೇಶ್ವರಿಗಳು ಸರಳವಾಗಿದ್ದು, ಒಂದಕ್ಕಿಂತ ಒಂದು ಭಿನ್ನವಾಗಿ ಅಳವಡಿಸಲ್ಪಟ್ಟಿವೆ. ಪೂರ್ವ ಮತ್ತು ಉತ್ತರ ದಿಕ್ಕಿನ ಭುವನೇಶ್ವರಿಗಳು ಸರಳ ಪದ್ಮದ ರಚನೆಯನ್ನು ಹೊಂದಿದ್ದರೆ, ದಕ್ಷಿಣ ಮತ್ತು ಪಶ್ಚಿಮ ದಿಕ್ಕಿನ ಭುವನೇಶ್ವರಿಗಳು ಅಷ್ಟಕೋನವನ್ನು ಮತ್ತು ಆಗ್ನೇಯ, ನೈರುತ್ಯ ಮತ್ತು ವಾಯುವ್ಯ ದಿಕ್ಕಿನ ಭುವನೇಶ್ವರಿಗಳು ಸಮತಟ್ಟಾದ ಶಿಲಾ ಫಲಕದ ಮೇಲೆ ನಾಲ್ಕು ಪದ್ಮದ ರಚನೆಯನ್ನು ಹೊಂದಿವೆ. ಈಶಾನ್ಯ ದಿಕ್ಕಿನ ಭುವನೇಶ್ವರಿಯು ಎರಡು ವೃತ್ತಾಕಾರದೊಂದಿಗೆ ಮಧ್ಯದಲ್ಲಿ ಶಿಲಾಫಲಕದಿಂದ ಕೂಡಿದೆ. ನವರಂಗದ ಮಧ್ಯ ಅಂಕಣದ ಭುವನೇಶ್ವರಿಯು ಅಷ್ಟಕೋನದ ದಿಂಡುಗಳನ್ನು ಹೊಂದಿದ್ದು, ಇದರ ಮಧ್ಯಭಾಗದ ಸಮತಟ್ಟಾದ ಶಿಲಾಫಲಕದ ಮೇಲೆ ನಟರಾಜನ ಸುತ್ತಲೂ ಮಹಾವಿಷ್ಣು, ಕಾರ್ತಿಕೇಯ, ಶಿವ, ಬ್ರಹ್ಮ, ಚಾಮರಧಾರಿಣಿ, ನರ್ತನ ಗಣೇಶ ಮತ್ತು ಮೃದಂಗ ನುಡಿಸುತ್ತಿರುವ ನಂದಿ ಶಿಲ್ಪಗಳಿಂದ ಅಲಂಕೃತವಾಗಿದೆ.[79] (ಚಿ.ಸಂ. 101) ನವರಂಗದ ದ್ವಾರಬಂಧವು ವಜ್ರ, ವಲ್ಲೀ, ಸ್ತಂಭ, ವಲ್ಲೀ, ಮತ್ತೊಂದು ಅಲಂಕಾರಿಕ ಪಟ್ಟಿಕೆಯೂ ಸೇರಿದಂತೆ ಒಟ್ಟು ಪಂಚ ಶಾಖೆಗಳಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಯಾವುದೇ ಶಿಲ್ಪ ಕಂಡುಬರುವುದಿಲ್ಲ. ದ್ವಾರದ ಎರಡೂ ಬದಿಯಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ಶೈವ ದ್ವಾರಪಾಲಕರಾದ ಕಾಳ, ಮಹಾಕಾಳರ ಶಿಲ್ಪಗಳಿವೆ.

**ಮುಖಮಂಟಪ:** ಮುಖಮಂಟಪವು ಮೂರು ಶ್ರೀಕಾರ ಸ್ತಂಭಗಳು ಮತ್ತು ಚತುರಸ್ರವಾದ ದಿಂಡು ಹಾಗೂ ವೃತ್ತಾಕಾರದ ದಿಂಡನ್ನು ಹೊಂದಿರುವ ಮತ್ತೊಂದು ಸ್ತಂಭದಿಂದ ಕೂಡಿದೆ. ದ್ವಾರದ ಎರಡೂ ಪಾರ್ಶ್ವದಲ್ಲಿ ಕುಳಿತುಕೊಳ್ಳಲು ಕಕ್ಷಾಸನಗಳಿವೆ. (ಚಿ.ಸಂ. 102)

**ಅಧಿಷ್ಠಾನ ಮತ್ತು ಭಿತ್ತಿ:** ಈ ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯು ಸಂಪೂರ್ಣವಾಗಿ ಒರಟು ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ. ಈ ದೇವಾಲಯವನ್ನು ಹೊರಭಾಗದಿಂದ ನೋಡಿದಾಗ ಇದು ಹೊಯ್ಸಳ ದೇವಾಲಯ ಎಂಬ ಭಾವನೆ ಯಾರಿಗೂ ಬರುವುದಿಲ್ಲ. ದಕ್ಷಿಣ

ದಿಕ್ಕಿನ ಭಿತ್ತಿಯಲ್ಲಿ ಇದೇ ದಿಕ್ಕಿಗೆ ಅಭಿಮುಖವಾಗಿ ಒಂದು ದ್ವಾರವಿದ್ದು, ಇದು ಸರಳವಾದ ಬಾಗಿಲುವಾಡವನ್ನು ಹೊಂದಿದೆ.

**ಶಿಖರ:** ಇದನ್ನು ಇತ್ತೀಚಿನ ಕಾಲದಲ್ಲಿ ಸಿಮೆಂಟ್ ಮತ್ತು ಇಟ್ಟಿಗೆಯನ್ನು ಬಳಸಿ ನಿರ್ಮಿಸಲಾಗಿದ್ದು, ಎರಡು ತಲಗಳನ್ನು ಹೊಂದಿರುವ ಬ್ರಹ್ಮಚ್ಛಂಧ ಮಾದರಿಯಿಂದ ಕೂಡಿದೆ. (ಚಿ.ಸಂ. 103) ಇದರ ನಾಲ್ಕು ಮೂಲೆಗಳಲ್ಲಿ ನಾಲ್ಕು ನಂದಿಗಳನ್ನು ಮತ್ತು ಶಿಖರದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ನಾಸಿಗಳನ್ನು ನಿರ್ಮಿಸಲಾಗಿದೆ.

**ದೇವಾಲಯದ ಜೀರ್ಣೋದ್ಧಾರ ಸಮಯದಲ್ಲಿ ಆಗಿರುವ ಬದಲಾವಣೆಗಳು**

ಮೂಲತಃ ಇದು ದ್ವಿಕೂಟ ದೇವಾಲಯವಾಗಿದ್ದು, ದಕ್ಷಿಣ ದಿಕ್ಕಿನಲ್ಲಿಯು ಒಂದು ಗರ್ಭಗುಡಿ ಇತ್ತೆಂದು ವರದಿಗಳು ತಿಳಸುತ್ತವೆ.[80] ಉತ್ತರಾಭಿಮುಖವಾಗಿದ್ದ ಈ ಗರ್ಭಗುಡಿಯಲ್ಲಿ ಅತ್ಯಂತ ಸುಂದರವಾದ ಅಷ್ಟಭುಜಧಾರಿಯಾದ ಕಾಳ ಶಿಲ್ಪವಿತ್ತೆಂದು[81] ಕೆಲವು ದಾಖಲೆಗಳು ಹೇಳುತ್ತವಾದರೂ ಇಂದು ಈ ಶಿಲ್ಪ ಕಂಡುಬರುವುದಿಲ್ಲ. ಆದ್ದರಿಂದ ಜೀರ್ಣೋದ್ಧಾರದ ಸಮಯದಲ್ಲಿ ಬಹುಶಃ ಈ ಗರ್ಭಗುಡಿಯು ಶಿಥಿಲವಾಗಿದ್ದರಿಂದ ಇದನ್ನು ತೆರವುಗೊಳಿಸಿ ಇದರ ಬಾಗಿಲುವಾಡವನ್ನು ದಕ್ಷಿಣ ದಿಕ್ಕಿನ ಭಿತ್ತಿಗೆ ಅಳವಡಿಸಿರಬಹುದು.[82](ಚಿ.ಸಂ. 104) ಇದರ ಭುವನೇಶ್ವರಿಗಳು ಒಂದಕ್ಕಿಂತ ಒಂದು ಭಿನ್ನವಾಗಿರುವುದರಿಂದ ಬೇರೆ ಯಾವುದಾದರೂ ದೇವಾಲಯದ ಅವಶೇಷ ಭಾಗಗಳನ್ನು ಬಳಸಿಕೊಂಡಿರಲೂಬಹುದು. ಏಕೆಂದರೆ ಈ ಗ್ರಾಮದಲ್ಲಿ ಸುಮತಿ ತೀರ್ಥಂಕರ ಬಸದಿ ಎಂಬ ಜೈನ ಬಸದಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಯಿತ್ತೆಂದು ಶಾಸನಗಳು ತಿಳಸಿವೆ.ಯಾದರೂ ಇಂದು ಈ ಬಸದಿಯು ನವೀನವಾಗಿ ನಿರ್ಮಾಣಗೊಂಡಿದೆ. ಆದರೆ ಈ ಬಸದಿಯ ಕೆಲವು ಅವಶೇಷಗಳು ಕಂಡುಬರುವುದಿಲ್ಲ. ಅದೂ ಅಲದೇ ಈ ವೀರಭದ್ರ ದೇವಾಲಯದ ಮುಂದೆ ಒಂದು ದ್ವಾರಮಂಟಪವಿದ್ದು, ಇದರ ಸ್ತಂಭಗಳು, ಭಿತ್ತಿಯಲ್ಲಿ ಕಂಡುಬರುವ ಸ್ತಂಭ ಪಂಜರಗಳು ಮತ್ತು ಕೋಷ್ಠ ಪಂಜರಗಳಿಂದ ಕೂಡಿರುವುದರಿಂದ ಇದೇ ದೇವಾಲಯದ ಅಥವಾ ಬೇರೊಂದು ದೇವಾಲಯದ ಭಿತ್ತಿಯ ಮತ್ತು ಇತರ ಭಾಗದ ಅವಶೇಷಗಳನ್ನು ಬಳಸಿಕೊಂಡು ಇದರ ದ್ವಾರಮಂಟಪವನ್ನು ಮತ್ತು ದೇವಾಲಯವನ್ನು ನಿರ್ಮಿಸಿದ್ದಾರೆ ಎಂದು ಊಹಿಸಬಹುದು. (ಚಿ.ಸಂ. 105) ಹಾಗೂ ಈ ದೇವಾಲಯದಲ್ಲಿ ಹಲವಾರು ವೀರಭದ್ರನ ಶಿಲ್ಪಗಳಿದ್ದವೆಂದು ತಿಳದುಬರುತ್ತದೆ. ಮತ್ತು ಈಗಿರುವ ವೀರಭದ್ರನ ಶಿಲ್ಪವು ವಿಜಯನಗರ ಕಾಲದ ಶಿಲ್ಪ ಲಕ್ಷಣಗಳನ್ನು ಹೊಂದಿದೆ.[83] ಆದ್ದರಿಂದ ಇದು ಹೊಯ್ಸಳರ ಕಾಲದ ವೀರಭದ್ರನ ಶಿಲ್ಪವೋ

ಅಥವಾ ನಂತರದ ಕಾಲಘಟ್ಟದಲ್ಲಿ ಸೇರ್ಪಡೆಯಾಯಿತೋ ಹಾಗೂ ಇಲ್ಲದ್ದಂತಹ ಕಾಳ ಶಿಲ್ಪ ಏನಾಯಿತು ಎಂಬ ಹಲವಾರು ಅಂಶಗಳು ಗೊಂದಲದಿಂದ ಕೂಡಿವೆ ಎಂದು ಅಭಿಪ್ರಾಯಿಸಬಹುದು.

**ಸಾಲಗಾಮೆ**

ಈ ಗ್ರಾಮವು ಹಾಸನ ತಾಲೂಕಿನ ಒಂದು ಹೋಬಳ ಕೇಂದ್ರವಾಗಿದ್ದು, ಹಾಸನ ನಗರದಿಂದ ಉತ್ತರಕ್ಕೆ 12 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ ನಾಲ್ಕು ಶಾಸನಗಳು ಮತ್ತು ಅರ್ಕೇಶ್ವರ, ಕೇಶವ ಮತ್ತು ಆಂಜನೇಯ ದೇವಾಲಯಗಳು ಕಂಡುಬರುತ್ತವೆ. ಇವುಗಳಲ್ಲಿ ಅರ್ಕೇಶ್ವರ ಮತ್ತು ಕೇಶವ ದೇವಾಲಯಗಳು ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾಗಿವೆ.

**ಅರ್ಕೇಶ್ವರ ದೇವಾಲಯ**

ಈ ದೇವಾಲಯವು ಈ ಗ್ರಾಮದ ಬಸ್ ನಿಲ್ದಾಣದ ಬಳ ಪೂರ್ವಾಭಿಮುಖವಾಗಿ ಕಂಡುಬರುತ್ತದೆ. (ಚಿ.ಸಂ. 106) ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನಗಳು ಕಂಡುಬರುವುದಿಲ್ಲ. ಆದರೆ ದೇವಾಲಯದ ಮುಂದೆ ಕಂಡುಬಂದಿರುವ ಕ್ರಿ.ಶ.1566ರ ಶಾಸನವು[84] ಸ್ತುತಿಯೊಂದಿಗೆ ಆರಂಭವಾಗಿ ಶಾಲಿವಾಹನ ಶಕವರ್ಷವನ್ನು ನಮೂದಿಸಿದ್ದು ಮುಂದಿನ ಪಠ್ಯ ನಷ್ಟವಾಗಿದೆ. ಈ ದೇವಾಲಯದ ನಿರ್ಮಾಣದ ಬಗ್ಗೆ ಶಾಸನಗಳದ್ದಾಗಿಯೂ ಕೂಡ ಇದು ಹೊಯ್ಸಳರ ಕಾಲದ ದೇವಾಲಯ ಎಂದು ಸ್ಪಷ್ಟವಾಗಿ ಹೇಳಬಹುದು. ಏಕೆಂದರೆ ಇದರ ಸುಖನಾಸದ ಮೇಲ್ಭಾಗದಲ್ಲಿ ಸಳನು ಹುಲಿಯೊಂದಿಗೆ ಹೋರಾಡುತ್ತಿರುವ ಶಿಲ್ಪವು ಕೆತ್ತಲ್ಪಟ್ಟಿರುತ್ತದೆ. ಈ ದೇವಾಲಯವು ಗರ್ಭಗುಡಿ, ಸುಖನಾಸಿ, ನವರಂಗ ಮತ್ತು ಭಾಗಶಃ ಮುಚ್ಚಿದ ಮುಖಮಂಟಪವನ್ನು ಹೊಂದಿದೆ. ಆದರೆ ಗರ್ಭಗುಡಿ ಮತ್ತು ಸುಖನಾಸಿ ಭಾಗ ಮಾತ್ರ ಹೊಯ್ಸಳರ ಆಳ್ವಿಕೆಯಲ್ಲಿ ನಿರ್ಮಾಣವಾಗಿದ್ದು ಉಳಿದ ಭಾಗಗಳು ನಂತರದ ಕಾಲಘಟ್ಟದಲ್ಲಿ ಸೇರ್ಪಡೆಗೊಂಡಿವೆ.

**ಗರ್ಭಗುಡಿ ಮತ್ತು ಸುಕನಾಸಿ:** ಗರ್ಭಗುಡಿ 7x7 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದೆ. ಗರ್ಭಗೃಹದ ವಿತಾನವು ಸರಳ ಪದ್ಮದ ರಚನೆಯಿರುವ ನಾಭಿಛಂದ ಮಾದರಿಯದ್ದಾಗಿದ್ದು ಇದರ ಬಾಗಿಲುವಾಡವು ಯಾವುದೇ ಅಲಂಕರಣೆಗಳಿಲ್ಲದೆ ಸರಳವಾಗಿದೆ. ಲಲಾಟ ಬಿಂಬದಲ್ಲಿ

ಯಾವುದೇ ಶಿಲ್ಪಗಳಾಗಲೀ ಹಾಗೂ ದ್ವಾರದ ಪಾರ್ಶ್ವದಲ್ಲಿ ದ್ವಾರಪಾಲಕರ ಶಿಲ್ಪಗಳಾಗಲೀ ಕಂಡುಬರುವುದಿಲ್ಲ. ಸುಖನಾಸಿಯೂ ಕೂಡ ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿದ್ದು, ಸರಳ ಪದ್ಮದ ನಾಭಿಚ್ಛಂಧ ವಿತಾನವನ್ನು ಹೊಂದಿದೆ. ಇದರ ಬಾಗಿಲುವಾಡವು ಸಹ ಸರಳವಾಗಿದ್ದು ಎರಡೂ ಪಾರ್ಶ್ವದಲ್ಲಿ ಒಂದೇ ಸಾಲಿನ ಜಾಲಾಂಧ್ರಗಳು ಕಂಡುಬಂದಿವೆ. ಹಾಗೂ ದ್ವಾರದ ಎರಡೂ ಪಾರ್ಶ್ವದಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ವರ್ಧಮಾನ ಶೈಲಿಯ ಭಿತ್ತಿ ಸ್ತಂಭಗಳಿವೆ. (ಚಿ.ಸಂ. 107)

**ನವರಂಗ:** ಇದು 20x18 ಅಡಿ ಉದ್ದ ಅಗಲವನ್ನು ಹಾಗೂ ಒರಟು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಿರುವ ನಾಲ್ಕು ಸ್ತಂಭಗಳನ್ನು ಹೊಂದಿದ್ದು ಇವು ಚತುರಶ್ರವಾದ ದಿಂಡು, 8 ಕೋನ, 4 ಕೋನ, 8 ಕೋನ, 4 ಕೋನವನ್ನು ನಂತರ ಆಧಾರ ಬೋದಿಗೆಯನ್ನು ಹೊಂದಿವೆ. (ಚಿ.ಸಂ. 108) ನವರಂಗದ ಮಧ್ಯದ ಅಂಕಣದಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದ್ದು, ಈ ಅಂಕಣದ ಭುವನೇಶ್ವರಿಯು ಸರಳ ಪದ್ಮದ ರಚನೆಯನ್ನು ಹೊಂದಿದೆ. ನವರಂಗದ ಪೂರ್ವ ಭಿತ್ತಿಯ ಎರಡೂ ಪಾರ್ಶ್ವದಲ್ಲಿ ತಲಾ ಎರಡು ವೀರಗಲ್ಲುಗಳನ್ನು ಗೋಡೆಗೆ ಅಳವಡಿಸಿದ್ದಾರೆ. ನವರಂಗದ ಛಾವಣಿಗೆ ಗ್ರಾನೈಟ್ ಕಲ್ಲುಗಳನ್ನು ಹಾಸಲಾಗಿದ್ದು ಯಾವುದೇ ಅಲಂಕರಣಗಳು ಕಂಡುಬರುವುದಿಲ್ಲ.

**ಮುಖಮಂಟಪ:** ಇದು ಇತ್ತೀಚಿನ ಕಾಲದಲ್ಲಿ ಇಟ್ಟಿಗೆ, ಸಿಮೆಂಟ್‌ನಿಂದ ನಿರ್ಮಾಣವಾಗಿ ಸುತ್ತಲೂ ಮುಚ್ಚಲ್ಪಟ್ಟಿದ್ದು ಮುಂಭಾಗದಲ್ಲಿ ಎರಡು ಕಿಟಕಿಗಳನ್ನು ಮತ್ತು ಕಬ್ಬಿಣದ ಗೇಟನ್ನು ಹೊಂದಿರುತ್ತದೆ.

**ಭಿತ್ತಿ ಮತ್ತು ಶಿಖರ:** ಈ ದೇವಾಲಯದ ನವರಂಗ ಮತ್ತು ಮುಖಮಂಟಪದ ಭಿತ್ತಿಯು ಇತ್ತೀಚಿನ ಸೈಜುಗಲ್ಲು, ಇಟ್ಟಿಗೆ ಮತ್ತು ಸಿಮೆಂಟ್‌ನಿಂದ ನಿರ್ಮಾಣವಾಗಿರುತ್ತದೆ. ಆದರೆ ಗರ್ಭಗುಡಿ ಮತ್ತು ಸುಕನಾಸಿಯ ಭಿತ್ತಿಯು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದು ಇದರ ಅಧಿಷ್ಠಾನ ಭಾಗವು ಪೂರ್ಣವಾಗಿ ಭೂಮಿಯಲ್ಲಿ ಮುಚ್ಚಿ ಹೋಗಿದೆ. (ಚಿ.ಸಂ. 109) ಭಿತ್ತಿಯಲ್ಲಿ ಬ್ರಹ್ಮಕಾಂತ ಭಿತ್ತಿಪಾದಗಳು, ಭಿತ್ತಿಯ ನಂತರದ ಪ್ರಸ್ತರ ಭಾಗದಲ್ಲಿ ಉತ್ತರ, ವಲಭೀ ಮತ್ತು ಕಪೋತ ಭಾಗಗಳು ಕಂಡು ಬರುತ್ತವೆ. ಗರ್ಭಗುಡಿಯ ಮೇಲ್ಭಾಗದಲ್ಲಿ ಪಿರಮಿಡ್ಡಿನಾಕೃತಿಯಲ್ಲಿ 9 ಪಟ್ಟಿಕೆಗಳನ್ನು ಹೊಂದಿರುವ ಫಾಂಸಾನ ಶೈಲಿಯ ಶಿಖರವಿದ್ದು ಇದರ ಮೇಲ್ಭಾಗದಲ್ಲಿ ಚತುರಶ್ರವಾದ ಅಧೋಪದ್ಮವಿದೆ. ಶಿಖರದ ಮುಂಭಾಗದಲ್ಲಿ ಶಾಲಾಕಾರದ ಸುಖನಾಸವಿದ್ದು ಇದರ ಮೇಲ್ಭಾಗದಲ್ಲಿ ಸಳನು ಹುಲಿಯೊಂದಿಗೆ ಹೋರಾಡುತ್ತಿರುವ ಶಿಲ್ಪವನ್ನು ಕಂಡರಿಸಲಾಗಿದೆ.

(ಚಿ.ಸಂ. 110) ದೇವಾಲಯದ ಮುಂಭಾಗದಲ್ಲಿ ಒಂದು ಸ್ತಂಭವಿದ್ದು ಇದರ ಪಕ್ಕದಲ್ಲಿ ಒಂದು ಪೀಠ, ನಾಗರಕಲ್ಲು ಹಾಗೂ ಒಂದು ನಂದಿ ಶಿಲ್ಪವಿದೆ. ಒಟ್ಟಿನಲ್ಲಿ ಈ ದೇವಾಲಯವು ಯಾವುದೇ ವಿಶೇಷ ವಾಸ್ತು ಲಕ್ಷಣಗಳು ಮತ್ತು ಶಿಲ್ಪಗಳನ್ನು ಹೊಂದಿರದೆ ಸರಳವಾಗಿದೆ ಎಂದು ಅಭಿಪ್ರಾಯಿಸಬಹುದು.

**ನಿಟ್ಟೂರು**

ಈ ಗ್ರಾಮವು ಹಾಸನ ನಗರದಿಂದ ಉತ್ತರ ದಿಕ್ಕಿಗೆ 18 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ 7 ಶಾಸನಗಳು ಮತ್ತು ಸೋಮೇಶ್ವರ, ಚನ್ನಕೇಶವ, ಆಂಜನೇಯ ಮತ್ತು ಕಲ್ಲೇಶ್ವರ ದೇವಾಲಯಗಳು ಕಂಡು ಬರುತ್ತವೆ. ಇವುಗಳಲ್ಲಿ ಸೋಮೇಶ್ವರ ಮತ್ತು ಚನ್ನಕೇಶವ ದೇವಾಲಯಗಳು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವ ವಾಸ್ತುಲಕ್ಷಣಗಳನ್ನು ಹೊಂದಿದ್ದು, ಕಲ್ಲೇಶ್ವರ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುದು ಶಾಸನದಿಂದ ಸ್ಪಷ್ಟವಾಗುತ್ತದೆ.[85] ಆಂಜನೇಯ ದೇವಾಲಯವು ಇತ್ತೀಚಿನ ಕಾಲದಲ್ಲಿ ನಿರ್ಮಾಣವಾಗಿದೆ. ಈ ಗ್ರಾಮವು ಹೊಯ್ಸಳರ ಆಳ್ವಿಕೆಯಲ್ಲಿ ಒಂದು ಅಗ್ರಹಾರವಾಗಿತ್ತೆಂಬುದು ಇಲ್ಲಿನ ಶಾಸನದಿಂದ ತಿಳಿದುಬರುತ್ತದೆ.

**ಸೋಮೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಶಾಲಾ ಆವರಣದಲ್ಲಿ ಪೂರ್ವಾಭಿಮುಖವಾಗಿ ಕಂಡುಬಂದಿದೆ. (ಚಿ.ಸಂ. 111) ಈ ದೇವಾಲಯ ನಿರ್ಮಾಣದ ಬಗ್ಗೆ ಯಾವುದೇ ಶಾಸನಗಳು ಕಂಡುಬರುವುದಿಲ್ಲ. ಆದರೆ ಇದರ ಪಕ್ಕದಲ್ಲೆ ಇರುವ ಕ್ರಿ.ಶ.12-13ನೇ ಶತಮಾನದ ಒಂದು ಶಾಸನವು[86] ಇದಕ್ಕೆ ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ. ಇದೇ ಗ್ರಾಮದ ಮತ್ತೊಂದು ಶಾಸನವು ಈ ದೇವಾಲಯವನ್ನು ಸೌರಾಷ್ಟ್ರದ ಸೋಮನಾಥ ದೇವಾಲಯ ಎಂದು ಉಲ್ಲೇಖಿಸಿದೆ.[87] ಸೋಮೇಶ್ವರ ದೇವಾಲಯವು ಗರ್ಭಗುಡಿ, ಸುಕನಾಸಿ ಮತ್ತು ನವರಂಗವನ್ನು ಹೊಂದಿದ್ದು, ಇದರ ಬಲ ಪಾರ್ಶ್ವದಲ್ಲಿ ಒಂದು ತ್ರುಟಿತ ಶಾಸನಕಲ್ಲು, ಒಂದು ಶಾಸನೋಕ್ತ ವೀರಗಲ್ಲು ಮತ್ತು ಶಾಸನವಿಲ್ಲದ ಎರಡು ವೀರಗಲ್ಲುಗಳು ಕಂಡುಬರುತ್ತವೆ.

**ಗರ್ಭಗೃಹ:** ಇದು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಒಂದೂವರೆ ಅಡಿ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವು ಕಂಡುಬರುತ್ತದೆ. ಈ ಲಿಂಗದ

ಮೇಲ್ಮೈ ಸಮತಟ್ಟಾಗಿದ್ದು ಮುಖ ಭಾಗದಲ್ಲಿ ಬ್ರಹ್ಮಸೂತ್ರ ರೇಖೆಗಳು ಕಂಡುಬಂದಿವೆ. ಇದರ ವಿತಾನವು ಸರಳ ನಾಭಿಚ್ಛಂಧ ಮಾದರಿಯದ್ದಾಗಿದ್ದು, ಬಾಗಿಲುವಾಡವೂ ಸಹ ಸರಳವಾಗಿದೆ.

**ಸುಕನಾಸಿ:** ಇದು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಕನಾಸಿಯು ಸರಳ ಪದ್ಮದ ಕೆತ್ತನೆ ಇರುವ ಭುವನೇಶ್ವರಿಯನ್ನು ಹೊಂದಿದ್ದು, ಇದರ ಬಾಗಿಲುವಾಡವು ಸರಳವಾಗಿದ್ದರೂ ಒಂದು ವಿಶಿಷ್ಟ ಲಕ್ಷಣಗಳನ್ನು ಒಳಗೊಂಡಿದೆ. ದ್ವಾರ ಬಂಧವು ಎರಡೂ ಪಾರ್ಶ್ವದಲ್ಲಿ ಮತ್ತು ದ್ವಾರದ ಮೇಲ್ಭಾಗದಲ್ಲಿ ಜಾಲಾಂಧ್ರಗಳನ್ನು ಹೊಂದಿದೆ. ಹಾಗೂ ದ್ವಾರದ ಎರಡೂ ಪಾರ್ಶ್ವದಲ್ಲಿ ಪೂರ್ಣಕುಂಭಗಳ ಕೆತ್ತನೆಯು ಕಂಡುಬಂದಿದೆ. ಈ ರೀತಿಯ ಪೂರ್ಣಕುಂಭಗಳ ಕೆತ್ತನೆಯು ಕಲ್ಯಾಣಿ ಚಾಲುಕ್ಯರ ಪ್ರಾರಂಭದ ದೇವಾಲಯಗಳಲ್ಲಿ ಕಂಡುಬರುತ್ತವೆ ಎಂಬ ಅಂಶವನ್ನು ಷ. ಷೆಟ್ಟರ್‌ರವರು ತಿಳಿಸುತ್ತಾರೆ.[88] (ಚಿ.ಸಂ. 112) ಆದ್ದರಿಂದ ಈ ದೇವಾಲಯವು ಕಲ್ಯಾಣಿ ಚಾಲುಕ್ಯರ ವಾಸ್ತುಶೈಲಿಯಿಂದ ಪ್ರಭಾವಿತವಾಗಿದೆ ಎಂದು ಹೇಳಬಹುದಾಗಿದೆ.

**ನವರಂಗ:** ಇದು 15X15 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ನಾಲ್ಕು ಸ್ತಂಭಗಳಿಂದ ಕೂಡಿದೆ. ಈ ಸ್ತಂಭಗಳು ಪೀಠ, ಚತುರಸ್ರವಾದ ದಿಂಡು, 16ಕೋನ, 8 ಕೋನ, 16ಕೋನ, ನಾಲ್ಕುಕೋನ, ಕಂಠ, ಮಂಡಿ, ಫಲಕ ಮತ್ತು ಆಧಾರ ಬೋದಿಗೆಯನ್ನು ಹೊಂದಿವೆ. (ಚಿ.ಸಂ. 113) ಈ ಸ್ತಂಭಗಳು ಪ್ರಾರಂಭದ ಚಾಳುಕ್ಯ ಶೈಲಿಯ ಸ್ತಂಭಗಳ ಲಕ್ಷಣಗಳನ್ನು ಹೊಂದಿರುವುದರಿಂದ ಈ ದೇವಾಲಯ ಹೊಯ್ಸಳರ ಪ್ರಾರಂಭದ ಅರಸರ ಕಾಲದಲ್ಲಿ ನಿರ್ಮಾಣವಾದಂತೆ ತೋರುತ್ತದೆ. ನವರಂಗದ ಛಾವಣಿಯು ಸರಳವಾದ ಪದ್ಮ ರಚನೆಯನ್ನು ಹೊಂದಿರುವ ವಿತಾನಗಳನ್ನು ಹೊಂದಿದ್ದು, ಯಾವುದೇ ಆಕರ್ಷಣೀಯ ಅಂಶಗಳು ಇದರಲ್ಲಿ ಕಂಡುಬರುವುದಿಲ್ಲ.

**ಅಧಿಷ್ಠಾನ ಮತ್ತು ಭಿತ್ತಿ:** ಈ ದೇವಾಲಯವು ಮಂಚಬಂಧ ಅಧಿಷ್ಠಾನವನ್ನು ಹೊಂದಿದ್ದು, ಕೆಲವು ಭಾಗಗಳಲ್ಲಿ ಇದು ಭೂಮಿಯಲ್ಲಿ ಮುಚ್ಚಿ ಹೋಗಿರುತ್ತದೆ. ಇದರ ಮೇಲೆ ಇತ್ತೀಚಿನ ಒರಟು ಸೈಜುಗಲ್ಲುಗಳನ್ನು ಬಳಸಿ ಭಿತ್ತಿಯನ್ನು ಮತ್ತು ಸಿಮೆಂಟ್ ಹಾಗೂ ಇಟ್ಟಿಗೆಯನ್ನು ಬಳಸಿ ಇತ್ತೀಚಿನ ಕೈಪಿಡಿ ಗೋಡೆ, ಶಿಖರವನ್ನು ನಿರ್ಮಿಸಲಾಗಿದೆ. (ಚಿ.ಸಂ. 114) ಈ ದೇವಾಲಯದ ದಕ್ಷಿಣ ಭಿತ್ತಿಯನ್ನು ಗಮನಿಸಿದಾಗ ಪ್ರಾರಂಭದಲ್ಲಿ ಈ ಗುಡಿಗೆ ದಕ್ಷಿಣ ದಿಕ್ಕಿನಲ್ಲಿ ದ್ವಾರವಿದ್ದಂತೆ ಕಂಡುಬರುತ್ತದೆ. (ಚಿ.ಸಂ. 115) ಆದರೆ ಇಂದು ಈ ದ್ವಾರವನ್ನು ಮುಚ್ಚಿದ್ದು, ಪೂರ್ವ ದಿಕ್ಕಿಗೆ ದ್ವಾರವನ್ನು ಮಾಡಿಕೊಂಡಿದ್ದಾರೆ. ಈ ದೇವಾಲಯಕ್ಕೆ ಮುಖಮಂಟಪ ಕಂಡುಬರುವುದಿಲ್ಲ.

ಹಾಗೂ ದೇವಾಲಯದ ಅವಶೇಷಗಳು ಅಕ್ಕ-ಪಕ್ಕದಲ್ಲೇ ಬಿದ್ದಿರುವುದರಿಂದ ಇದು ಜೀರ್ಣೋದ್ಧಾರದ ಸಮಯದಲ್ಲಿ ಕೆಲವು ಮಾರ್ಪಾಡುಗಳಿಗೆ ಒಳಗಾದಂತೆ ತೋರುತ್ತದೆ.

**ಕೈಲಾಸೇಶ್ವರ ದೇವಾಲಯ–ಗೊರೂರು**

ಈ ದೇವಾಲಯವು ಗೊರೂರು ಗ್ರಾಮದ ತ್ರಿಕೂಟೇಶ್ವರ ದೇವಾಲಯದ ಬಳಿ ಈಶಾನ್ಯ ದಿಕ್ಕಿನಲ್ಲಿ ಕಂಡುಬರುತ್ತದೆ. ಈ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನಗಳು ಕಂಡುಬರುವುದಿಲ್ಲ. ಆದರೆ ಈ ದೇವಾಲಯದ ಕೆಲವು ವಾಸ್ತು ಭಾಗಗಳು ಹೊಯ್ಸಳ ಶೈಲಿಯ ಲಕ್ಷಣಗಳನ್ನು ಹೊಂದಿರುವುದರಿಂದ ಬಹುಶಃ ಹೊಯ್ಸಳರ ಕಾಲದ ದೇವಾಲಯದ ಅವಶೇಷಗಳನ್ನು ಬಳಸಿಕೊಂಡು ಇದನ್ನು ನಿರ್ಮಿಸಿರುವಂತೆ ಕಂಡುಬರುತ್ತದೆ. ಗರ್ಭಗೃಹ, ಸುಕನಾಸಿ ಮತ್ತು ನವರಂಗ ಭಾಗವನ್ನು ಹೊಂದಿರುವ ಈ ದೇವಾಲಯವು ಪೂರ್ವಾಭಿಮುಖವಾಗಿ ನಿಂತಿರುತ್ತದೆ. (ಚಿ.ಸಂ. 116)

**ಗರ್ಭಗೃಹ:** ಇದು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಎರಡು ಅಡಿ ಪೀಠದ ಮೇಲೆ ಒಂದು ಅಡಿ ಎತ್ತರದ ಕೈಲಾಸೇಶ್ವರ ಲಿಂಗವಿದೆ. (ಚಿ.ಸಂ. 117) ಲಿಂಗದ ಮುಖ ಭಾಗದಲ್ಲಿ ಬ್ರಹ್ಮಸೂತ್ರದ ರೇಖೆಗಳು ಗೋಚರಿಸುತ್ತವೆ. ಗರ್ಭಗೃಹದ ಬಾಗಿಲುವಾಡವು ಯಾವುದೇ ಅಲಂಕರಣೆಗಳನ್ನು ಮತ್ತು ಲಲಾಟಬಿಂಬದಲ್ಲಿ ಶಿಲ್ಪಗಳನ್ನು ಹೊಂದಿರದೆ ಸರಳವಾಗಿದೆ.

**ಸುಕನಾಸಿ**: ಇದು ಕೂಡ 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಲಿಂಗಕ್ಕೆ ಅಭಿಮುಖವಾಗಿ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಬಾಗಿಲುವಾಡವು ಇತ್ತೀಚಿನ ಮರದಿಂದ ಮಾಡಿದ ಹೂಬಳ್ಳಿಗಳ ಅಲಂಕರಣದಿಂದ ಕೂಡಿದೆ. (ಚಿ.ಸಂ. 118)

**ನವರಂಗ:** ಇದು ಸುಮಾರು 20X20 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಹೊಯ್ಸಳ ಶೈಲಿಯ ನಾಲ್ಕು ಶ್ರೀಕಾರ ಸ್ತಂಭಗಳಿಂದ ಕೂಡಿದೆ. (ಚಿ.ಸಂ. 119) ಈ ನವರಂಗದ ಬಲಪಾರ್ಶ್ವದಲ್ಲಿ ಇನ್ನೊಂದು ದ್ವಾರವು ಕಂಡುಬರುತ್ತದೆ. ನವರಂಗದ ಬಲಭಾಗದಲ್ಲಿ ಪಶ್ಚಿಮ ಭಿತ್ತಿಯ ಬಳಿ ಸರಸ್ವತಿ, ಇದರ ಪಕ್ಕದಲ್ಲಿ ಗಣೇಶ ಮತ್ತು ನವರಂಗದ ಎಡಭಾಗದಲ್ಲಿ ಉಮಾಮಹೇಶ್ವರ, ಸೂರ್ಯ, ಕಾರ್ತಿಕೇಯ ಹಾಗೂ ಕೇಶವ ಶಿಲ್ಪಗಳು ಕಂಡುಬರುತ್ತವೆ.[89],[90] ಸರಸ್ವತಿಯು ಸರ್ವಾಭರಣ ಭೂಷಿತಳಾಗಿ ಪಾಶ ಅಂಕುಶ, ಅಕ್ಷಮಾಲೆ ಮತ್ತು ಪುಸ್ತಕವನ್ನು ಹಿಡಿದು ಸುಂದರ ಮುಖಭಾವದೊಂದಿಗೆ ಆಸೀನ ಮೂರ್ತಿಯಾಗಿದ್ದಾಳೆ. ಗಣೇಶನು ಸರ್ವಸಾಮಾನ್ಯ

ಲಕ್ಷಣಗಳನ್ನು ಹೊಂದಿದ್ದಾನೆ. ನವರಂಗದ ಎಡಭಾಗದಲ್ಲಿ ಅತ್ಯಂತ ಸುಂದರವಾದ ಉಮಾಮಹೇಶ್ವರ ಶಿಲ್ಪವಿದ್ದು ಇದರಲ್ಲಿ ಇಬ್ಬರೂ ಸರ್ವಾಭರಣ ಭೂಷಿತರಾಗಿದ್ದು, ಉಮೆಯು ಶಿವನ ಎಡತೊಡೆಯ ಮೇಲೆ ಕುಳಿತಿದ್ದಾಳೆ. ಶಿವನು ತ್ರಿಶೂಲ, ಢಮರು, ಅಕ್ಷಮಾಲೆಯನ್ನು ಹಿಡಿದಿದ್ದು, ಇನ್ನೊಂದು ಕೈಯನ್ನು ಉಮೆಯ ಹೆಗಲಿನ ಮೇಲೆ ಹಾಕಿದ್ದಾನೆ. ಈ ಶಿಲ್ಪದ ಹಿಂಭಾಗದಲ್ಲಿ ಸುಂದರವಾದ ಪ್ರಭಾವಳಿಯಿದೆ. ಇದರ ಪಕ್ಕದಲ್ಲಿ ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದ ಆಕರ್ಷಕವಾದ ಸೂರ್ಯ ಶಿಲ್ಪವಿದೆ. ಸೂರ್ಯ ಶಿಲ್ಪದ ಎಡಪಾರ್ಶ್ವದಲ್ಲಿ ನವಿಲಿನ ಮೇಲೆ ಆಸೀನನಾದ ಕಾರ್ತಿಕೇಯನ ಸುಂದರವಾದ ಶಿಲ್ಪವಿದೆ. ನವರಂಗದಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮಧಾರಿಯಾದ ಭೂದೇವಿ, ಶ್ರೀದೇವಿ ಸಮೇತನಾಗಿರುವ ಆಕರ್ಷಕವಾದ ಕೇಶವನ ವಿಗ್ರಹವೂ ಸಹ ಕಂಡುಬಂದಿದೆ. ಒಟ್ಟಿನಲ್ಲಿ ಈ ದೇವಾಲಯವು ಹೊರಭಾಗದಿಂದ ಸರಳವಾಗಿ ಕಂಡುಬಂದರೂ ಸಹ ಒಳಭಾಗದಲ್ಲಿ ಅಪೂರ್ವವಾದ ಶಿಲ್ಪ ಸಂಪತ್ತಿನಿಂದ ಕೂಡಿದೆ ಎಂದು ಹೇಳಬಹುದಾಗಿದೆ.

**ಅಧಿಷ್ಠಾನ ಮತ್ತು ಭಿತ್ತಿ:** ಈ ದೇವಾಲಯದ ಗರ್ಭಗೃಹ ಮತ್ತು ಸುಕನಾಸಿಯ ಅಧಿಷ್ಠಾನ ಹಾಗೂ ಭಿತ್ತಿಯು ಒಂದು ರೀತಿ ಇದ್ದರೆ, ನವರಂಗದ ಭಿತ್ತಿಯ ಲಕ್ಷಣಗಳೇ ಬೇರೆಯಾಗಿದೆ. ಗರ್ಭಗುಡಿ ಮತ್ತು ಸುಕನಾಸಿಯ ಅಧಿಷ್ಠಾನವು ಮಂಚಬಂಧವಾಗಿದೆ. ಆದರೆ ನವರಂಗದ ಅಧಿಷ್ಠಾನವು ಭಾಗಶಃ ಭೂಮಿಯಲ್ಲಿ ಮುಚ್ಚಿ ಹೋಗಿದೆ. ಭಿತ್ತಿಯ ಬಗ್ಗೆ ಹೇಳುವುದಾದರೆ ಗರ್ಭಗುಡಿಯ ಭಿತ್ತಿಯು ಒರಟು ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದ್ದರೆ, ಸುಕನಾಸಿಯ ಭಿತ್ತಿಯನ್ನು ಇತ್ತೀಚಿನ ಸೈಜುಗಲ್ಲುಗಳನ್ನು ಬಳಸಿ ನಿರ್ಮಿಸಲಾಗಿದೆ. ಆದರೆ ನವರಂಗದ ಭಿತ್ತಿಯು ಇವರೆಡಕ್ಕಿಂತ ಭಿನ್ನವಾಗಿ ಕೆಳಭಾಗದಿಂದ ಸುಮಾರು ಮೂರು ಅಡಿಯವರೆಗೆ ಬ್ರಹ್ಮಕಾಂತ ಭಿತ್ತಿಪಾದಗಳನ್ನು, ನಂತರ ಗ್ರಾನೈಟ್ ಕಲ್ಲಿನ ಗೋಡೆಯನ್ನು ಹೊಂದಿದೆ.[91] (ಚಿ.ಸಂ. 120) ಗರ್ಭಗುಡಿಯ ಮೇಲ್ಭಾಗದಲ್ಲಿ ಇತ್ತೀಚಿನ ಇಟ್ಟಿಗೆ ಮತ್ತು ಸಿಮೆಂಟ್ ಅನ್ನು ಬಳಸಿ ನಾಲ್ಕು ತಲಗಳ ಬ್ರಹ್ಮಚ್ಛಂಧ ಶಿಖರವನ್ನು ನಿರ್ಮಿಸಲಾಗಿದೆ. ಒಟ್ಟಿನಲ್ಲಿ ಈ ದೇವಾಲಯವು ವಿವಿಧ ಕಾಲಘಟ್ಟಗಳಲ್ಲಿ ಹೊಸ ಹೊಸ ಸೇರ್ಪಡೆಗಳೊಂದಿಗೆ ಜೀರ್ಣೋದ್ಧಾರಗೊಂಡಿರುವುದು ಗೋಚರಿಸುತ್ತದೆ. ಆದರೆ ಎಷ್ಟೇ ಮಾರ್ಪಾಡುಗಳು ಕಂಡುಬಂದರೂ ಸಹ ಹೊಯ್ಸಳರ ಲಕ್ಷಣಗಳು ಕೆಲವು ಭಾಗಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ ಎಂದು ಹೇಳಬಹುದಾಗಿದೆ.

## ವೈಷ್ಣವ ದೇವಾಲಯಗಳು

ಭಾರತದಲ್ಲಿ ಶೈವ ಧರ್ಮದಷ್ಟೇ ಪ್ರಾಚೀನತೆಯ ತಳಹದಿಯನ್ನು ವೈಷ್ಣವ ಧರ್ಮವು ಹೊಂದಿದೆ. ಶೈವರಲ್ಲಿ ಶಿವ ಶ್ರೇಷ್ಠನಾದರೆ ವೈಷ್ಣವರಿಗೆ ವಿಷ್ಣುವೇ ಪರಮಶ್ರೇಷ್ಠ. ಈತನೇ ಇವರಿಗೆ ಪ್ರಧಾನ ಆರಾಧ್ಯ ದೈವ. ಬ್ರಹ್ಮ ಮತ್ತು ಶಿವನು ಸೃಷ್ಟಿ ಮತ್ತು ಲಯಕರ್ತೃಗಳಾದರೆ ವಿಷ್ಣುವು ಸ್ಥಿತಿಕಾರನಾಗಿದ್ದಾನೆ. ವಿಷ್ಣುವಿನ ಉಲ್ಲೇಖ ನಾಲ್ಕು ವೇದಗಳಲ್ಲಿ ಬರುವುದುಂಟು. ಆರ್ಯ ವೀರನಾದ ಇಂದ್ರನಿಗೆ ವಿಷ್ಣು ನೆರವಾದ ಪ್ರಸ್ತಾಪಗಳು ಋಗ್ವೇದದಲ್ಲಿ ಬರುತ್ತವೆ. ಹಾಗೂ ಇಂದ್ರ ಮತ್ತು ವಿಷ್ಣುವನ್ನು ಒಟ್ಟಿಗೆ ಸೇರಿಸಿ ಇಂದ್ರಾವಿಷ್ಣು ಎಂದು ಕರೆದಿರುವುದು ಉಂಟು.[92] ವೈದಿಕ ಕಾಲದಲ್ಲಿ ಇಂದ್ರನಿಗಿದ್ದಷ್ಟು ಪ್ರಾಮುಖ್ಯತೆ ವಿಷ್ಣುವಿಗೆ ಇರಲಿಲ್ಲವೆಂದು ತಿಳಿದುಬರುತ್ತದೆ. ಆದರೆ ಬ್ರಾಹ್ಮಣಕಗಳ ಕಾಲದಲ್ಲಿ ಶತಪಥ ಬ್ರಾಹ್ಮಣವು ವಿಷ್ಣುವನ್ನು ನಾರಾಯಣ ಎಂಬ ಹೆಸರಿನೊಂದಿಗೆ ಮುಖ್ಯ ಪುರುಷನನ್ನಾಗಿ ಉಲ್ಲೇಖಿಸುತ್ತದೆ.[93] ವಿಷ್ಣುವು ಸ್ಥಿತಿಕಾರನಾಗಿ ದುಷ್ಟರನ್ನು ಶಿಕ್ಷಿಸಲು, ಶಿಷ್ಟರನ್ನು ರಕ್ಷಿಸಲು ವಿವಿಧ ಕಾಲಘಟ್ಟಗಳಲ್ಲಿ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಶ್ರೀರಾಮ, ಪರುಶುರಾಮ, ಬಲರಾಮ, ಬುದ್ಧ, ಕಲ್ಕಿ ಎಂಬ ಹತ್ತು ಅವತಾರಗಳನ್ನು ಎತ್ತಿರುವುದು ತಿಳಿದುಬರುತ್ತದೆ. ಮಹಾಗ್ರಂಥಗಳಾದ ರಾಮಾಯಣ ಮತ್ತು ಮಹಾಭಾರತದಲ್ಲಿ ವಿಷ್ಣುವಿನ ಅಸ್ಥಿತ್ವವನ್ನು ತಿಳಿಸಿದ್ದು, ರಾಮಾಯಣದಲ್ಲಿ ರಾಮನ ಅವತಾರದಲ್ಲಿ ವಿಷ್ಣು ಜನಿಸಿದರೆ, ಮಹಾಭಾರತದಲ್ಲಿ ಕೃಷ್ಣ ರೂಪದಲ್ಲಿ ಭೂಮಿಯ ಮೇಲೆ ಅವತರಿಸಿರುವನು. ಈ ರೀತಿಯ ಸ್ಥಿತಿಕಾರನಾದ ವಿಷ್ಣು ಮತ್ತು ಅವನ ದಶಾವತಾರಗಳಿಗೆ ಪ್ರಾಮುಖ್ಯತೆ ಕೊಟ್ಟು ಈತನೇ ಸರ್ವೋತ್ತಮನೆಂದು ಪೂಜ್ಯ ಭಾವನೆ ಹೊಂದಿ ಆರಾಧಿಸುವ ವೈಷ್ಣವರಲ್ಲಿ ಪ್ರಮುಖವಾಗಿ ಆರು ಪಂಗಡಗಳಿವೆ. ಶ್ರೀರಾಮನುಜ ಸಂಪ್ರದಾಯದ ಶ್ರೀವೈಷ್ಣವ, ಶ್ರೀಮಧ್ವಾಚಾರ್ಯರ ಸಂಪ್ರದಾಯದ ಸದ್ವೈಷ್ಣವರು (ಬ್ರಹ್ಮತಂತ್ರ ವೈಷ್ಣವರು, ಹರಿವೈಷ್ಣವರು), ಶ್ರೀ ಚೈತನ್ಯಸ್ವಾಮಿ ಸಂಪ್ರದಾಯದ ಶ್ರೀಚೈತನ್ಯ ವೈಷ್ಣವರು, ಶ್ರೀರಾಮನಂದಿ ವೈಷ್ಣವರು, ಶ್ರೀ ನಿಂಬಾರ್ಕ ಸಂಪ್ರದಾಯದ ವೈಷ್ಣವರು, ಶ್ರೀ ವಲ್ಲಭಾಚಾರ್ಯ ಸಂಪ್ರದಾಯದ ವೈಷ್ಣವರು[94] ಇವರೆಲ್ಲರೂ ಸಹ ವಿಷ್ಣುವಿನ ಸಾಕಾರ ಮೂರ್ತಿಯನ್ನು ಆರಾಧಿಸುವವರು.

ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮವು ಮೂರು ಮೂಲಗಳಲ್ಲಿ ಬೆಳೆದು ಬಂದಿದೆ. ಮೊದಲನೆಯದಾಗಿ ವೈದಿಕ–ಭಾಗವತ ಮೂಲದ ವೈಷ್ಣವ ಧರ್ಮವು ಕ್ರಿ.ಶ.ಹತ್ತನೇ ಶತಮಾನದವರೆಗೆ ಪ್ರಚಲಿತದಲ್ಲಿತ್ತು. ಹಾಗೆಯೇ ಕ್ರಿ.ಶ.4ನೇ ಶತಮಾನದ ಕರ್ನಾಟಕದ ಪ್ರಾಚೀನ ಕನ್ನಡದ ಹಲ್ಮಿಡಿ ಶಾಸನದ ಪಾಠವು ಸಹ ವಿಷ್ಣುವಿನ ಪ್ರಾರ್ಥನೆಯೊಂದಿಗೆ

ಪ್ರಾರಂಭವಾಗುತ್ತದೆ. ನಂತರದಲ್ಲಿ ಬಾದಾಮಿ ಚಾಳುಕ್ಯರು ಮತ್ತು ನೊಳಂಬರ ಕಾಲದಲ್ಲಿ ಬೆಳೆಯುತ್ತದೆ.

ಎರಡನೆಯದಾಗಿ ರಾಮಾನುಚಾರ್ಯರು ಕರ್ನಾಟಕಕ್ಕೆ ಬರುವ ಮೊದಲೇ ಅಲ್ಪ ಸ್ವಲ್ಪ ಮಟ್ಟಿಗೆ ಪರಿಚಿತವಾಗಿದ್ದ ಆಳ್ವಾರರ ವೈಷ್ಣವ ಧರ್ಮವನ್ನು ರಾಮಾನುಜಚಾರ್ಯರು ಕರ್ನಾಟಕಕ್ಕೆ ಬಂದ ಮೇಲೆ ಶ್ರೀ ವೈಷ್ಣವ ಧರ್ಮವನ್ನಾಗಿ 11-12ನೆಯ ಶತಮಾನದಲ್ಲಿ ಹೆಚ್ಚು ಪ್ರಚಾರ ಮಾಡಿ ಬೆಳೆಸಿದರು. ಮೂರನೆಯದಾಗಿ ಚೋಳರ, ಹೊಯ್ಸಳರ ಕಾಲದಲ್ಲಿನ ಬೆಳವಣಿಗೆ ಜೊತೆಗೆ ಕರ್ನಾಟಕದ ದಕ್ಷಿಣ ಕನ್ನಡ ಪ್ರಾಂತ್ಯದಿಂದ ಹುಟ್ಟಿಬಂದ ಮಧ್ವಾಚಾರ್ಯರಿಂದ (13ನೇ ಶತಮಾನ) ಬೆಳೆದು ಬಂದ ಮಾಧ್ವ ಪರಂಪರೆಯು ಮುಂದೆ ಹರಿದಾಸ ಪರಂಪರೆಯಾಗಿ ಸಮೃದ್ಧವಾಗಿ ವೈಷ್ಣವ ಧರ್ಮವನ್ನು ಮುಂದುವರೆಸಿತು.

ಹೊಯ್ಸಳರ ಕಾಲದಲ್ಲಿ ಶ್ರೀರಾಮಾನುಜಾಚಾರ್ಯರ ಪ್ರಭಾವದಿಂದಾಗಿ ವೈಷ್ಣವ ಧರ್ಮವು ಒಂದು ಉಚ್ಛ್ರಾಯ ಸ್ಥಿತಿಯನ್ನು ತಲುಪಿತು. ವಿಷ್ಣುವರ್ಧನನು ಶ್ರೀವೈಷ್ಣವ ದೀಕ್ಷೆಯನ್ನು ಪಡೆದ ಮೇಲೆ ಅಸಂಖ್ಯೆಯಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳನ್ನೊಳಗೊಂಡ ದೇವಾಲಯಗಳು ಮತ್ತು ಶಿಲ್ಪಗಳು ರಚನೆಯಾದವು. ಅದೇ ರೀತಿಯಾಗಿ ನಂತರ ಆಳ್ವಿಕೆ ನಡೆಸಿದ ಉಳಿದ ಹೊಯ್ಸಳ ಅರಸರು ಕೂಡ ಸರ್ವಧರ್ಮ ಸಹಿಷ್ಣುತೆಯನ್ನು  ಕಾಪಾಡಿಕೊಂಡು ಬರುವ ಮೂಲಕವೂ ಹೆಚ್ಚು ಸಂಖ್ಯೆಯ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದರು. ಇದರ ಭಾಗವಾಗಿ ಹಾಸನ ತಾಲೂಕಿನಲ್ಲಿಯೂ ಹೊಯ್ಸಳ ಅರಸರು ಹಲವು ವೈಷ್ಣವ ದೇವಾಲಯಗಳನ್ನು ನಿರ್ಮಿಸಿ ದಾನ ದತ್ತಿಗಳನ್ನು ನೀಡಿದರು. ಈ ದೇವಾಲಯಗಳು ತಮ್ಮದೇ ಆದ ವಿಶಿಷ್ಟ ವಾಸ್ತು ಲಕ್ಷಣಗಳನ್ನು, ಶಿಲ್ಪ ಪರಂಪರೆಯನ್ನು ಹೊಂದಿದ್ದು, ಇವುಗಳ ಬಗ್ಗೆ ತಾಲೂಕಿನಾದ್ಯಂತ ಕ್ಷೇತ್ರಕಾರ್ಯ ನಡೆಸಿ, ತೆಗೆದುಕೊಂಡ ಛಾಯಾಚಿತ್ರಗಳನ್ನು ಬಳಸಿಕೊಂಡು, ಕಲೆ ಮತ್ತು ವಾಸ್ತುಶಿಲ್ಪದ ಗ್ರಂಥಗಳನ್ನು ಅಭ್ಯಸಿಸಿ ಇವುಗಳಂದ ಪಡೆದ ಮಾಹಿತಿಯನ್ನು ಸಂಯೋಜಿಸಿ ಹಾಸನ ತಾಲೂಕಿನ ಹೊಯ್ಸಳರ ಕಾಲದ ವೈಷ್ಣವ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ವಿವರಿಸಿದ್ದೇನೆ.

**ದೊಡ್ಡಗದ್ದವಳ್ಳಿ**

ಈ ಗ್ರಾಮವು ಹಾಸನ ನಗರದಿಂದ ಪಶ್ಚಿಮಕ್ಕೆ 18 ಕಿ.ಮೀ. ಅಂತರದಲ್ಲಿ ಕಂಡುಬರುತ್ತದೆ. ಇದನ್ನು ಪ್ರಾರಂಭದಲ್ಲಿ ಗದ್ದುಂಬಳ್ಳಿ, ಗದುವಳ್ಳಿ ಎಂಬ ಹೆಸರಿನಿಂದ

ಕರೆಯುತ್ತಿದ್ದು, ನಂತರ ದೊಡ್ಡಗದ್ದವಳ್ಳಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಈ ಗ್ರಾಮದಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಲಕ್ಷ್ಮಿದೇವಿ ದೇವಾಲಯ ಮತ್ತು 20 ಶಾಸನಗಳು ಕಂಡುಬರುತ್ತವೆ. ಈ 20 ಶಾಸನಗಳೂ ಇದೇ ದೇವಾಲಯದ ಪ್ರಾಕಾರದೊಳಗೆ ಅಂದರೆ ದೇವಾಲಯದ ಭಿತ್ತಿಯಲ್ಲಿ, ಬಾಗಿಲು ಮತ್ತು ಮಂಟಪಗಳ ತೊಲೆಗಳ ಮೇಲೆ ಹಾಗೂ ಪ್ರಾಕಾರದ ವಿವಿಧ ಮೂಲೆಗಳಲ್ಲಿ ನಿಲ್ಲಿಸಿರುವ ಕಲ್ಲುಗಳು ಮತ್ತು ವೀರಗಲ್ಲುಗಳ ಮೇಲೆ ಕಂಡುಬರುವುದು ವಿಶೇಷ. ಈ ಶಾಸನಗಳು ವಿವಿಧ ಕಾಲಘಟ್ಟಗಳಲ್ಲಿ ಈ ದೇವಾಲಯ ನಿರ್ಮಾಣ ಮತ್ತು ಇದರ ವಿವಿಧ ಕಾರ್ಯಗಳಿಗೆ ದಾನ ನೀಡಿದ ಅಂಶಗಳನ್ನು ಉಲ್ಲೇಖಿಸುತ್ತದೆ.[95]

**ಲಕ್ಷ್ಮೀದೇವಿ ದೇವಾಲಯ**

ಈ ದೇವಾಲಯವು ಗ್ರಾಮದ ಪೂರ್ವ ದಿಕ್ಕಿನ ಕೆರೆಯ ಪಕ್ಕದಲ್ಲಿ ಪಶ್ಚಿಮಾಭಿಮುಖವಾಗಿ ಕಂಡುಬರುತ್ತದೆ. ಹೊಯ್ಸಳರ ಕಲೆ ಮತ್ತು ವಾಸ್ತುಶಿಲ್ಪದಲ್ಲಿಯೇ ಒಂದು ಅದ್ವಿತೀಯ ಸ್ಥಾನವನ್ನು ಪಡೆದುಕೊಂಡಿರುವ ಈ ದೇವಾಲಯವು ಚತುಷ್ಕೂಟ ಮಾದರಿಯದ್ದಾಗಿದೆ. (ಚಿ.ಸಂ. 121) ಅಂದರೆ ಈ ದೇವಾಲಯದಲ್ಲಿ ಒಟ್ಟು ನಾಲ್ಕು ಗರ್ಭಗುಡಿಗಳು ಕಂಡುಬರುತ್ತವೆ. ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ವಜ್ರದ ವ್ಯಾಪಾರಿ ಕುಲ್ಲಣ ರಾಹುತ ಮತ್ತು ಈತನ ಪತ್ನಿ ಸಹಜಾದೇವಿಯು ಅಭಿನವ ಕೊಲ್ಲಾಪುರವನ್ನು (ಇಂದಿನ ದೊಡ್ಡಗದ್ದವಳ್ಳಿ) ನಿರ್ಮಿಸಿ ಮಹಾಲಕ್ಷ್ಮೀದೇವಿ ದೇವಾಲಯವನ್ನು ನಿರ್ಮಿಸಿದರೆಂದು ತಿಳಿದುಬರುತ್ತದೆ.[96,97] ಈ ದೇವಾಲಯವು ವಿಶಾಲವಾದ ಪ್ರಾಕಾರದೊಳಗೆ ಕಂಡುಬಂದಿದ್ದು, (ಚಿ.ಸಂ. 122) ನಾಲ್ಕು ಗರ್ಭಗುಡಿಗಳು, ನಾಲ್ಕು ಸುಕನಾಸಿ, ಈ ನಾಲ್ಕು ಸುಕನಾಸಿಗಳನ್ನು ಸೇರಿಸುವ ನವರಂಗ, ದೇವಾಲಯವನ್ನು ಪ್ರವೇಶಿಸಲು ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ದ್ವಾರಗಳು, ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ಭೈರವಗುಡಿ, ಪ್ರಾಕಾರದ ನಾಲ್ಕು ಮೂಲೆಗಳಲ್ಲಿ ನಾಲ್ಕು ಚಿಕ್ಕ ಗುಡಿಗಳು ಮತ್ತು ಪ್ರಾಕಾರದ ಪಶ್ಚಿಮ ದಿಕ್ಕಿನಲ್ಲಿ ದ್ವಾರಮಂಟಪದ ಭಾಗಗಳನ್ನು ಒಳಗೊಂಡಿದೆ. ಈ ದೇವಾಲಯವು ವಾಸ್ತುವಿನ ಪ್ರಕಾರಗಳಾದ ವಿಮಾನ, ಸರ್ವತೋಭದ್ರ, ವೃಷ್ಣಭ, ನಳಿನೀಕ, ಉತ್ತುಂಗ, ವೈರಾಜ, ಗರುಡ, ವರ್ಧಮಾನ, ಶಂಖ, ವೃತ್ತ, ಪುಷ್ಪಕ ಹಾಗೂ ಗೃಹರಾಜ ಎಂಬ ಅಂಶಗಳನ್ನು ಒಳಗೊಂಡು ನಿರ್ಮಾಣವಾಗಿದ್ದು, ಮಲ್ಲೋಜ ಮತ್ತು ಮಾಣಿಯೋಜರು ಈ ದೇವಾಲಯದ ಕರ್ತೃಗಳು ಎಂಬುದು ಇಲ್ಲಿನ ಶಾಸನದಿಂದ ತಿಳಿದುಬರುತ್ತದೆ.[98]

**ಕಾಳ ಗರ್ಭಗೃಹ:** ಈ ಗರ್ಭಗುಡಿಯು ದೇವಾಲಯದ ಉತ್ತರ ದಿಕ್ಕಿನಲ್ಲಿ ದಕ್ಷಿಣಾಭಿಮುಖವಾಗಿ ಚೌಕಾಕಾರದಲ್ಲಿ ಕಂಡುಬರುತ್ತದೆ. ಇದರ ಮಧ್ಯಭಾಗದಲ್ಲಿ ಬೇತಾಳ ಶಿಲ್ಪವನ್ನು ಹೊಂದಿರುವ ಎರಡು ಅಡಿ ಪೀಠದ ಮೇಲೆ ಮೂರು ಅಡಿ ಎತ್ತರದ ಅಷ್ಟಭುಜಧಾರಿಯಾದ ಕಾಳ ಶಿಲ್ಪವಿದೆ. (ಚಿ.ಸಂ. 123) ಇದರಲ್ಲಿ ಕಾಳಿಯು ಶತ್ರುವಿನ ಮೇಲೆ ಸುಖಾಸನದಲ್ಲಿ ಕುಳಿತಿದ್ದು, ಬಲಪಾರ್ಶ್ವದಲ್ಲಿ ಕೈಗಳಲ್ಲಿ ಬಾಣ, ಕತ್ತಿ, ತ್ರಿಶೂಲ ಮತ್ತು ಪರಶನ್ನು ಹಾಗೂ ಎಡಭಾಗದ ಕೈಗಳಲ್ಲಿ ಢಮರು, ಪಾಶ, ಬಿಲ್ಲು ಮತ್ತು ಬಟ್ಟಲನ್ನು ಹಿಡಿದಿದ್ದಾಳೆ.[99] ಸರ್ವಾಭರಣಗಳಿಂದಲೂ ಭೂಷಿತವಾಗಿರುವ ಕಾಳ ಶಿಲ್ಪವು ಜಟಾಮುಕುಟವನ್ನು ಹೊಂದಿದ್ದು, ಇದರ ಪ್ರಭಾವಳಿಯಲ್ಲಿ ಕತ್ತಿಯನ್ನು ಹಿಡಿದು ಕುಳಿತಿರುವ 9 ಪ್ರೇತ ಅಥವಾ ಬೇತಾಳಗಳ ಶಿಲ್ಪಗಳನ್ನು ಕೆತ್ತಲಾಗಿದೆ.[100] ಗರ್ಭಗೃಹದ ಭುವನೇಶ್ವರಿಯು ಸರಳ ಪದ್ಮದ ರಚನೆಯನ್ನು ಹೊಂದಿದ್ದರೆ, ಇದರ ಬಾಗಿಲುವಾಡವು ವಜ್ರ, ವಲ್ಲೀ, ಸ್ತಂಭ ಇನ್ನಿತರ ಅಲಂಕರಣಗಳನ್ನು ಹೊಂದಿರುವ ಪಂಚ ಶಾಖೆಗಳಿಂದ ಕೂಡಿದೆ. ಈ ದ್ವಾರದ ಲಲಾಟ ಬಿಂಬದಲ್ಲಿ ಕೋರೆಹಲ್ಲುಗಳನ್ನು ಹೊಂದಿರುವ ಮುಖಭಾವದ ಶಿಲ್ಪವನ್ನು (ಕಾಳಿಮುಖ) ಕೆತ್ತಲಾಗಿದ್ದು, ಇದರ ಎರಡು ಪಾರ್ಶ್ವದಲ್ಲಿ ಇದೇ ರೀತಿಯ ಎರಡೆರಡು ಚಿಕ್ಕ ಶಿಲ್ಪಗಳಿವೆ. (ಚಿ.ಸಂ. 124) ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಾರಪಾಲಕರಾಗಿ ತ್ರಿಭಂಗಿಯಲ್ಲಿ ನಿಂತಿರುವ ಎರಡು ನಗ್ನ ಸ್ತ್ರೀ ಶಿಲ್ಪಗಳನ್ನು (ನಾಗಕನ್ಯೆ-ವಿಷಕನ್ಯೆ) ಕೆತ್ತಿದ್ದಾರೆ.

**ಸುಕನಾಸಿ:** ಕಾಳ ಗರ್ಭಗುಡಿಯು ತೆರೆದ ಸುಕನಾಸಿಯನ್ನು ಹೊಂದಿದ್ದು, ಇದರ ಪಾರ್ಶ್ವದಲ್ಲಿ ಎರಡು ಬೇತಾಳಗಳನ್ನು ನಿರ್ಮಿಸಲಾಗಿದೆ. ಈ ಬೇತಾಳಗಳು ಆರೂವರೆ ಅಡಿ ಎತ್ತರವನ್ನು, ಅಗಲವಾದ ಕಣ್ಣುಗಳು, ದೊಡ್ಡದಾದ ಕಿಯೋಲೆಗಳನ್ನು ಮತ್ತು ಉದ್ದವಾದ ಕೂದಲನ್ನು ಹೊಂದಿದ್ದು, ನಾಲಗೆಯನ್ನು ಉದ್ದವಾಗಿ ಹೊರಕ್ಕೆ ಚಾಚಿ ಅಸ್ತಿಪಂಜರದ ರೀತಿಯಲ್ಲಿ ನಗ್ನವಾಗಿ ಕಂಡುಬರುತ್ತವೆ. (ಚಿ.ಸಂ. 125) ಬಲಭಾಗದ ಬೇತಾಳದ ಎರಡು ಕೈಗಳು ಭಗ್ನವಾಗಿದ್ದು, ಇದರ ಎರಡೂ ಪಾರ್ಶ್ವದಲ್ಲಿ ಸಣ್ಣ ಬೇತಾಳಗಳಿವೆ. ಎಡಭಾಗದ ಬೇತಾಳವು ಬಲಗೈಯಲ್ಲಿ ಕತ್ತಿಯನ್ನು, ಎಡಗೈಯಲ್ಲಿ ಕತ್ತರಿಸಿದ ರುಂಡವನ್ನು ಹಿಡಿದು ಉದ್ದವಾಗಿ ನಾಲಗೆಯನ್ನು ಹೊರ ಚಾಚಿದೆ.[101] ಸುಕನಾಸಿಯು ಭುವನೇಶ್ವರಿಯನ್ನು ಹೊಂದಿದ್ದು, ಇದರಲ್ಲಿ ಮಂಡಿಯೂರಿ ಕುಳಿತು ಬಲಗೈಯಲ್ಲಿ ಕತ್ತಿಯನ್ನು, ಎಡಗೈಯಲ್ಲಿ ಬಟ್ಟಲನ್ನು ಹಿಡಿದಿರುವ ಬೇತಾಳದ ಶಿಲ್ಪವಿದೆ. ಕಾಳಗುಡಿಯ ಸುಕನಾಸಿಯ ಮುಂದಿನ ನವರಂಗದ ಭುವನೇಶ್ವರಿಯಲ್ಲಿ ವೀಣೆಯನ್ನು ನುಡಿಸುತ್ತಾ ನರ್ತನ ರೂಪದಲ್ಲಿರುವ ಪುರುಷ ಶಿಲ್ಪವಿದೆ. (ಚಿ.ಸಂ. 126) ಇದರ ಸುತ್ತಲೂ ಆಕರ್ಷಕವಾದ ಕುಸುರಿ ಕೆತ್ತನೆಯೂ ಸಹ ಕಂಡುಬರುತ್ತದೆ.

**ಲಕ್ಷ್ಮೀದೇವಿಯ ಗರ್ಭಗುಡಿ:** ಈ ಗುಡಿಯು 7X7 ವಿಸ್ತೀರ್ಣವನ್ನು ಹೊಂದಿದ್ದು, ಪೂರ್ವ ದಿಕ್ಕಿನಲ್ಲಿ ಪಶ್ಚಿಮಾಭಿಮುಖವಾಗಿ ಕಂಡುಬರುತ್ತದೆ. ಇದರ ಮಧ್ಯಭಾಗದಲ್ಲಿ $1^{1/}{}_{2}$ ಅಡಿ ಎತ್ತರದ ಪುಷ್ಪಪೀಠದ ಮೇಲೆ $3^{1/}{}_{2}$ ಅಡಿ ಎತ್ತರದ ಅತ್ಯಂತ ಸುಂದರವಾದ ಲಕ್ಷ್ಮೀದೇವಿಯ ವಿಗ್ರವಿದೆ. (ಚಿ.ಸಂ. 127) ಈ ಶಿಲ್ಪವು ಕಂಠೀಹಾರ, ಹಾರ, ಕೇಯೂರ, ಕಂಕಣ, ಕಟಿಸೂತ್ರ, ಪಾದರಸ, ವನಮಾಲೆ, ಮಕರಕುಂಡಲ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದು, ಎಡ ಹಿಂಭಾಗದ ಕೈಯಲ್ಲಿ ಚಕ್ರವನ್ನು, ಮುಂಭಾಗದ ಕೈಯಲ್ಲಿ ಗದೆಯನ್ನು, ಬಲ ಹಿಂಭಾಗದ ಕೈಯಲ್ಲಿ ಶಂಖವನ್ನು ಮತ್ತು ಮುಂಭಾಗದ ಕೈಯಲ್ಲಿ ಅಕ್ಷಮಾಲೆಯನ್ನು ಹಿಡಿದು ಅಭಯಹಸ್ತವನ್ನು ಹೊಂದಿ ಸಮಭಂಗಿಯಲ್ಲಿದೆ.[102] ಈ ವಿಗ್ರಹಕ್ಕೆ ಇತ್ತೀಚಿನ ಕಾಲದ ಲೋಹದ ಪ್ರಭಾವಳಿಯನ್ನು ಅಳವಡಿಸಲಾಗಿದ್ದು, ಈ ಗರ್ಭಗೃಹದ ವಿತಾನವು ಸರಳ ಪದ್ಮದ ರಚನೆಯನ್ನು ಹೊಂದಿದೆ. ಇದರ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದ್ದು, (ಚಿ.ಸಂ. 128) ಲಲಾಟದಲ್ಲಿ ನಟರಾಜನ ಶಿಲ್ಪವನ್ನು ಕೆತ್ತಲಾಗಿದೆ. (ಚಿ.ಸಂ. 129) ಇದರ ಎರಡೂ ಪಾರ್ಶ್ವದಲ್ಲಿ ತಮ್ಮ ಮುಂದಿನ ಎರಡು ಕಾಲುಗಳನ್ನು ಎತ್ತಿನಿಂತಿರುವ ಸಿಂಹಗಳ ಎರಡೆರಡು ಶಿಲ್ಪಗಳನ್ನು ಕೆತ್ತಲಾಗಿದ್ದು, ಈ ಪಟ್ಟಿಕೆಯ ಮೇಲ್ಭಾಗದಲ್ಲಿ ಚಿಕ್ಕ ಚಿಕ್ಕ ಶಿಖರದ ಮಾದರಿಗಳ ನಡುವೆ ನಾಸಿಯ ಅಲಂಕರಣೆ ಕಂಡುಬರುತ್ತದೆ. ಈ ಗರ್ಭಗೃಹದ ಲಲಾಟ ಬಿಂಬದಲ್ಲಿ ಮತ್ತು ಶಿಖರದ ಸುಖನಾಸ ಫಲಕದಲ್ಲಿ ಎರಡರಲ್ಲೂ ನಟರಾಜನ ಶಿಲ್ಪ ಕಂಡುಬಂದಿರುವುದರಿಂದ ಈ ಗುಡಿಯಲ್ಲಿ ಪ್ರಾರಂಭದ ಕಾಲದಲ್ಲಿ ಲಿಂಗ ಅಥವಾ ಶಿವನ ಯಾವುದಾದರೊಂದು ಶಿಲ್ಪವಿದ್ದಿರಬಹುದೆಂಬ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಏಕೆಂದರೆ ಲಕ್ಷ್ಮೀ ಅಥವಾ ವೈಷ್ಣವ ದೇವತೆಗಳ ಗರ್ಭಗುಡಿಯ ಲಲಾಟದಲ್ಲಿ ನಟರಾಜ ಅಥವಾ ಶಿವನ ಇತರ ರೂಪದ ಶಿಲ್ಪಗಳು ಕಂಡುಬರುವುದಿಲ್ಲ. ಆದ್ದರಿಂದ ಮೂಲದಲ್ಲಿ ಈ ಗರ್ಭಗುಡಿಯು ಶಿವನಿಗಾಗಿ ನಿರ್ಮಿಸಿದ್ದಿರಬಹುದು. ಈ ಗರ್ಭಗುಡಿಯ ಮುಂದಿನ ಸುಖನಾಸಿಯು ಸರಳವಾದ ನಾಭಿಚ್ಛಂಧ ವಿತಾನವನ್ನು ಹೊಂದಿದ್ದು, ಇದರ ಬಾಗಿಲುವಾಡವು ಯಾವುದೇ ಅಲಂಕರಣೆಗಳಿಲ್ಲದೇ ಸರಳವಾಗಿದೆ.

**ಭೈರವ ಗರ್ಭಗುಡಿ:** ಈ ಗುಡಿಯು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ದಕ್ಷಿಣ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ಕಂಡುಬರುತ್ತದೆ. ಇದರ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಗರುಡ ಪೀಠದ ಮೇಲೆ ಎರಡು ಅಡಿ ಎತ್ತರದ ಭೈರವ ಶಿಲ್ಪವಿದೆ. (ಚಿ.ಸಂ. 130) ಇದರಲ್ಲಿ ಭೈರವನು ಬಲಗೈಯಲ್ಲಿ ತ್ರಿಶೂಲವನ್ನು, ಎಡಗೈಯಲ್ಲಿ ರುಂಡವನ್ನು ಹಿಡಿದಿದ್ದು, ಇದನ್ನು ಒಂದು ನಾಯಿಯು ನೆಕ್ಕುತ್ತಿರುವಂತೆ ಶಿಲ್ಪವನ್ನು ಕೆತ್ತಲಾಗಿದೆ. ಈ ಭೈರವ ಶಿಲ್ಪವು ದ್ವಿಭಂಗಿಯಲ್ಲಿದ್ದು ಈ ವಿಗ್ರಹಕ್ಕೂ ಮತ್ತು ಪೀಠಕ್ಕೂ ಸಂಬಂಧವೇ ಇಲ್ಲದಂತಿದೆ. ಏಕೆಂದರೆ ಈ ಪೀಠದ ಮೇಲೆ ಗರುಡ

ಶಿಲ್ಪವಿದ್ದು, ಇದು ವೈಷ್ಣವ ದೇವತೆಗಳಿಗೆ ಸಲ್ಲತಕ್ಕುದಾದ ಪೀಠ. ಆದರೆ ಇದರ ಮೇಲೆ ಭೈರವ ಶಿಲ್ಪವಿರುವುದರಿಂದ ಬಹುಶಃ ಕಾಲಾನಂತರದಲ್ಲಿ ಈ ಶಿಲ್ಪವನ್ನು ಇಟ್ಟಿರಬಹುದು. ಈ ಗರ್ಭಗೃಹದ ಬಾಗಿಲುವಾಡವು ಪಂಚಶಾಖಾ ಮಾದರಿಯಾಗಿದ್ದು, ದ್ವಾರದ ಲಲಾಟ ಬಿಂಬದಲ್ಲಿ ಶಂಖ ಚಕ್ರವನ್ನು ಹಿಡಿದಿರುವ ಯೋಗಾನರಸಿಂಹ ಶಿಲ್ಪವಿದೆ. (ಚಿ.ಸಂ. 131) ದ್ವಾರಬಂಧದ ಮೇಲ್ಭಾಗದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು, ಇದರ ಎರಡೂ ಪಾರ್ಶ್ವದಲ್ಲಿ ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಿದ್ದಾರೆ. ಈ ಗುಡಿಯ ಲಲಾಟಬಿಂಬದಲ್ಲಿ ಯೋಗಾನರಸಿಂಹನ ಶಿಲ್ಪ ಮತ್ತು ಪೀಠದ ಮೇಲೆ ಗರುಡಶಿಲ್ಪ ಕಂಡುಬಂದಿರುವುದರಿಂದ ಖಚಿತವಾಗಿ ಇದು ವಿಷ್ಣು ಅಥವಾ ಈತನ ಪರಂಪರೆಗೆ ಸೇರಿದ ದೇವತೆ ಈ ಗರ್ಭಗುಡಿಯಲ್ಲಿ ಇದ್ದಿರಬಹುದೆಂದು ಹೇಳಬಹುದಾಗಿದೆ.[103] ಈ ಗುಡಿಯು ತೆರೆದ ಸುಕನಾಸಿಯನ್ನು ಹೊಂದಿದ್ದು, ಇದರ ಭುವನೇಶ್ವರಿಯು ಸರಳವಾದ ಪದ್ಮ ರಚನೆ ಇರುವ ನಾಭಿಚ್ಛಂಧ ಮಾದರಿಯದ್ದಾಗಿದೆ.

**ಪಶ್ಚಿಮ ದಿಕ್ಕಿನ ಲಿಂಗವಿರುವ ಗರ್ಭಗೃಹ:** ಚೌಕಾಕಾರವಾಗಿರುವ ಈ ಗರ್ಭಗೃಹವು 7X7 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಪೂರ್ವಾಭಿಮುಖವಾಗಿ ಕಂಡುಬರುತ್ತವೆ. ಇದರ ಮಧ್ಯ ಭಾಗದಲ್ಲಿ ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಲಿಂಗವಿದ್ದು, ಇದರ ಮುಖ ಭಾಗದಲ್ಲಿ ಬ್ರಹ್ಮಸೂತ್ರ ರೇಖೆಗಳಿವೆ. ಈ ಲಿಂಗವನ್ನು ಶಾಸನಗಳಲ್ಲಿ ಭೂತನಾಥ ದೇವರು ಎಂದು ಉಲ್ಲೇಖಿಸಲಾಗಿದೆ.[104] ಈ ಗರ್ಭಗುಡಿಯು ಪಂಚಶಾಖಾ ದ್ವಾರಬಂಧವನ್ನು ಹೊಂದಿದ್ದು, ಇದರ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಇದರ ಎರಡೂ ಪಾರ್ಶ್ವದಲ್ಲಿ ಇಳಿಬಿಟ್ಟಂತೆ ಗುಬುಟುಗಳನ್ನು ಸಹ ರಚಿಸಿದ್ದಾರೆ. (ಚಿ.ಸಂ. 132) ಗರ್ಭಗುಡಿಯ ಮುಂದೆ ಸುಕನಾಸಿ ಭಾಗವಿದ್ದು, ಇದರ ಮಧ್ಯಭಾಗದಲ್ಲಿ ಒಂದು ಅಡಿ ಪೀಠದ ಮೇಲೆ ಲಿಂಗಕ್ಕೆ ಅಭಿಮುಖವಾಗಿ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಪೀಠದ ಬಲ ಪಾರ್ಶ್ವದಲ್ಲಿ ಒಬ್ಬ ವ್ಯಕ್ತಿಯು ಕೈ ಮುಗಿದು ಕುಳಿತಿರುವುದನ್ನು ನಾವು ಗಮನಿಸಬಹುದಾಗಿದೆ.

**ನವರಂಗ:** ಈ ದೇವಾಲಯವು ನಾಲ್ಕು ಗರ್ಭಗುಡಿಗಳ ಮುಂದಿನ ಸುಕನಾಸಿಗಳಿಗೆ ಹೊಂದಿಕೊಂಡಂತೆ ನವರಂಗವನ್ನು ಹೊಂದಿದೆ. (ಚಿ.ಸಂ. 133) ಆದರೆ ನವರಂಗವು ಲಕ್ಷ್ಮೀದೇವಿ, ಭೈರವ ಮತ್ತು ಭೂತನಾಥ ಗುಡಿಗಳ ಸುಕನಾಸಿಗಳನ್ನು ಸಂಧಿಸುವಂತೆ ಕಾಳಿಗುಡಿಯ ಸುಖನಾಸಿಯನ್ನು ಸಂಧಿಸುವುದಿಲ್ಲ. ಏಕೆಂದರೆ ಕಾಳಿಗುಡಿಯ ಸುಖನಾಸಿಯ ಮುಂದಿನ ಅಂಕಣದ ಎರಡೂ ಪಾರ್ಶ್ವದಲ್ಲಿ ದ್ವಾರಗಳು ಕಂಡುಬಂದಿರುವುದರಿಂದ ಇದು ಪ್ರತ್ಯೇಕ ಭಾಗವೆಂದು ಗೋಚರಿಸುತ್ತದೆ. ಆದರೆ ವಾಸ್ತವವಾಗಿ ಈ ನವರಂಗವನ್ನು ಈ ನಾಲ್ಕು

ಗುಡಿಗಳ ಸುಕನಾಸಿಗಳಿಗೆ ಸಂಬಂಧಿಸಿದಂತೆ ನಿರ್ಮಿಸಲಾಗಿದೆ. ನವರಂಗವು ಲೇತ್ ಯಂತ್ರದ ಸಹಾಯದಿಂದ ನಿರ್ಮಿಸಿರುವಂತಹ 10 ಶ್ರೀಕಾರ ಸ್ತಂಭಗಳಿಂದ ಕೂಡಿದೆ.[105]

ಈ ಸ್ತಂಭಗಳು ಚತುರಶ್ರಪೀಠ, ನಂತರ ಚತುರಶ್ರದಿಂಡು, ವೃತ್ತಾಕಾರದ ಬಳೆಗಳು ಮತ್ತು ಘಂಟಾಕಾರವನ್ನು ಹೊಂದಿರುವ ಶಲಾಕ, ಕಂಠ, ಮಂಡಿ, ಫಲಕ ಮತ್ತು ಆಧಾರ ಬೋದಿಗೆಯನ್ನು ಹೊಂದಿವೆ. ನವರಂಗವು 9 ಭುವನೇಶ್ವರಿಗಳನ್ನು ಹೊಂದಿದ್ದು, ಇವುಗಳ ಚತುರಸ್ರವಾದ ಶಿಲಾಫಲಕದ ಮೇಲೆ ದಿಕ್ಕಿಗನುಸಾರವಾಗಿ ಆಕರ್ಷಕವಾದ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಮತ್ತು ಇವುಗಳ ನಡುವೆ ಸುಂದರವಾದ ತಾಂಡವೇಶ್ವರನ ಶಿಲ್ಪವನ್ನು ಕೆತ್ತಲಾಗಿದೆ.[106] ನವರಂಗದ ನೈರುತ್ಯ ದಿಕ್ಕಿನಲ್ಲಿ ಕೆಲವು ಭಗ್ನ ಶಿಲ್ಪಗಳು ಕಂಡುಬಂದಿದ್ದು, ಇವುಗಳ ಪಕ್ಕದಲ್ಲಿ ಭಿತ್ತಿಗೆ ಜಾಲಾಂಧ್ರವಿದೆ. ನವರಂಗವನ್ನು ಪ್ರವೇಶಿಸಲು ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ಎರಡು ದ್ವಾರಗಳಿವೆ. ನವರಂಗದ ಪಶ್ಚಿಮ ದಿಕ್ಕಿನ ದ್ವಾರಬಂಧವು ಆತ್ಯಾಕರ್ಷಕವಾಗಿದ್ದು, ವಜ್ರ, ವಲ್ಲೀ, ಸ್ತಂಭ ಹಾಗೂ ಮತ್ತೊಂದು ಅಲಂಕಾರಿಕ ಕೆತ್ತನೆಯನ್ನು ಒಳಗೊಂಡಂತೆ ಚತುಶಾಖೆಗಳನ್ನು ಒಳಗೊಂಡಿದೆ. ದ್ವಾರದ ಲಲಾಟ ಬಿಂಬದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಆದರೆ ಲಲಾಟಬಿಂಬದ ಎರಡೂ ಪಾರ್ಶ್ವದಲ್ಲಿ ತಮ್ಮ ಒಂದೊಂದು ಕಾಲುಗಳನ್ನು ಎತ್ತಿ ಒಂದಕ್ಕೊಂದು ಅಭಿಮುಖವಾಗಿ ನಿಂತಿರುವ ಎರಡೆರಡು ಜೋಡಿ ಸಿಂಹಗಳ ಶಿಲ್ಪಗಳನ್ನು ಸುಂದರವಾಗಿ ಕೆತ್ತಲಾಗಿದೆ. (ಚಿ.ಸಂ. 134) ಈ ದ್ವಾರಬಂಧದ ಮೇಲ್ಭಾಗದಲ್ಲಿ ಒಂದು ನಾಸಿ ಮತ್ತು ಇದರ ಎರಡೂ ಪಾರ್ಶ್ವದಲ್ಲಿ ಎರಡೆರಡು ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಿದ್ದಾರೆ. ದ್ವಾರದ ಎರಡು ಪಾರ್ಶ್ವದಲ್ಲಿ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರ ಶಿಲ್ಪಗಳನ್ನು ಬಹಳ ಮನಮೋಹಕವಾಗಿ ನಿರ್ಮಿಸಲಾಗಿದ್ದು, ಈ ದ್ವಾರಪಾಲಕರ ಶಿಲ್ಪಗಳು ಪೀಠವೂ ಸೇರಿದಂತೆ 6 ಅಡಿ ಎತ್ತರವನ್ನು ಹೊಂದಿವೆ. ದ್ವಾರಪಾಲಕರು ಶಂಖ. ಚಕ್ರ, ಕೇಯೂರ, ಕಂಕಣ, ಪಾದಸರ, ಯಜ್ಞೋಪವೀತ, ವನಮಾಲೆ, ರತ್ನಾಂಗುಲೀಯಕಗಳು, ಪತ್ರಕುಂಡಲ ಮತ್ತು ಕೀರಿಟ ಮುಕುಟವನ್ನು ಧರಿಸಿದ್ದಾರೆ. ಈ ಶಿಲ್ಪಗಳನ್ನು ಒಂದೂವರೆ ಅಡಿ ಎತ್ತರವಿರುವ ಪೀಠದ ಮೇಲೆ ನಿಲ್ಲಿಸಲಾಗಿದ್ದು, ಈ ಪೀಠದಲ್ಲಿ ಮೂರು ಸಿಂಹಗಳ ಶಿಲ್ಪಗಳನ್ನು ಕೆತ್ತಿರುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ಈ ದೇವಾಲಯದ ದ್ವಾರಭಾಗದಲ್ಲಿರುವ ದ್ವಾರಪಾಲಕರ ಶಿಲ್ಪಗಳೂ ಸಹ ಅತ್ಯಂತ ಆಕರ್ಷಣೀಯ ಭಾಗವೆಂದೇ ಅಭಿಪ್ರಾಯಿಸಬಹುದು. ನವರಂಗದ ಪೂರ್ವ ಮತ್ತು ಪಶ್ಚಿಮ ದಿಕ್ಕಿನ ದ್ವಾರದ ಮುಂಭಾಗದಲ್ಲಿ ಹಸ್ತ-ಹಸ್ತಿ ಸೋಪಾನಗಳು ಕಂಡುಬರುತ್ತವೆ. ಪಶ್ಚಿಮ ದಿಕ್ಕಿನ ದ್ವಾರಬಂಧವು ಅಲಂಕರಣೆಗಳನ್ನು ಮತ್ತು ಎರಡೂ ಪಾರ್ಶ್ವದಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಹೊಂದಿದ್ದರೆ, ಪೂರ್ವ ದಿಕ್ಕಿನ ದ್ವಾರಬಂಧವು

ಯಾವುದೇ ಅಲಂಕರಣೆಗಳಿಲ್ಲದೇ ಸರಳವಾಗಿದೆ. ಹಾಗೂ ಈ ದ್ವಾರದಲ್ಲಿ ದ್ವಾರಪಾಲಕರ ಶಿಲ್ಪಗಳು ಕಂಡುಬರುವುದಿಲ್ಲ. ಆದರೆ ದ್ವಾರಬಂಧದ ಮೇಲ್ಭಾಗದಲ್ಲಿ ಪದ್ಮಾಸನದಲ್ಲಿ ಕುಳಿತ ಕಾಳಿ ಶಿಲ್ಪವು ಕಂಡುಬರುತ್ತದೆ. ಇದರ ಎರಡೂ ಪಾರ್ಶ್ವದಲ್ಲಿ ಚಿಕ್ಕ ಚಿಕ್ಕ ಸ್ತಂಭ ಪಂಜರಗಳ ನಿರ್ಮಾಣವಿದೆ.

**ಅಧಿಷ್ಠಾನ:** ಈ ದೇವಾಲಯವು ನಾಲ್ಕು ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದ್ದು, ಇದರಲ್ಲಿ ಯಾವುದೇ ಅಲಂಕಾರಿಕ ಪಟ್ಟಿಕೆಗಳು ಕಂಡು ಬರದೇ ಸರಳವಾಗಿದೆ. ಇದರಲ್ಲಿ ಉಪಾನ, ಜಗತಿ, ಪದ್ಮ, ಚತುರಶ್ರಕುಮುದ, ಗಳ, ದಂತಪಂಕ್ತಿ, ಆಲಿಂಗ ಮತ್ತು ಪ್ರತೀ ಭಾಗಗಳು ಕಂಡುಬಂದಿದ್ದು, ಇದನ್ನು ಪ್ರತಿಬಂಧ ಮಾದರಿಯ ಅಧಿಷ್ಠಾನವೆಂದು ಕರೆಯಲಾಗಿದೆ.[107] ಈ ದೇವಾಲಯದ ಅಧಿಷ್ಠಾನ ಭಾಗದಲ್ಲಿ ಪ್ರತಿಯೊಂದು ಗರ್ಭಗುಡಿಗಳಿಗೂ ಸಿಂಹಮುಖ ಪ್ರನಾಳವನ್ನು ನಿರ್ಮಿಸಿರುವುದು ಕಂಡುಬರುತ್ತದೆ.

**ಭಿತ್ತಿ ಮತ್ತು ಪ್ರಸ್ತರ:** ದೇವಾಲಯದ ಭಿತ್ತಿಯು ಯಾವುದೇ ಶಿಲ್ಪಾಲಂಕರಣೆಗಳಿಂದ ಕೂಡಿರದೇ ಸ್ತಂಭ ಪಂಜರಗಳು ಮತ್ತು ಕೋಷ್ಠಪಂಜರಗಳಿಂದ ಸರಳವಾಗಿ ಅಲಂಕರಿಸಲ್ಪಟ್ಟಿದೆ.[108] ಕೋಷ್ಠಗಳ ಒಳಗೆ ಶಿಲ್ಪಗಳನ್ನು ನಿರ್ಮಿಸುವುದರ ಬದಲು ಈ ದೇವಾಲಯದಲ್ಲಿ ಶಾಸನಗಳನ್ನು ಕೆತ್ತಿರುವುದನ್ನು ನಾವು ಗಮನಿಸಬಹುದಾಗಿದೆ.[109] ಕೋಷ್ಠಗಳ ಮೇಲ್ಭಾಗದಲ್ಲಿ ವಿವಿಧ ಶಿಖರದ ಮಾದರಿಗಳನ್ನು ಮತ್ತು ಅರೆಗಂಬಗಳ ಮೇಲ್ಭಾಗದಲ್ಲಿ ಕೀರ್ತಿಮುಖಗಳನ್ನು ನಿರ್ಮಿಸಲಾಗಿದ್ದು, ಭಿತ್ತಿಯಲ್ಲಿ ಬ್ರಹ್ಮಕಾಂತ ಭಿತ್ತಿಪಾದಗಳ ಅಲಂಕರಣೆಯೂ ಕಂಡುಬರುತ್ತದೆ. (ಚಿ.ಸಂ. 135) ಕಾಳೀ ಗರ್ಭಗೃಹದ ಪೂರ್ವ ದಿಕ್ಕಿನ ಹೊರಭಿತ್ತಿಯ ಕೋಷ್ಠದಲ್ಲಿ ವೀರಾಸನದಲ್ಲಿ ಕುಳಿತಿರುವ ಕಾಳಿ ಶಿಲ್ಪ ಕಂಡುಬರುತ್ತದೆ.[110] ಈ ಶಿಲ್ಪದಲ್ಲಿ ಕಾಳಿಯು ಬಲ ಹಿಂಬದಿಯ ಕೈಯಲ್ಲಿ ತ್ರಿಶೂಲ, ಮುಂಭಾಗದ ಕೈಯಲ್ಲಿ ಕತ್ತಿ, ಎಡ ಹಿಂಬದಿಯ ಕೈಯಲ್ಲಿ ಢಮರು ಮತ್ತು ಮುಂಭಾಗದ ಕೈಯಲ್ಲಿ ಬಟ್ಟಲನ್ನು ಹಿಡಿದಿದ್ದಾಳೆ. ಸರ್ವಾಭರಣಗಳನ್ನು ಧರಿಸಿರುವ ಕಾಳಿಯು ಜಟಾಮುಕುಟವನ್ನು ಹೊಂದಿದ್ದು, ಈಕೆಯ ಬಲಭಾಗದ ಕಾಲಿನ ಪಾರ್ಶ್ವದಲ್ಲಿ ಕತ್ತರಿಸಿದ ರುಂಡವು ಮತ್ತು ಎಡಭಾಗದಲ್ಲಿ ನಾಯಿಯ ಶಿಲ್ಪವು ಕಂಡುಬರುತ್ತದೆ. (ಚಿ.ಸಂ. 136) ಈ ಕಾಳಿ ಶಿಲ್ಪವನ್ನು ಬಿಟ್ಟರೆ ದೇವಾಲಯದ ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಭಿತ್ತಿಯ ನಂತರ ಪ್ರಸ್ತರ ಭಾಗವಿದ್ದು, ಇದು ಉತ್ತರ, ವಲ್ಲಭಿ ಮತ್ತು ಕಪೋತ ಭಾಗಗಳನ್ನು ಒಳಗೊಂಡಿದೆ.

**ಶಿಖರ:** ಈ ದೇವಾಲಯದ ನಾಲ್ಕು ಗರ್ಭಗುಡಿಗಳ ಮೇಲೆ ಆಕರ್ಷಕವಾದ ಶಿಖರಗಳನ್ನು ನಿರ್ಮಿಸಲಾಗಿದೆ. ಈ ಶಿಖರಗಳಲ್ಲಿ ಕಾಳ ಗರ್ಭಗುಡಿಯ ಶಿಖರ, ಭೈರವ ಗುಡಿಯ ಶಿಖರ ಮತ್ತು ಭೂತನಾಥ ಲಿಂಗವಿರುವ ಗರ್ಭಗುಡಿಯ ಶಿಖರಗಳು ಫಾಂಸಾನ ಶೈಲಿಯ ಶಿಖರವನ್ನು ಹೊಂದಿದ್ದರೆ, (ಚಿ.ಸಂ. 137) ಲಕ್ಷ್ಮೀದೇವಿ ಗರ್ಭಗೃಹದ ಶಿಖರವು ದ್ರಾವಿಡ ಶೈಲಿಯ ವಿಮಾನವನ್ನು ಹೊಂದಿದೆ.[111] ಕಾಳೀ ಗರ್ಭಗೃಹದ ಶಿಖರವು 8 ಹಂತಗಳನ್ನು ಹೊಂದಿದ್ದು, ಇದರ ಮೇಲ್ಭಾಗದಲ್ಲಿ ವೇದಿಕಾ ನಂತರ ಚತುರಶ್ರವಾದ ಅದೋಪದ್ಮ ಮತ್ತು ಸುಂದರವಾದ ಕಳಸ ಕಂಡುಬರುತ್ತದೆ. (ಚಿ.ಸಂ. 138) ಈ ಶಿಖರದ ನಾಸಿಗಳಲ್ಲಿ ಶ್ರೀಯಂತ್ರವನ್ನು ಇದರ ಮೇಲೆ ಕೀರ್ತಿಮುಖವನ್ನು ನಿರ್ಮಿಸಲಾಗಿದೆ. ಶಿಖರದ ಮುಂಭಾಗದಲ್ಲಿ ಸುಕನಾಸ ಭಾಗವಿದ್ದು ಇದರ ಮೇಲ್ಭಾಗದಲ್ಲಿ ಸಳನು ಹುಲಿಯನ್ನು ಕೊಲ್ಲುತ್ತಿರುವ ಸುಂದರವಾದ ಶಿಲ್ಪವನ್ನು ಕೆತ್ತಲಾಗಿದೆ.

ಲಕ್ಷ್ಮೀದೇವಿ ಗರ್ಭಗೃಹದ ಶಿಖರವು ಎರಡು ತಲಗಳನ್ನು ಹೊಂದಿದ್ದು, ಪಿರಮಿಡ್ಡಿನಾಕಾರದಲ್ಲಿರುವ ದ್ರಾವಿಡ ಶಿಖರವಾಗಿದೆ.[112] ಇದು ಕೂಟ, ಶಾಲಾ, ಪಂಜರ ಮತ್ತು ನಾಸಿಗಳನ್ನು ಹೊಂದಿದ್ದು, ಕೆಲವು ನಾಸಿಗಳಲ್ಲಿ ಯಕ್ಷ-ಯಕ್ಷಿಯರ ಶಿಲ್ಪಗಳನ್ನು ಕೆತ್ತಲಾಗಿದೆ. ಭದ್ರನಾಸಿಗಳಲ್ಲಿ ವೃತ್ತಾಕಾರದ ಮಂಡಲಗಳ ರೀತಿಯ ರಚನೆಯು ಕಂಡುಬಂದಿದ್ದು, ಇದರ ಮೇಲ್ಭಾಗದಲ್ಲಿ ಕೀರ್ತಿಮುಖಗಳ ಕೆತ್ತನೆಯಿದೆ. ಶಿಖರದ ಎರಡು ತಲಗಳ ನಂತರ ಬ್ರಹ್ಮಛಂಧ ಮಾದರಿಯ ಅದೋಪದ್ಮದ ರಚನೆಯಿದ್ದು, ಇದರ ಮೇಲೆ ಸುಂದರವಾದ ಕಳಸದ ನಿರ್ಮಾಣವಿದೆ. ಶಿಖರದ ಮುಂಭಾಗದಲ್ಲಿ ಸುಖನಾಸದ ಮೇಲೆ ಹೊಯ್ಸಳರ ರಾಜಲಾಂಛನವಾದ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪವನ್ನು ಕಂಡರಿಸಲಾಗಿದೆ. ಹಾಗೂ ಸುಖನಾಸದ ಫಲಕದಲ್ಲಿ ತಾಂಡವೇಶ್ವರನ ಶಿಲ್ಪವಿದೆ.

ಭೈರವ ಗುಡಿ ಮತ್ತು ಭೂತನಾಥ ಲಿಂಗವಿರುವ ಗರ್ಭಗುಡಿಗಳ ಶಿಖರಗಳು 9 ತಲಗಳನ್ನು (ಕಪೋತಗಳು) ಹೊಂದಿದ್ದು, ಇದರ ಮೇಲೆ ವೇದಿಕಾ ನಂತರ ಅದೋಪದ್ಮ ಮತ್ತು ಸ್ತೂಪಿಯನ್ನು ಹೊಂದಿದ್ದು, ಇವು ಫಾಂಸಾನ ಶೈಲಿಯ ಶಿಖರಗಳಾಗಿವೆ. ಶಿಖರದ ಮುಂದೆ ಸುಖನಾಸದ ಮೇಲ್ಭಾಗದಲ್ಲಿ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪಗಳಿವೆ.

**ಭೈರವ ದೇವಾಲಯ:** ಈ ಗುಡಿಯು ಲಕ್ಷ್ಮೀದೇವಿ ಗರ್ಭಗೃಹದ ಈಶಾನ್ಯ ದಿಕ್ಕಿನಲ್ಲಿ ಸ್ವತಂತ್ರವಾಗಿ ಕಂಡುಬರುತ್ತದೆ. ಇದು ಲಕ್ಷ್ಮಿದೇವಿ ದೇವಾಲಯದ ಯಾವುದೇ ಭಾಗಗಳಿಗೆ ಸಂಬಂಧಿಸದೇ ಒಂದು ಗರ್ಭಗುಡಿ, ಸುಕನಾಸಿ ಭಾಗವನ್ನು ಹೊಂದಿ ಪ್ರತ್ಯೇಕವಾಗಿ

ನಿಂತಿರುತ್ತದೆ. (ಚಿ.ಸಂ. 139) ಇದರ ಗರ್ಭಗೃಹದಲ್ಲಿ ಪೀಠದ ಮೇಲೆ ಭೈರವನ ಶಿಲ್ಪವಿದ್ದು, ಇದರ ಎಡಭಾಗದಲ್ಲಿ ನಾಯಿ ಶಿಲ್ಪವನ್ನು ಮತ್ತು ಬಲಭಾಗದಲ್ಲಿ ಬೇತಾಳಗಳ ಶಿಲ್ಪಗಳನ್ನು ಕೆತ್ತಲಾಗಿದ್ದು, ಭೈರವ ಶಿಲ್ಪದ ಬಲಭಾಗದ ಕೈ ಭಗ್ನವಾಗಿದೆ. ಗರ್ಭಗೃಹದ ದ್ವಾರಬಂಧವು ಆಕರ್ಷಕವಾಗಿದ್ದು, ಲಲಾಟ ಬಿಂಬದಲ್ಲಿ ಕಾಳ ಮುಖವನ್ನು ಕೆತ್ತಲಾಗಿದೆ. ಈ ದ್ವಾರದ ಬಲ ಭಾಗದಲ್ಲಿ ಮೋಹಿನಿ ಶಿಲ್ಪವು, ಎಡಭಾಗದಲ್ಲಿ ದಕ್ಷಿಣಾಮೂರ್ತಿಯ ಶಿಲ್ಪವು ಕಂಡುಬರುತ್ತದೆ. ಸುಕನಾಸಿ ದ್ವಾರಬಂಧವು ಪಂಚಶಾಖೆಗಳ ಅಲಂಕರಣೆಯನ್ನು ಹೊಂದಿದ್ದು, ಇದರ ಲಲಾಟಬಿಂಬದಲ್ಲಿ ಯೋಗಮುದ್ರೆಯಲ್ಲಿ ಕುಳಿತಿರುವ ದಕ್ಷಿಣಾಮೂರ್ತಿಯ ಶಿಲ್ಪವನ್ನು ಕೆತ್ತಿದ್ದಾರೆ.[113] ಈ ಗುಡಿಯು ಸಹ 6 ಪಟ್ಟಿಕೆಗಳು ಅಥವಾ ಕಪೋತಗಳನ್ನು ಹೊಂದಿರುವ ಶಿಖರವನ್ನು ಹೊಂದಿದ್ದು, ಇದರ ಮೇಲ್ಭಾಗದಲ್ಲಿ ಮಗುಚಿ ಹಾಕಿದ ತಾವರೆ ಹೂವಿನ ದಳಗಳ ಮೇಲೆ ಸ್ತೂಪಿಯನ್ನು ನಿರ್ಮಿಸಿದ್ದಾರೆ. ಶಿಖರದ ಮುಂದಿನ ಸುಖನಾಸದ ಮೇಲ್ಭಾಗದಲ್ಲಿ ಸಳನು ಹುಲಿಯೊಂದಿಗಿರುವ ಶಿಲ್ಪವನ್ನು ನಿರ್ಮಿಸಲಾಗಿದೆ.

**ಪ್ರಾಕಾರ:** ಈ ದೇವಾಲಯವು ಸುತ್ತಲೂ 7 ಅಡಿ ಎತ್ತರದ ತಡೆಗೋಡೆ ಮತ್ತು 118X113 ಅಡಿ ವಿಸ್ತೀರ್ಣದ ಪ್ರಾಕಾರವನ್ನು ಹೊಂದಿದ್ದು, ಪ್ರಾಕಾರದ ನಾಲ್ಕೂ ಮೂಲೆಗಳಲ್ಲಿ ಒಂದೊಂದು ಚಿಕ್ಕ ಗುಡಿಗಳು ಕಂಡುಬರುತ್ತವೆ.[114] (ಚಿ.ಸಂ. 140) ಗುಡಿಗಳ ಒಳಗೆ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಆದರೆ ಈ ಗುಡಿಗಳ ಭಿತ್ತಿಯ ಮೇಲೆ ಶಾಸನಗಳನ್ನು ಕೆತ್ತಿರುವುದು ಕಾಣಿಸುತ್ತದೆ. ಈ ಗುಡಿಗಳೂ ಸಹ ದೇವಾಲಯದ ಷಡ್ವರ್ಗ ರಚನೆಯಂತೆ ಅಧಿಷ್ಠಾನ, ಭಿತ್ತಿ, ಪ್ರಸ್ತರ ಮತ್ತು ಶಿಖರದ ಭಾಗಗಳನ್ನು ಒಳಗೊಂಡಿದ್ದು, ಸಳನು ಹುಲಿಯೊಂದಿಗೆ ಹೋರಾಡುತ್ತಿರುವ ಶಿಲ್ಪಗಳನ್ನು ಸುಖನಾಸದಲ್ಲಿ ಕೆತ್ತಲಾಗಿದೆ. (ಚಿ.ಸಂ. 141) ಈ ಪ್ರಾಕಾರದೊಳಗೆ ಬರಲು ಪೂರ್ವ ದಿಕ್ಕಿನಲ್ಲಿ ಒಂದು ದ್ವಾರ ಮತ್ತು ಪಶ್ಚಿಮ ದಿಕ್ಕಿನಲ್ಲಿ ದ್ವಾರ ಮಂಟಪವಿದೆ. ಪ್ರಾಕಾರದೊಳಗೆ ಮಹಾದ್ವಾರದ ಬಲಭಾಗದಲ್ಲಿ ಒಂದು ಶಾಸನ, ನೈರುತ್ಯ ದಿಕ್ಕಿನಲ್ಲಿ ಒಂದು ಶಾಸನ, ವಾಯುವ್ಯದಲ್ಲಿ ಎರಡು ಶಾಸನ ಮತ್ತು ಒಂದು ವೀರಗಲ್ಲು ಶಾಸನ ಹಾಗೂ ಈಶಾನ್ಯ ಮೂಲೆಯಲ್ಲಿ ಎರಡು ಶಾಸನಗಳು ಕಂಡುಬರುತ್ತವೆ. ಪ್ರಾಕಾರದ ಆಗ್ನೇಯ ದಿಕ್ಕಿನಲ್ಲಿ ಎರಡು ವೀರಗಲ್ಲು, ಬಲಿಪೀಠ ಮತ್ತು ದೇವತಾಮೂರ್ತಿಗಳನ್ನು ಪ್ರತಿಷ್ಠಾಪಿಸಲು ಬಳಸುವ ಪೀಠದ ಅವಶೇಷಗಳು ಬಿದ್ದಿರುತ್ತವೆ.

**ದ್ವಾರಮಂಟಪ:** ಇದು ದೇವಾಲಯದ ಪಶ್ಚಿಮ ದಿಕ್ಕಿಗೆ ಪ್ರಾಕಾರದ ಹೊರಗೋಡೆಗೆ ಹೊಂದಿಕೊಂಡಂತೆ ಕಂಡುಬರುತ್ತದೆ. ಈ ಮಂಟಪದಲ್ಲಿ ಲೇತ್ ಯಂತ್ರದಿಂದ ನಿರ್ಮಿಸಿದಂತಹ 16 ಶ್ರೀಕಾರ ಸ್ತಂಭಗಳಿವೆ. ಮಂಟಪದ ಒಳಭಾಗದಲ್ಲಿ ಸುತ್ತಲೂ ಕಕ್ಷಾಸನಗಳಿವೆ. (ಚಿ.ಸಂ. 142)

ಮಂಟಪವು ಸರಳವಾದ ಭುವನೇಶ್ವರಿಗಳನ್ನು ಹೊಂದಿದ್ದು, ಇವುಗಳ ಫಲಕದ ಮೇಲೆ ಅಷ್ಟದಿಕ್ಪಾಲಕರ ಶಿಲ್ಪಗಳನ್ನು, ಇವುಗಳ ನಡುವೆ ತಾಂಡವೇಶ್ವರನ ಶಿಲ್ಪವನ್ನು ಕೆತ್ತಲಾಗಿದೆ. ಈ ದ್ವಾರಮಂಟಪದ ಕೈಪಿಡಿ ಗೋಡೆಯನ್ನು ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ನಿರ್ಮಿಸಲಾಗಿದೆ. ಹೊಯ್ಸಳರ ಅಪೂರ್ವ ಕಲಾಕೃತಿಯಾಗಿರುವ ಈ ಲಕ್ಷ್ಮೀದೇವಿ ದೇವಾಲಯವನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿಸುತ್ತಿದೆ.

**ಹೊನ್ನಾವರ**

ಈ ಗ್ರಾಮವು ಹಾಸನ ನಗರದಿಂದ ಈಶಾನ್ಯ ದಿಕ್ಕಿಗೆ 20 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಪ್ರಾಚೀನವಾಗಿ ಈ ಗ್ರಾಮವು ಕಬ್ಬಿಣ ಯುಗದ ನೆಲೆಯಾಗಿತ್ತೆಂಬುದು ತಿಳಿದು ಬರುತ್ತದೆ.[115] ಈ ಗ್ರಾಮದಲ್ಲಿ ಒಟ್ಟು 6 ಶಾಸನಗಳು ಮತ್ತು ಕೇಶವ, ಈಶ್ವರ, ಆಂಜನೇಯ, ಕೋಡಮ್ಮ, ವೀರಭದ್ರ, ಚಿಕ್ಕಮ್ಮ, ಬೀರಿದೇವ ಎಂಬ ಏಳು ದೇವಾಲಯಗಳು ಕಂಡು ಬಂದಿದ್ದು ಇವುಗಳಲ್ಲಿ ಕೇಶವ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಸುಂದರ ದೇವಾಲಯವಾಗಿದೆ. ಈ ಗ್ರಾಮವು ಪ್ರಾಚೀನ ಕಾಲದಲ್ಲಿ ನೀರ್ಗುಂದ ನಾಡಿಗೆ ಸೇರಿದ ಒಂದು ಪ್ರಮುಖ ಅಗ್ರಹಾರವೂ ಆಗಿತ್ತೆಂಬುದು ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ.[116]

**ಕೇಶವ ದೇವಾಲಯ**

ಇದು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. (ಚಿ.ಸಂ. 143) ಈ ದೇವಾಲಯವನ್ನು ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಕೋಣೆಯ ಶಂಕರದಂಡನಾಥ ಎಂಬಾತನು ಕ್ರಿ.ಶ.1149ರಲ್ಲಿ ನಿರ್ಮಿಸಿದನೆಂದು ಇಲ್ಲಿನ ಶಾಸನದಿಂದ ತಿಳಿದು ಬರುತ್ತದೆ.[117] ಈ ದೇವಾಲಯವು ಆಗಮಶಾಸ್ತ್ರದ ಮಂತ್ರ ಸಿದ್ಧಾಂತದ ನಿಯಮಗಳನ್ನು ಅನುಸರಿಸಿ ನಿರ್ಮಾಣವಾಗಿದೆ. ಮಂತ್ರ ಸಿದ್ಧಾಂತ ಎಂದರೆ ಕೇವಲ ಒಂದೇ ದೇವತೆಯನ್ನು ಬಿಟ್ಟು ಇತರ ಪಂಥದ ದೇವತೆಗಳನ್ನು, ಪರಿವಾರ ದೇವತೆಗಳನ್ನು ಆರಾಧಿಸುವಂತಿಲ್ಲ. ಹಾಗಾಗಿ ಬೇರೆ ಹೊಯ್ಸಳ ದೇವಾಲಯಗಳಲ್ಲಿ ಕಂಡು ಬರುವಂತೆ ಈ ದೇವಾಲಯದಲ್ಲಿ ಗಣಪತಿ, ಸೂರ್ಯ, ಭೈರವ, ಸಪ್ತಮಾತೃಕೆಯರು ಇನ್ನಿತರ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ. ಆದ್ದರಿಂದ ಇದನ್ನು ಆಗಮೋಕ್ತ ಮಂತ್ರ ಸಿದ್ಧಾಂತದ ದೇವಾಲಯ ಎಂದು ಕರೆಯಬಹುದು. ಈ ದೇವಾಲಯವು ಏಕಕೂಟವಾಗಿದ್ದು ಗರ್ಭಗೃಹ, ತೆರೆದ ಸುಖನಾಸಿ, ನವರಂಗ ಮತ್ತು ಮುಖಮಂಟಪದ ಭಾಗಗಳನ್ನು ಒಳಗೊಂಡಿದ್ದು ಕೆಂಪು ಮಿಶ್ರಿತ ಕಣಶಿಲೆಯಿಂದ ನಿರ್ಮಾಣವಾಗಿದೆ.

**ಗರ್ಭಗೃಹ**: ಈ ಗರ್ಭಗೃಹವು 8.5x8.5 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ 1.6 ಅಡಿ ಎತ್ತರದ ಗರುಡ ಪೀಠದ ಮೇಲೆ 6 ಅಡಿ ಎತ್ತರದ ಕೇಶವನ ವಿಗ್ರಹವಿದೆ. (ಚಿ.ಸಂ. 144) ಬಲಹಿಂಬದಿಯ ಕೈಯಲ್ಲಿ ಶಂಖ, ಎಡ ಹಿಂಬದಿಯ ಕೈಯಲ್ಲಿ ಚಕ್ರ, ಎಡ ಮುಂಬದಿಯ ಕೈಯಲ್ಲಿ ಗದಾ ಮತ್ತು ಬಲ ಮುಂಬದಿಯ ಕೈಯಲ್ಲಿ ಪದ್ಮವನ್ನು ಹಿಡಿದಿರುವ ಕೇಶವನು ಕಂಠೀಹಾರ, ಹಾರ, ಕೇಯೂರ, ಉದರಬಂಧ, ಕಂಕಣ, ರತಾಂಗುಲಿಯಕಗಳು, ಯಜ್ಞೋಪವೀತ ಮತ್ತು ವನಮಾಲೆಯನ್ನು ಧರಿಸಿದ್ದು, ಎರಡೂ ಪಾರ್ಶ್ವದಲ್ಲಿ ಭೂದೇವಿ-ಶ್ರೀದೇವಿ ಸಮೇತನಾಗಿ ಸ್ಥಾನಕ ಮೂರ್ತಿಯಾಗಿದ್ದಾನೆ. ಶಿಲ್ಪದ ಹಿಂಭಾಗದಲ್ಲಿ ಸುಂದರವಾದ ಪ್ರಭಾವಳಿಯಿದ್ದು ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಮೂಡಿಸಲಾಗಿದೆ.[118] ಗರ್ಭಗುಡಿಯ ದ್ವಾರವು ವಜ್ರ, ವಲ್ಲೀ, ಸ್ತಂಭ ಮತ್ತು ವಲ್ಲೀ ಎಂಬ ಚತುಶಾಖೆಗಳನ್ನು ಹೊಂದಿದ್ದು, ದ್ವಾರಬಂಧದ ಲಲಾಟಬಿಂಬದಲ್ಲಿ ಗಜಲಕ್ಶ್ಮಿಯ ಶಿಲ್ಪವಿದೆ. (ಚಿ.ಸಂ. 145) ದ್ವಾರದ ಎರಡೂ ಪಾರ್ಶ್ವದಲ್ಲಿ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರು ಸರ್ವಾಭರಣ ಭೂಷಿತರಾಗಿ ಶಂಖ, ಚಕ್ರ ಮತ್ತು ಗದೆಯನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿದ್ದಾರೆ.

**ಸುಖನಾಸಿ**: ಈ ದೇವಾಲಯವು ತೆರೆದ ಸುಖನಾಸಿಯನ್ನು ಹೊಂದಿದ್ದು ದ್ವಾರವು ಕಂಡು ಬರುವುದಿಲ್ಲ. ಇದರ ಭುವನೇಶ್ವರಿಯು ಆಕರ್ಷಕವಾಗಿದ್ದು, ಮೊದಲು ಚತುರಶ್ರವಾಗಿರುವ ಈ ವಿತಾನವು ನಂತರ ಅಷ್ಟಕೋನಗಳನ್ನು ಹೊಂದಿ ಮಧ್ಯಭಾಗದಲ್ಲಿ ಚತುರಶ್ರವಾದ ಶಿಲಾಫಲಕವನ್ನು ಹೊಂದಿದೆ. ಈ ಶಿಲಾಫಲಕದಲ್ಲಿ ಆಯಾ ದಿಕ್ಕಿಗಳಗನುಸಾರವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ. (ಚಿ.ಸಂ. 146) ಈ ವಿತಾನದ ಪಾರ್ಶ್ವ ಭಾಗದ ದಿಂಡುಗಳಲ್ಲಿ ವಾದ್ಯಗಾರರು, ನೃತ್ಯಗಾರರ ಶಿಲ್ಪಗಳನ್ನು ಕೆತ್ತಲಾಗಿದ್ದು ಜೊತೆಗೆ ಕೀರ್ತಿಮುಖಗಳ ಅಲಂಕರಣೆಯೂ ಕಂಡು ಬರುತ್ತದೆ.

**ನವರಂಗ**: ನವರಂಗವು 21x22 ಅಡಿ ಉದ್ದ ಅಗಲವನ್ನು ಹೊಂದಿದ್ದು, ಇದರಲ್ಲಿ ನಾಲ್ಕು ಶ್ರೀಕಾರ ಸ್ತಂಭಗಳು ಕಂಡು ಬರುತ್ತವೆ. (ಚಿ.ಸಂ. 147) ಈ ಸ್ತಂಭಗಳು ಪೀಠ, ನಾಲ್ಕು ಕೋನದ ದಿಂಡು, ವೃತ್ತಾಕಾರದ ಬಳೆಗಳು ಮತ್ತು ಘಂಟಾಕಾರವನ್ನು ಹೊಂದಿರುವ ಶಲಾಕ, ಕಂಠ, ಚತುರಶ್ರ ಫಲಕ ಮತ್ತು ಮುಷ್ಟಿಬಂಧ ಪೋತಿಕೆಯನ್ನು ಹೊಂದಿವೆ. ಸ್ತಂಭದ ಘಂಟಾಕಾರದ ಭಾಗ ಮತ್ತು ಕಂಠ ಭಾಗದ ಮೇಲೆ ಸೂಕ್ಷ್ಮವಾದ ಮಣಿಮಾಲೆಗಳ ಕೆತ್ತನೆಯನ್ನು ಗುರುತಿಸಬಹುದು. ಭಿತ್ತಿಯಲ್ಲಿ ಗೋಡೆಗೆ ಹೊಂದಿಕೊಂಡಂತೆ ವರ್ಧಮಾನ ಸ್ತಂಭಗಳು ಕಂಡು ಬರುತ್ತವೆ. ನವರಂಗವು 9 ಭುವನೇಶ್ವರಿಗಳನ್ನು ಒಳಗೊಂಡಿದ್ದು ಮಧ್ಯ ಅಂಕಣದ ಭುವನೇಶ್ವರಿಯನ್ನು

ಹೊರತುಪಡಿಸಿ ಉಳಿದ ಎಲ್ಲಾ ಭುವನೇಶ್ವರಿಗಳು ಸರಳ ಪದ್ಮದ ರಚನೆಯಿರುವ ನಾಭಿಚ್ಛಂಧ ಮಾದರಿಯಿಂದ ಕೂಡಿವೆ. ಮಧ್ಯ ಅಂಕಣದ ಭುವನೇಶ್ವರಿಯ ಪಾರ್ಶ್ವ ದಿಂಡುಗಳು ಅಷ್ಟಕೋನವನ್ನು ಹೊಂದಿದ್ದು ಇವುಗಳ ಮಧ್ಯಭಾಗದಲ್ಲಿ ಚತುರಶ್ರವಾದ ಶಿಲಾಫಲಕವಿದೆ. ಈ ಶಿಲಾಫಲಕದ ಮಧ್ಯಭಾಗದಲ್ಲಿ ಬ್ರಹ್ಮನ ಸುತ್ತಲೂ ಯಕ್ಷರು ಹಾರವನ್ನು ಹಿಡಿದು ಜಿಗಿಯುತ್ತಿರುವಂತೆ ಚಿತ್ರಿಸಲಾಗಿದೆ. ಹಾಗೂ ಭುವನೇಶ್ವರಿಯಲ್ಲಿ ಕೀರ್ತಿಮುಖಗಳ ಅಲಂಕರಣವೂ ಕಂಡು ಬರುತ್ತದೆ.[119] ನವರಂಗವು ಆಕರ್ಷಕವಾದ ಪಂಚಶಾಖಾ ದ್ವಾರಬಂಧವನ್ನು ಹೊಂದಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ಕಂಡರಿಸಲಾಗಿದೆ. (ಚಿ.ಸಂ. 148) ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರ ಶಿಲ್ಪಗಳಿವೆ.

**ಮುಖಮಂಟಪ:** ಮುಖಮಂಟಪವು ಶ್ರೀಕಾರ ಮಾದರಿಯ ಎರಡು ಅರ್ಧ ಸ್ತಂಭಗಳನ್ನು ಮತ್ತು ಇತ್ತೀಚೆಗೆ ನವೀನವಾಗಿ ನಿರ್ಮಿಸಿರುವ ಕಕ್ಷಾಸನಗಳನ್ನು ಹೊಂದಿದ್ದು ಸರಳವಾಗಿದೆ. ಸ್ತಂಭಗಳು ಘಂಟಾಕಾರದ ಶಲಾಕ ಭಾಗದಿಂದ ಮೇಲೆ ಕಂಡು ಬರುವ ಅಂಗಗಳನ್ನು ಮಾತ್ರ ಹೊಂದಿವೆ. ಈ ಮುಖಮಂಟಪದ ಅಧಿಷ್ಠಾನಕ್ಕೆ ಹೊಂದಿಕೊಂಡಂತೆ ಈ ದೇವಾಲಯದ ನಿರ್ಮಾಣವನ್ನು ತಿಳಿಸುವ ಶಾಸನ ಕಲ್ಲನ್ನು ನಿಲ್ಲಿಸಲಾಗಿದೆ.

**ಅಧಿಷ್ಠಾನ:** ಈ ದೇವಾಲಯದ ಅಧಿಷ್ಠಾನವು 4 ಅಡಿ ಎತ್ತರವನ್ನು ಹೊಂದಿದ್ದು ಇದರಲ್ಲಿ ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ, ಗಳ, ದಂತ ಪಂಕ್ತಿ, ಆಲಿಂಗ ಮತ್ತು ಪ್ರತಿ ಭಾಗಗಳು ಕಂಡು ಬಂದಿದ್ದು ಇದನ್ನು ಪ್ರತಿಬಂಧ ಅಧಿಷ್ಠಾನ ಎಂದು ಕರೆಯಲಾಗಿದೆ.[120]

**ಭಿತ್ತಿ ಮತ್ತು ಪ್ರಸ್ತರ:** ಈ ದೇವಾಲಯದ ಭಿತ್ತಿಯು ಪ್ರಮುಖವಾದ ಆಕರ್ಷಣೀಯ ಭಾಗವಾಗಿದ್ದು ಇದರಲ್ಲಿ ಕೋಷ್ಠಗಳು, ಸ್ತಂಭ ಪಂಜರಗಳು, ಬ್ರಹ್ಮಕಾಂತ ಭಿತ್ತಿಪಾದಗಳು, ಬಳ್ಳಿ ಸುರುಳಿಗಳು ಮತ್ತು ವೈಷ್ಣವ ಪರಂಪರೆಯನ್ನು ಬಿಂಬಿಸುವ ಶಿಲ್ಪಗಳನ್ನು ಹಾಗೂ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳನ್ನು ಸುಂದರವಾಗಿ ಕೆತ್ತಲಾಗಿದೆ. (ಚಿ.ಸಂ. 149) ಮುಖ್ಯ ದೇವತಾ ಶಿಲ್ಪಗಳಿರುವ ಕೆಲವು ಕೋಷ್ಠಗಳ ಮೇಲೆ ವಿವಿಧ ಶಿಖರದ ಮಾದರಿಗಳನ್ನು ನಿರ್ಮಿಸಿದ್ದಾರೆ. ಕೆಲವು ಶಿಲ್ಪಗಳ ಮೇಲೆ ಸ್ತಂಭ ಪಂಜರಗಳನ್ನು ಮತ್ತು ಸುರುಳಿ ಬಳ್ಳಿಗಳನ್ನು ಕೆತ್ತಿರುವುದನ್ನು ನೋಡಬಹುದು. ಭಿತ್ತಿಯಲ್ಲಿ ಕಂಡು ಬರುವ ಶಿಲ್ಪಗಳು ಅತ್ಯಂತ ಸುಂದರವಾಗಿ ಕೆತ್ತಲ್ಪಟ್ಟಿದ್ದು ಅವುಗಳಲ್ಲಿ ಪ್ರಮುಖವಾದ ಭಿತ್ತಿ ಶಿಲ್ಪಗಳನ್ನು ಈ ಕೆಳಕಂಡಂತೆ ಹೆಸರಿಸಲಾಗಿದೆ.

1. **ಕೇಶವ**: ಈ ಶಿಲ್ಪವು ದೇವಾಲಯದ ಆಗ್ನೇಯ ಭಿತ್ತಿಯಲ್ಲಿ ಕಂಡು ಬಂದಿದ್ದು ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದಿದ್ದು ಸಮಭಂಗಿಯಲ್ಲಿ ನಿಂತಿದೆ. ಹಾರ, ಕಂಠೀಹಾರ, ಉಡ್ಯಾಣ, ಕಂಕಣ, ಕೇಯೂರ ಮತ್ತು ವನಮಾಲೆಯನ್ನು ಧರಿಸಿರುವ ಈ ಶಿಲ್ಪದ ಮುಖವು ಭಗ್ನವಾಗಿದೆ. (ಚಿ.ಸಂ. 151)

2. **ಮನ್ಮಥ**: ದ್ವಿಭಂಗಿಯಲ್ಲಿರುವ ಈ ಶಿಲ್ಪವು ದಕ್ಷಿಣ ಭಿತ್ತಿಯಲ್ಲಿ ಕಂಡು ಬಂದಿದ್ದು, ಮನ್ಮಥನು ಬಿಲ್ಲು ಮತ್ತು ಹೂಬಾಣವನ್ನು ಹಿಡಿದು ಸರ್ವಾಭರಣಗಳಿಂದ ಅಲಂಕರಿಸಲ್ಪಟ್ಟಿದ್ದಾನೆ.

3. **ಲಕ್ಷ್ಮೀನಾರಾಯಣ**: ಈ ಶಿಲ್ಪವು ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕಂಡು ಬಂದಿದ್ದು ಇದರ ಮೇಲೆ ಎರಡು ತಲಗಳನ್ನು ಹೊಂದಿರುವ ದ್ರಾವಿಡ ಶೈಲಿಯ ಶಿಖರದ ಮಾದರಿಯನ್ನು ನಿರ್ಮಿಸಲಾಗಿದೆ. ಈ ಶಿಲ್ಪದಲ್ಲಿ ಸರ್ವಾಭರಣಗಳನ್ನು ಧರಿಸಿರುವ ಲಕ್ಷ್ಮಿಯು ನಾರಾಯಣನ ಎಡತೊಡೆಯ ಮೇಲೆ ಸುಖಾಸನದಲ್ಲಿ ಕುಳಿತಿದ್ದು ಎಡಗೈನಲ್ಲಿ ಕಳಸವನ್ನು ಹಿಡಿದು ಚಿನ್ಮುದ್ರೆಯನ್ನು ಹೊಂದಿದ್ದಾಳೆ. (ಚಿ.ಸಂ. 152) ನಾರಾಯಣನು ಕೂಡ ಸುಖಾಸನದಲ್ಲಿ ಕುಳಿತಿದ್ದು ಬಲಪಾರ್ಶ್ವದ ಕೈಗಳಲ್ಲಿ ಶಂಖ ಮತ್ತು ಪದ್ಮವನ್ನು ಎಡ ಹಿಂಬದಿಯ ಕೈಯಲ್ಲಿ ಚಕ್ರ ಮತ್ತು ಮುಂಬದಿಯ ಕೈಯನ್ನು ಲಕ್ಷ್ಮಿಯ ಭುಜದ ಮೇಲೆ ಹಾಕಿದ್ದಾನೆ. ಲಕ್ಷ್ಮಿಯ ಎಡ ಪಾರ್ಶ್ವದಲ್ಲಿ ಮಂಡಿಯೂರು ಕುಳಿತಿರುವ ಗರುಡ ಶಿಲ್ಪವಿದೆ. (ಚಿ.ಸಂ. 153)

4. **ಮೋಹಿನಿ ಶಿಲ್ಪ**: ಇದು ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕಂಡು ಬರುವ ಶಿಲ್ಪವಾಗಿದ್ದು, ಇದರಲ್ಲಿ ಮೋಹಿನಿಯು ತ್ರಿಭಂಗಿಯಲ್ಲಿ ನಗ್ನವಾಗಿ ನಿಂತಿದ್ದು, ಶಿಲ್ಪದ ಮೇಲ್ಭಾಗದಲ್ಲಿ ಸುರುಳಿ ಬಳ್ಳಿಯ ಕೆತ್ತನೆಯಿದೆ.

5. **ಕೇಶವ**: ಶಂಖ, ಪದ್ಮ ಮತ್ತು ಗದೆಯನ್ನು ಹಿಡಿದಿರುವ ಈ ಶಿಲ್ಪದ ಎಡ ಮೇಲ್ಭಾಗದ ಕೈ ಭಗ್ನವಾಗಿದೆ. ಸ್ಥಾನಕ ಮೂರ್ತಿಯಾಗಿರುವ ಕೇಶವನು ಸರ್ವಾಭರಣಗಳಿಂದ ಭೂಷಿತನಾಗಿದ್ದು ಈತನ ಎರಡೂ ಪಾರ್ಶ್ವದಲ್ಲಿ ಇಬ್ಬರು ಪರಿಚಾರಕಿಯರಿದ್ದಾರೆ. (ಚಿ.ಸಂ. 154) ಕೇಶವನ ಶಿಲ್ಪವಿರುವ ಈ ಕೋಷ್ಠದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರದ ಮಾದರಿಯನ್ನು ನಿರ್ಮಿಸಿದ್ದಾರೆ.

6. **ಜನಾರ್ಧನ**: ಈ ಶಿಲ್ಪವು ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕಂಡು ಬಂದಿದ್ದು ಈ ಶಿಲ್ಪದ ಮೇಲೆ ದ್ರಾವಿಡ ಶೈಲಿಯ ಶಿಖರದ ಮಾದರಿಯಿದೆ. ದ್ವಿಭಂಗಿಯಲ್ಲಿ ನಿಂತಿರುವ ಜನಾರ್ಧನನು ಬಲ ಹಿಂದಿನ ಕೈಯಲ್ಲಿ ಚಕ್ರ, ಮುಂದಿನ ಕೈಯಲ್ಲಿ ಪದ್ಮ, ಎಡ ಹಿಂದಿನ ಕೈಯಲ್ಲಿ ಶಂಖ ಮತ್ತು

ಮುಂದಿನ ಕೈಯಲ್ಲಿ ಗದೆಯನ್ನು ಹಿಡಿದಿದ್ದು ಸರ್ವಾಭರಣಗಳನ್ನು ಧರಿಸಿದ್ದಾನೆ. (ಚಿ.ಸಂ. 155)

7. **ಉಗ್ರನರಸಿಂಹ**: ಈ ಶಿಲ್ಪವು ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕಂಡು ಬಂದಿದ್ದು ಉಗ್ರನರಸಿಂಹನು ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದು ಕರುಳನ್ನು ಹಾರ ಮಾಡಿಕೊಂಡಿರುವಂತೆ ಸುಂದರವಾಗಿ ಶಿಲ್ಪವನ್ನು ಕೆತ್ತಿದ್ದು, ಇದರಲ್ಲಿ ನರಸಿಂಹನು ಅಷ್ಟಭುಜಗಳನ್ನು ಹೊಂದಿದ್ದಾನೆ. (ಚಿ.ಸಂ. 156) ಈ ಶಿಲ್ಪದ ಮೇಲ್ಭಾಗದಲ್ಲಿ ದ್ರಾವಿಡ ಶಿಖರದ ಮಾದರಿಯನ್ನು ನಿರ್ಮಿಸಲಾಗಿದೆ.

8. **ಧರಣಿವರಾಹ**: ಈ ಶಿಲ್ಪವು ಪಶ್ಚಿಮ ದಿಕ್ಕಿನ ಗರ್ಭಗುಡಿಯ ಭಿತ್ತಿಯಲ್ಲಿ ಕಂಡು ಬರುತ್ತದೆ. ಇದರಲ್ಲಿ ವಿಷ್ಣುವು ವರಾಹವತಾರವನ್ನು ಎತ್ತಿ ಭೂದೇವಿಯನ್ನು ರಕ್ಷಿಸಿ ತನ್ನ ಎಡ ಭುಜದ ಮೇಲೆ ಕೂರಿಸಿಕೊಂಡಿರುವಂತೆ (ಚಿ.ಸಂ. 157) ಈ ಶಿಲ್ಪವನ್ನು ಕೆತ್ತಲಾಗಿದ್ದು ಈ ಶಿಲ್ಪದ ಮೇಲೆ 3 ತಲಗಳನ್ನು ಹೊಂದಿರುವ ದ್ರಾವಿಡ ಮಾದರಿಯ ಶಿಖರವನ್ನು ನಿರ್ಮಿಸಿದ್ದಾರೆ.

9. **ವಾಮನ**: ಈ ಶಿಲ್ಪವು ಕುಬ್ಜವಾಗಿದ್ದು, ಇದರ ಎರಡೂ ಕೈಗಳು ಭಗ್ನವಾಗಿವೆ ಹಾಗೂ ಶಿಲ್ಪದ ಎರಡೂ ಬದಿಯಲ್ಲಿ ಚಾಮರಧಾರಿಣಿಯರಿದ್ದಾರೆ. (ಚಿ.ಸಂ. 158)

10. **ಸಂಕರ್ಷಣ**: ಚತುರ್ವಿಂಶತಿ ಮೂರ್ತಿಗಳಲ್ಲಿ ಇದು ಸಹ ಒಂದು. ಇದರಲ್ಲಿ ಶಿಲ್ಪವು ಬಲ ಹಿಂಭಾಗದ ಕೈಯಲ್ಲಿ ಶಂಖ, ಮುಂಭಾಗದ ಕೈಯಲ್ಲಿ ಗದೆ, ಎಡ ಹಿಂಭಾಗದ ಕೈಯಲ್ಲಿ ಚಕ್ರವನ್ನು ಹಿಡಿದಿದ್ದು ಸ್ಥಾನಕ ಮೂರ್ತಿಯಾಗಿದೆ. (ಚಿ.ಸಂ. 159)

11. **ವೇಣುಗೋಪಾಲ**: ಇದರಲ್ಲಿ ಕೃಷ್ಣನು ಕೊಳಲನ್ನು ನುಡಿಸುತ್ತಾ ತ್ರಿಭಂಗಿಯಲ್ಲಿ ನಿಂತಿದ್ದು, ಗೋವುಗಳು ಈ ಸಂಗೀತವನ್ನು ಆಲಿಸುತ್ತಿರುವಂತೆ ಶಿಲ್ಪದಲ್ಲಿ ಪಡೆಮೂಡಿಸಲಾಗಿದೆ. (ಚಿ.ಸಂ. 160)

12. **ಗೋವರ್ಧನಗಿರಿಧಾರಿ**: ಉತ್ತರ ದಿಕ್ಕಿನಲ್ಲಿ ಕಂಡು ಬರುವ ಈ ಶಿಲ್ಪದಲ್ಲಿ ಕೃಷ್ಣನು ಗೋವರ್ಧನ ಪರ್ವತವನ್ನು ಎಡಗೈನಲ್ಲಿ ಎತ್ತಿ, ದ್ವಿಭಂಗಿಯಲ್ಲಿ ನಿಂತಿದ್ದು, ಕೃಷ್ಣನ ಎರಡೂ ಪಾರ್ಶ್ವದಲ್ಲಿ ಗೋವುಗಳ ಶಿಲ್ಪಗಳನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ. ಹಾಗೂ ಇದರ ಮೇಲ್ಭಾಗದಲ್ಲಿ ದ್ರಾವಿಡ ಶಿಖರದ ಮಾದರಿಯು ಕಂಡು ಬರುತ್ತದೆ.

13. **ದಕ್ಷಿಣಾಮೂರ್ತಿ**: ಉತ್ತರ ದಿಕ್ಕಿನಲ್ಲಿ ಕಂಡು ಬರುವ ಈ ಶಿಲ್ಪವು ಎತ್ತರವಾದ ಪಾದುಕೆಗಳು, ನಿಲುವಂಗಿ, ಟೊಪ್ಪಿಯನ್ನು ಧರಿಸಿದ್ದು ಎಡಗೈಯಲ್ಲಿ ಒಂದು ಸುರುಳಿಯನ್ನು ಮತ್ತು

ಬಲಗೈಯಲ್ಲಿ ಒಂದು ದಂಡವನ್ನು ಹಿಡಿದಿರುವಂತೆ ಚಿತ್ರಸಲಾಗಿದೆ. ಈ ರೀತಿಯ ಶಿಲ್ಪವು ಕೋರವಂಗಲ ಮತ್ತು ಬೇಲೂರಿನ ದೇವಾಲಯಗಳಲ್ಲಿಯೂ ಕಂಡು ಬರುತ್ತದೆ.

ಹೊಯ್ಸಳ ದೇವಾಲಯಗಳು ಭಿತ್ತಿಯಲ್ಲಿರುವ ಶಿಲ್ಪ ಸೌಂದರ್ಯದಿಂದ ಎಂತಹವರನ್ನು ಬೆರಗುಗೊಳಿಸುತ್ತದೆ. ಅದರಂತೆಯೇ ಹೊನ್ನಾವರದ ಈ ಕೇಶವ ದೇವಾಲಯವು ಹಲವಾರು ಭಿತ್ತಿ ಶಿಲ್ಪಗಳನ್ನು ಹೊಂದಿದ್ದು ಇದರಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳೇ ಹೆಚ್ಚಾಗಿ ಕಂಡು ಬರುತ್ತವೆ. ಇವುಗಳ ಜೊತೆಗೆ ಚಾಮರಧಾರಿಣಿಯರು, ಪರಿಚಾರಕಿಯರು, ಸಂಗೀತಗಾರರ ಶಿಲ್ಪಗಳು ಕಂಡು ಬಂದಿದ್ದು ಇವು ಭಿತ್ತಿಯ ಸೌಂದರ್ಯವನ್ನು ಇಮ್ಮಡಿಗೊಳಿಸಿದೆ ಎಂದು ಹೇಳಿದರೆ ತಪ್ಪಾಗಲಾರದು. ಭಿತ್ತಿಯ ನಂತರ ಪ್ರಸ್ತರವು ಕಂಡು ಬಂದಿದ್ದು ಇದರಲ್ಲಿ ಉತ್ತರ, ವಲಭಿ ಮತ್ತು ಕಪೋತ ಭಾಗಗಳಿವೆ. ಈ ದೇವಾಲಯದ ಕಪೋತ ಭಾಗವನ್ನು ಸಂಪೂರ್ಣವಾಗಿ ಹೊಸದಾಗಿ ಗ್ರಾನೈಟ್ ಕಲ್ಲುಗಳಿಂದ ನಿರ್ಮಿಸಿ ಅಳವಡಿಸಲಾಗಿದೆ. ಹಾಗೂ ಉತ್ತರ ಮತ್ತು ವಲಭೀ ಭಾಗಗಳಲ್ಲೂ ಕೆಲವು ಮಾರ್ಪಾಡುಗಳು ಕಂಡು ಬರುತ್ತವೆ. ಅಂದರೆ ಇಲ್ಲಿಯೂ ಕೂಡ ಕೆಲವು ಹೊಸ ಕಲ್ಲುಗಳನ್ನು ಜೋಡಿಸಿದ್ದಾರೆ.

**ಶಿಖರ**: ದೇವಾಲಯವು ದ್ರಾವಿಡ ಮಾದರಿಯ ಶಿಖರವನ್ನು ಹೊಂದಿದ್ದು ಇದರಲ್ಲಿ ಮೂರು ತಲಗಳು ಕಂಡು ಬರುತ್ತವೆ. (ಚಿ.ಸಂ. 161) ಪ್ರತಿ ತಲದ ಮೇಲ್ಭಾಗದಲ್ಲಿ ದಂತ ಪಂಕ್ತಿಗಳು, ಇದರ ನಂತರ ಆಲಿಂಗವನ್ನು ನಿರ್ಮಿಸಲಾಗಿದೆ. ಶಿಖರವು ಕೂಟ, ಶಾಲಾ, ಪಂಜರ ಮತ್ತು ನಾಸಿಗಳಿಂದ ಕೂಡಿದ್ದು ಈ ನಾಸಿಗಳ ಒಳಗೆ ಯಕ್ಷಯಕ್ಷಿಯರ ಶಿಲ್ಪಗಳನ್ನು ನಿರ್ಮಿಸಲಾಗಿದೆ.[121] ಪ್ರತೀ ನಾಸಿಗಳ ಮೇಲ್ಭಾಗದಲ್ಲಿ ಕೀರ್ತಿಮುಖಗಳ ರಚನೆಯಿದೆ. ಭದ್ರನಾಸಿಗಳ ಒಳಗೆ ವಿಷ್ಣುವಿನ ವಿವಿಧ ಶಿಲ್ಪಗಳನ್ನು ಕಂಡರಿಸಲಾಗಿದೆ. ಶಿಖರದ ಮೂರು ತಲಗಳ ನಂತರ ಬ್ರಹ್ಮಚ್ಛಂಧ ಮಾದರಿಯ ಅದೋಪದ್ಮವಿದ್ದು ಇದರ ಮೇಲ್ಭಾಗದಲ್ಲಿ ಇತ್ತೀಚಿನ ಲೋಹದ ಕಳಸವನ್ನು ಪ್ರತಿಷ್ಠಾಪಿಸಲಾಗಿದೆ. ಶಿಖರದ ಮುಂಭಾಗದಲ್ಲಿ ಶಾಲಾಕಾರದ ಸುಖನಾಸವಿದ್ದು ಇದರ ಫಲಕದಲ್ಲಿ ಶಿಲ್ಪಗಳು ಕಂಡು ಬರುವುದಿಲ್ಲ. ಆದರೆ ಸುಖನಾಸದ ಮೇಲ್ಭಾಗದಲ್ಲಿ ಕೀರ್ತಿಮುಖವಿರುವ ನಾಸಿಯಿದ್ದು, ಇದರೊಳಗೆ ಯೋಗಾನರಸಿಂಹ ಶಿಲ್ಪವಿದೆ.

ಹೊನ್ನಾವರದ ಕೇಶವ ದೇವಾಲಯವು ಹೊಯ್ಸಳರ ಕಲಾಪ್ರೌಢಿಮೆಗೆ ಸಾಕ್ಷಿಯಾಗಿರುವ ಒಂದು ಪ್ರಮುಖ ದೇವಾಲಯವಾಗಿದ್ದು ಇದನ್ನು 2018ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಜೀರ್ಣೋದ್ಧಾರಗೊಳಿಸಿದೆ. ಆದ್ದರಿಂದ ದೇವಾಲಯದ ಕೆಲವು ಭಾಗಗಳಲ್ಲಿ ಹೊಸ ಗ್ರಾನೈಟ್ ಶಿಲೆಗಳನ್ನು ಬಳಸಿರುವುದು ಕಂಡು ಬರುತ್ತದೆ. (ಚಿ.ಸಂ.162)

ಜೀರ್ಣೋದ್ಧಾರವಾದರೂ ಕೂಡ ಇದರ ಮೂಲ ಸೌಂದರ್ಯಕ್ಕೇನು ನಷ್ಟವಾಗಿರುವುದಿಲ್ಲ. ನಿಸರ್ಗದ ಮಳೆ, ಗಾಳಿ ಹಾಗೂ ಕೆಲವು ಮಾನುಷ ಕೃತ್ಯಗಳಿಂದಾಗಿ ಕೆಲವು ಶಿಲ್ಪಗಳು ಭಗ್ನವಾಗಿದ್ದರೂ ಸಹ ಈ ದೇವಾಲಯದ ಪ್ರಾಚೀನ ಸೌಂದರ್ಯಕ್ಕೇನು ಕೊರತೆ ಕಂಡು ಬರುವುದಿಲ್ಲ ಎಂದು ಅಭಿಪ್ರಾಯಿಸಬಹುದಾಗಿದೆ.

**ಅನುಗವಳ್ಳಿ**: ಈ ಗ್ರಾಮವು ಹಾಸನ ನಗರದಿಂದ ಈಶಾನ್ಯ ದಿಕ್ಕಿಗೆ 18 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಇಲ್ಲಿ ಐದು ಶಾಸನಗಳು ಮತ್ತು ಕೋದಂಡರಾಮ ಹಾಗೂ ಈಶ್ವರ ದೇವಾಲಯಗಳು ಕಂಡು ಬಂದಿದ್ದು ಇವುಗಳಲ್ಲಿ ಕೋದಂಡರಾಮ ದೇವಾಲಯವನ್ನು ಪ್ರಾಚೀನ ಕಾಲದಲ್ಲಿಯೇ ನಿರ್ಮಿಸಿದ್ದರೂ ಕೂಡ ಇತ್ತೀಚಿನ ದಿನಗಳಲ್ಲಿ ಕೆಲವು ಹೊಸ ಭಾಗಗಳನ್ನು ಸೇರ್ಪಡೆ ಮಾಡಲಾಗಿದೆ. ಈಶ್ವರ ದೇವಾಲಯವು ಇತ್ತೀಚಿನ ಕಾಲದ ನಿರ್ಮಾಣವಾಗಿದೆ.

**ಕೋದಂಡರಾಮ ದೇವಾಲಯ**: ಇದು ಗ್ರಾಮದ ಮಧ್ಯಭಾಗದಲ್ಲಿ ಸುಮಾರು 10 ಅಡಿ ಎತ್ತರದ ಪ್ರದೇಶದ ಮೇಲೆ ಪೂರ್ವಾಭಿಮುಖವಾಗಿ ಕಂಡು ಬಂದಿದ್ದು, (ಚಿ.ಸಂ. 163) ಇದರ ನಿರ್ಮಾಣದ ಬಗ್ಗೆ ತಿಳಿಸುವ ಯಾವುದೇ ಸ್ಪಷ್ಟ ಶಾಸನಗಳು ದೊರೆಯುವುದಿಲ್ಲ. ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಒಂದು ಶಾಸನವಿದ್ದು[122] ಇದರಲ್ಲಿ ಕಾಲಮಾನ ಕಂಡು ಬರುವುದಿಲ್ಲ ಹಾಗೂ ಶಾಸನ ಪಠ್ಯವು ಕೆಲವು ಭಾಗಗಳಲ್ಲಿ ನಶಿಸಿ ಹೋಗಿದೆ. ಆದರೆ ಲಭ್ಯವಿರುವ ಶಾಸನ ಪಠ್ಯದ ಪ್ರಕಾರ ಹೊಯ್ಸಳ ವಿಷ್ಣುವರ್ಧನನು ಒಂದು ದೇವಾಲಯವನ್ನು ನಿರ್ಮಾಣ ಮಾಡಿದ ಉಲ್ಲೇಖವಿದೆ. ಇದೇ ದೇವಾಲಯದ ಪಶ್ಚಿಮ ಗೋಡೆಯ ಮೇಲೆ ಕಂಡು ಬರುವ ಇನ್ನೊಂದು ಶಾಸನದಲ್ಲಿ[123] ವಿಷ್ಣುವರ್ಧನನ ಹೆಸರು ಪ್ರಸ್ತಾಪವಾಗಿದೆ. ಈ ಎರಡು ಶಾಸನಗಳಲ್ಲಿ ವಿಷ್ಣುವರ್ಧನನ ಹೆಸರು ಉಲ್ಲೇಖವಾಗಿರುವುದರಿಂದ ಮತ್ತು ದೇವಾಲಯದ ದ್ವಾರಬಂಧ ಹಾಗೂ ಕಂಬಗಳು ಕಲ್ಯಾಣಿ ಚಾಳುಕ್ಯರ ಆರಂಭದ ವಾಸ್ತುಶೈಲಿಯನ್ನು ಹೋಲುವುದರಿಂದ ಈ ದೇವಾಲಯವನ್ನು ವಿಷ್ಣುವರ್ಧನನ ಆಳ್ವಿಕೆಯ ಆರಂಭದ ಕಾಲದಲ್ಲಿ ನಿರ್ಮಿಸಿರಬಹುದೆಂದು ಅಭಿಪ್ರಾಯಿಸಬಹುದಾಗಿದೆ.

ಈ ದೇವಾಲಯವು ಗರ್ಭಗೃಹ, ಸುಖನಾಸಿ, ನವರಂಗ, ಒಂದು ಚಿಕ್ಕ ಹಜಾರ, ವಿಶಾಲವಾದ ಮುಖಮಂಟಪ ಹಾಗೂ ಇನ್ನೊಂದು ಹಜಾರವು ಸೇರಿದಂತೆ ಒಟ್ಟು 6 ಭಾಗಗಳನ್ನು ಒಳಗೊಂಡಿದ್ದು[124] ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ.

**ಗರ್ಭಗುಡಿ ಮತ್ತು ಸುಖನಾಸಿ**: ಗರ್ಭಗುಡಿಯು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ನಾಲ್ಕು ಅಡಿ ಎತ್ತರದ ಕೇಶವನ

ವಿಗ್ರಹವಿದೆ. ಇದರಲ್ಲಿ ಕೇಶವನು ಬಲ ಹಿಂಬದಿಯ ಕೈಯಲ್ಲಿ ಶಂಖ, ಬಲ ಮುಂಬದಿಯ ಕೈಯಲ್ಲಿ ಪದ್ಮ, ಹಿಂಬದಿಯ ಕೈ ಚಕ್ರ ಮತ್ತು ಎಡ ಮುಂಬದಿಯ ಕೈಯಲ್ಲಿ ಗದೆಯನ್ನು ಹಿಡಿದಿದ್ದು ಸುಂದರ ಮುಖಭಾವದೊಂದಿಗೆ ಸರ್ವಾಭರಣಗಳಿಂದ ಭೂಷಿತನಾಗಿದ್ದಾನೆ. ದೇವಾಲಯವನ್ನು ಕೋದಂಡರಾಮ ಎಂದು ಕರೆದಿದ್ದರೂ ಇದರಲ್ಲಿ ರಾಮನ ಬದಲಿಗೆ ಕೇಶವನ ವಿಗ್ರಹ ಕಂಡು ಬರುತ್ತದೆ. ಗರ್ಭಗುಡಿಯ ದ್ವಾರಬಂಧವು ಸರಳವಾಗಿದ್ದು ಲಲಾಟಬಿಂಬದಲ್ಲಿ ಪೂರ್ಣ ಕುಂಭದ ಕೆತ್ತನೆಯು ಕಂಡು ಬಂದಿದೆ. (ಚಿ.ಸಂ. 164) ಈ ರೀತಿಯ ಕೆತ್ತನೆಗಳನ್ನು ಜೈನ ದೇವಾಲಯಗಳಲ್ಲಿ ಮತ್ತು ಕಲ್ಯಾಣಿ ಚಾಳುಕ್ಯರ ಪ್ರಾರಂಭದ ದೇವಾಲಯಗಳಲ್ಲಿ ಗುರುತಿಸಬಹುದು ಎಂದು ಷ.ಷೆಟ್ಟರ್‌ರವರು ಅಭಿಪ್ರಾಯಿಸುತ್ತಾರೆ.[125] ಗರ್ಭಗುಡಿಯ ನಂತರ ಸುಖನಾಸಿ ಭಾಗವಿದ್ದು ಇದರಲ್ಲಿ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ ಹಾಗೂ ಇದರ ದ್ವಾರಬಂಧವು ಸರಳವಾಗಿದ್ದು ಇದರ ಎರಡೂ ಪಾರ್ಶ್ವದಲ್ಲಿ ಜಾಲಾಂಧ್ರಗಳು ಹಾಗೂ ಇವುಗಳ ಕೆಳಭಾಗದಲ್ಲಿ ಚಾಮರಧಾರಿಣಿಯರ ಸಮೇತರಾಗಿರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಸುಖನಾಸಿ ದ್ವಾರದ ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳ ಕೆತ್ತನೆ ಕಂಡು ಬರುವುದಿಲ್ಲ.

**ನವರಂಗ:** ಸುಖನಾಸಿಯ ನಂತರ ನವರಂಗ ಭಾಗವಿದ್ದು ಇದರಲ್ಲಿ ನಾಲ್ಕು ಸ್ತಂಭಗಳು ಕಂಡು ಬರುತ್ತವೆ. ಇವು ಪೀಠ, ಚತುರಶ್ರವಾದ ದಿಂಡು, 16 ಕೋನ, 8 ಕೋನ, 16 ಕೋನ, 4 ಕೋನ, ಕಂಠ, ಚತುರಶ್ರ ಫಲಕ ಮತ್ತು ಮುಷ್ಠಿಬಂಧ ಬೋದಿಗೆಯನ್ನು ಹೊಂದಿವೆ.[126] (ಚಿ.ಸಂ. 165) ನವರಂಗದ ಭುವನೇಶ್ವರಿಗಳು ಸರಳ ಪದ್ಮದ ರಚನೆಯನ್ನು ಹೊಂದಿದ್ದು ಇದರ ಬಾಗಿಲುವಾಡವು ಸರಳವಾಗಿರುವುದರ ಜೊತೆಗೆ ಲಲಾಟಬಿಂಬದಲ್ಲಿ ಪೂರ್ಣಕುಂಭದ ಕೆತ್ತನೆ ಕಂಡು ಬರುತ್ತದೆ. ನವರಂಗದ ಮುಂಭಾಗದಲ್ಲಿ ಒಂದು ಚಿಕ್ಕ ಹಜಾರವಿದ್ದು ಇದರ ಮಧ್ಯಭಾಗದಲ್ಲಿ ಅಡ್ಡಪಲ್ಲಕ್ಕಿಯ ಮೇಲೆ ರಾಮ, ಲಕ್ಷ್ಮಣ ಮತ್ತು ಸೀತೆಯ ಉತ್ಸವ ಮೂರ್ತಿಗಳನ್ನು ಇಟ್ಟಿದ್ದಾರೆ. (ಚಿ.ಸಂ. 166) ಇದರ ಬಲಭಾಗದಲ್ಲಿ ಮರದಿಂದ ಕೂಡಿದ ತುಳಸೀರಾಮರ ಕಂಬವಿದ್ದು ಇದಕ್ಕೆ ಬೆಳ್ಳಿ ತಗಡಿನಿಂದ ಮಾಡಿದ ಹೊದಿಕೆಯನ್ನು ಹಾಕಲಾಗಿದೆ.

**ಮುಖಮಂಟಪ:** ಇದು 25x25 ಅಡಿ ಉದ್ದ ಅಗಲವನ್ನು ಹೊಂದಿದ್ದು, ಇದರಲ್ಲಿ 14 ಆಕರ್ಷಕವಾದ ಕಂಬಗಳು ಕಂಡು ಬರುತ್ತವೆ. ಈ ಕಂಬಗಳು ಪೀಠ, ಇದರ ಮೇಲೆ ಚತುರಶ್ರವಾದ ದಿಂಡು, ಹಲವು ವೃತ್ತಾಕಾರದ ಬಳೆಗಳು ಮತ್ತು ಕುಂಭಾಕಾರವನ್ನು ಹೊಂದಿರುವ ಶಲಾಕ, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ ಪೋತಿಕೆಯನ್ನು ಹೊಂದಿವೆ.ಮುಖಮಂಟಪದಲ್ಲಿ ಈ 14 ಸ್ವತಂತ್ರ ಕಂಬಗಳಲ್ಲದೇ ಭಿತ್ತಿಗೆ ಹೊಂದಿಕೊಂಡಂತೆ 16

ಭಿತ್ತಿ ಸ್ತಂಭಗಳು ಕಂಡು ಬರುತ್ತವೆ.[127] (ಚಿ.ಸಂ. 167) ಮುಖಮಂಟಪದ ನಂತರ 4 ಕಂಬಗಳ ಒಂದು ಹಜಾರವಿದೆ. ಬಹುಶಃ ಇದು ತೆರೆದ ಮುಖಮಂಟಪವಾಗಿದ್ದಂತೆ ತೋರುತ್ತದೆ. ಅದರೆ ಇತ್ತೀಚಿನ ದಿನಗಳಲ್ಲಿ ಇದರ ಎರಡೂ ಪಾರ್ಶ್ವ ಮತ್ತು ಮುಂಭಾಗದಲ್ಲಿ ಇಟ್ಟಿಗೆ ಮತ್ತು ಸಿಮೆಂಟ್‌ಅನ್ನು ಬಳಸಿ ಗೋಡೆಗಳನ್ನು ನಿರ್ಮಿಸಿದ್ದಾರೆ. ಇದರ ಮುಂಭಾಗದಲ್ಲಿ ಧ್ವಜಸ್ತಂಭವಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ಈ ದೇವಾಲಯದ ಅಧಿಷ್ಠಾನವು ಭಾಗಶಃ ಮುಚ್ಚಿಹೋಗಿದ್ದು ಇಂದು ಕೇವಲ ಒಂದು ಅಡಿಯಷ್ಟು ಮಾತ್ರ ಕಂಡು ಬರುತ್ತದೆ. ದೇವಾಲಯದ ಭಿತ್ತಿಯನ್ನು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಲಾಗಿದ್ದು, ಗರ್ಭಗುಡಿ ಮತ್ತು ಸುಖನಾಸಿ ಭಾಗದ ಹೊರ ಭಿತ್ತಿಯಲ್ಲಿ ಮಾತ್ರ ಅರೆಗಂಬಗಳ ಕೆತ್ತನೆ ಕಂಡು ಬರುತ್ತದೆ. (ಚಿ.ಸಂ. 168) ಉಳಿದಂತೆ ದೇವಾಲಯದ ಎಲ್ಲಾ ಭಿತ್ತಿಯು ಸರಳವಾಗಿದೆ. ಈ ದೇವಾಲಯದ ಭಿತ್ತಿ ಮತ್ತು ವಾಸ್ತುವಿನ್ಯಾಸವನ್ನು ನೋಡಿದಾಗ ಗರ್ಭಗುಡಿ ಮತ್ತು ಸುಖನಾಸಿ ಭಾಗವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದು, ಉಳಿದ ಭಾಗಗಳು ನಂತರದ ಕಾಲಘಟ್ಟಗಳಲ್ಲಿ ಸೇರ್ಪಡೆಯಾಗಿವೆ ಎಂದು ಅಭಿಪ್ರಾಯಿಸಬಹುದಾಗಿದೆ.

**ಶಿಖರ ಮತ್ತು ಕೈಪಿಡಿ ಗೋಡೆ**: ಶಿಖರವು ಕೂಟ, ಶಾಲಾ, ಪಂಜರಗಳಿಂದ ಕೂಡಿದ ಎರಡು ತಲಗಳನ್ನು ಹೊಂದಿದ್ದು, ಇದನ್ನು ಇತ್ತೀಚೆಗೆ ಹೊಸದಾಗಿ ನಿರ್ಮಿಸಲಾಗಿದೆ. ಶಿಖರದ ವಿವಿಧ ಭಾಗಗಳಲ್ಲಿ ಹನುಮಂತ, ಗರುಡ, ಹಯಗ್ರೀವ, ವೇಣುಗೋಪಾಲ, ಯತಿ–ಮುನಿಗಳು ಇನ್ನೂ ಮುಂತಾದ ಶಿಲ್ಪಗಳನ್ನು ನಿರ್ಮಿಸಿದ್ದಾರೆ. ಇದರ ಕೈಪಿಡಿ ಗೋಡೆಯನ್ನು ಸಹ ಸಿಮೆಂಟ್ ಮತ್ತು ಇಟ್ಟಿಗೆಯನ್ನು ಬಳಸಿ ಹೊಸದಾಗಿ ನಿರ್ಮಾಣ ಮಾಡಿದ್ದಾರೆ. (ಚಿ.ಸಂ. 169)

**ದ್ವಾರಮಂಟಪ**: ದೇವಾಲಯದ ಮುಂಭಾಗದಲ್ಲಿ ಗ್ರಾನೈಟ್ ಕಲ್ಲಿನಿಂದ ನಿರ್ಮಿಸಿರುವ 20 ಸ್ತಂಭಗಳುಳ್ಳ ದ್ವಾರಮಂಟಪವು ಕಂಡು ಬರುತ್ತದೆ (ಚಿ.ಸಂ. 170) ಇದರ ಕೈಪಿಡಿ ಗೋಡೆಯನ್ನು ಇಟ್ಟಿಗೆ ಮತ್ತು ಸಿಮೆಂಟ್‌ಅನ್ನು ಬಳಸಿ ನಿರ್ಮಿಸಲಾಗಿದ್ದು ಇದರ ನಾಲ್ಕು ಮೂಲೆಗಳಲ್ಲಿ ನಂದಿ ಶಿಲ್ಪಗಳನ್ನು ಪ್ರತಿಷ್ಠಾಪಿಸದ್ದಾರೆ ಹಾಗೂ ದ್ವಾರಮಂಟಪವನ್ನು ಪ್ರವೇಶಿಸಲು ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳನ್ನು ನಿರ್ಮಾಣ ಮಾಡಿದ್ದಾರೆ.

**ಯೋಗಾನರಸಿಂಹ ದೇವಾಲಯ–ಶಾಂತಿಗ್ರಾಮ**

ಈ ದೇವಾಲಯವು ಗ್ರಾಮದ ಉತ್ತರ ದಿಕ್ಕಿನಲ್ಲಿ ಒಂದು ಪ್ರಾಕಾರದೊಳಗೆ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. (ಚಿ.ಸಂ. 171) ಈ ದೇವಾಲಯದ ವಿವಿಧ ಭಾಗಗಳಲ್ಲಿ ಒಟ್ಟು ಆರು ಶಾಸನಗಳು ಕಂಡು ಬರುತ್ತವೆ. ಆದರೆ ಯಾವ ಶಾಸನವು ಈ ದೇವಾಲಯ ನಿರ್ಮಾಣದ ಕಾಲಮಾನವನ್ನು ಸೂಚಿಸುವುದಿಲ್ಲ. ಆದರೆ ಎರಡನೇ ಬಲ್ಲಾಳನ

ಆಳ್ವಿಕೆಯನ್ನು ಉಲ್ಲೇಖಿಸುವ ಕ್ರಿ.ಶ.1215ರ ಶಾಸನ[128] ಮತ್ತು ಇದೇ ಗ್ರಾಮದ ಇನ್ನೊಂದು ಶಾಸನ[129] ಈ ದೇವಾಲಯಕ್ಕೆ ದಾನ ನೀಡಿದ ಅಂಶಗಳನ್ನು ಮತ್ತು ಇದರ ನಿರ್ಮಾತೃ ಅಚಳಪ್ರಕಾಶಮುನಿ ಎಂಬುದನ್ನು ತಿಳಿಸುತ್ತವೆ. ಎರಡನೆಯ ನರಸಿಂಹನ ಆಳ್ವಿಕೆಯ ಕಾಲದ ಕ್ರಿ.ಶ.1227ರ ಶಾಸನವು[130] ಈ ದೇವಾಲಯಕ್ಕೆ ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ. ಇದೇ ದೇವಾಲಯದಲ್ಲಿ ಕಂಡು ಬರುವ ಮತ್ತೊಂದು ಶಾಸನವು[131] ವೀರನರಸಿಂಹನ ಆಳ್ವಿಕೆಯ ಕಾಲದಲ್ಲಿ ದಾನ ನೀಡಿದ ಅಂಶವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ವಿಷ್ಣುವರ್ಧನ ಪ್ರತಾಪ ಹೊಯ್ಸಳ ಭುಜಬಲ ವೀರನಾರಸಿಂಹ ಎಂದು ಹೆಸರಿಸಿರುವುದರಿಂದ ಈ ದೇವಾಲಯವು ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಅಭಿಪ್ರಾಯಿಬಹುದಾಗಿದೆ. ದೇವಾಲಯದ ನಿರ್ಮಾತೃ ಅಚಳಪ್ರಕಾಶನು ಕಾಶಿಯಿಂದ ಬಂದವನೂ ಪರಮಹಂಸರ ಶಿಷ್ಯನೂ ಆಗಿದ್ದನೆಂಬುದನ್ನು ಈ ಶಾಸನಗಳು ತಿಳಿಸುತ್ತವೆ. ದೇವಾಲಯವು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದ್ದು ಸುತ್ತಲೂ ಪ್ರಾಕಾರದ ಗೋಡೆ ಕಂಡು ಬರುತ್ತದೆ.

**ಗರ್ಭಗೃಹ**: ಇದು 7X7 ಅಡಿ ಉದ್ದ ಅಗಲವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಗರುಡ ಪೀಠದ ಮೇಲೆ ಯೋಗ ಮುದ್ರೆಯಲ್ಲಿರುವ ನರಸಿಂಹನ ಶಿಲ್ಪವಿದೆ.[132] ಇದನ್ನು ವರದ ನರಸಿಂಹ ಎಂತಲೂ ಶಾಸನಗಳು ಉಲ್ಲೇಖಿಸಿವೆ. ಗರ್ಭಗುಡಿಯು ಸರಳ ಪದ್ಮದ ರಚನೆಯಿರುವ ಭುವನೇಶ್ವರಿಯನ್ನು ಹೊಂದಿದೆ.

**ಸುಖನಾಸಿ**: ಗರ್ಭಗೃಹದ ನಂತರ ಸುಖನಾಸಿ ಭಾಗವಿದ್ದು 7X7 ಅಡಿ ವಿಸ್ತೀರ್ಣವನ್ನು ಮತ್ತು ಸರಳ ಪದ್ಮದ ರಚನೆಯಿರುವ ಭುವನೇಶ್ವರಿಯನ್ನು ಹೊಂದಿದೆ. ಇದರ ಬಾಗಿಲುವಾಡವು ಪಂಚಶಾಖೆಗಳನ್ನು ಒಳಗೊಂಡಿದ್ದು ಇದರ ಲಲಾಟಬಿಂಬದಲ್ಲಿ ನರಸಿಂಹನ ಶಿಲ್ಪವಿದೆ.

**ನವರಂಗ**: ಇದು ಒಂಭತ್ತು ಅಂಕಣಗಳನ್ನು ಮತ್ತು ನಾಲ್ಕು ಶ್ರೀಕಾರ ಸ್ತಂಭಗಳನ್ನು ಹೊಂದಿದ್ದು ಇವು ಪೀಠ, ಚತುರಶ್ರವಾದ ದಿಂಡು, ಘಂಟಾಕಾರದ ದಿಂಡು, ಕಂಠ, ಮಂಡಿ ಫಲಕ ಮತ್ತು ಬೋದಿಗೆಯನ್ನು ಹೊಂದಿವೆ. ನವರಂಗದ ಮಧ್ಯದ ಅಂಕಣವು ನವಪದ್ಮ ಮಂಡಲ ವಿತಾನವನ್ನು ಹೊಂದಿದ್ದರೆ ಉಳಿದ ವಿತಾನಗಳು ಸರಳ ಪದ್ಮದ ರಚನೆಯಿರುವ ನಾಭಿಚ್ಛಂಧ ಮಾದರಿಯಿಂದ ಕೂಡಿವೆ.[133]

**ಮುಖಮಂಟಪ**: ಇದು 12 ಸ್ತಂಭಗಳಿಂದ ಕೂಡಿದ್ದು, ಮುಖಮಂಟಪದ ಮುಂದಿನ ಎರಡು ಸ್ತಂಭಗಳನ್ನು ಬಿಟ್ಟು ಉಳಿದವುಗಳು ವಿಜಯನಗರ ಅರಸರ ಕಾಲದಲ್ಲಿ ಸೇರಿಸಲ್ಪಟ್ಟಿವೆ. ನವರಂಗ

ದ್ವಾರದ ಮುಂದಿನ ಅಂಕಣದ ವಿತಾನವು ಅತ್ಯಾಕರ್ಷಕವಾಗಿದ್ದು ಇದರ ಮಧ್ಯಭಾಗದಲ್ಲಿ ಲಕ್ಷ್ಮೀನರಸಿಂಹನ ಶಿಲ್ಪವನ್ನು ಮತ್ತು ಇದರ ಸುತ್ತಲೂ ಇತರ 8 ನರಸಿಂಹ ಶಿಲ್ಪಗಳನ್ನು ಕೆತ್ತಿದ್ದಾರೆ.

**ಅಧಿಷ್ಠಾನ**: ಇದು ಮೂರು ಅಡಿ ಎತ್ತರವನನು ಹೊಂದಿದ್ದು, ಇದರ ಉಪಾನ ಮತ್ತು ಜಗತಿ ಭಾಗವು ಭೂಮಿಯಲ್ಲಿ ಮುಚ್ಚಿ ಹೋಗಿದೆ. ಪ್ರಸ್ತುತ ಪದ್ಮ, ತ್ರಿಪಟ್ಟ ಕುಮುದ, ಗಳ, ದಂತಪಂಕ್ತಿ ಮತ್ತು ಪ್ರತಿ ಭಾಗಗಳು ಕಂಡು ಬರುತ್ತವೆ. ಅಧಿಷ್ಠಾನದ ಮೇಲ್ಭಾಗದ ಎರಡು ಪಟ್ಟಿಕೆಗಳಲ್ಲಿ ಬಳ್ಳಿ ಸುರುಳಿಗಳ ಕೆತ್ತನೆ ಮಾಡಿರುವುದನ್ನು ನಾವು ಗುರುತಿಸಬಹುದಾಗಿದೆ. (ಚಿ.ಸಂ. 172) ಕೆಲವು ವರ್ಷಗಳ ಹಿಂದೆ ಗರ್ಭಗೃಹ ಮತ್ತು ಸುಖನಾಸಿಯ ಅಧಿಷ್ಠಾನದ ತಳಭಾಗದಲ್ಲಿ ಆನೆ ಸಾಲುಗಳ ಶಿಲ್ಪ ಪಟ್ಟಿಕೆ ಇತ್ತೆಂದು ದಾಖಲೆಗಳು ತಿಳಿಸುತ್ತವೆಯಾದರೂ ಇಂದು ಈ ಶಿಲ್ಪಪಟ್ಟಿಕೆ ಕಂಡು ಬರುವುದಿಲ್ಲ.[134]

**ಭಿತ್ತಿ ಮತ್ತು ಪ್ರಸ್ತರ**: ಅಧಿಷ್ಠಾನದ ನಂತರದ ಭಿತ್ತಿಯು ಯಾವುದೇ ಶಿಲ್ಪಾಲಂಕರಣಗಳಿಂದ ಕೂಡಿರದೇ ಸರಳವಾದ ಬ್ರಹ್ಮಕಾಂತ ಭಿತ್ತಿ ಪಾದಗಳನ್ನು ಹೊಂದಿದ್ದು, (ಚಿ.ಸಂ. 173) ಇದರ ನಂತರದ ಪ್ರಸ್ತರದಲ್ಲಿ ಉತ್ತರ, ವಲ್ಲಭಿ ಮತ್ತು ಕಪೋತ ಭಾಗಗಳು ಕಂಡು ಬರುತ್ತವೆ.

**ಶಿಖರ**: ಇದು 9 ತಲಗಳನ್ನು ಅಥವಾ 9 ಕಪೋತಗಳನ್ನು ಹೊಂದಿರುವ ಫಾಂಸಾನ ಶೈಲಿಯ ಶಿಖರವಾಗಿದೆ. (ಚಿ.ಸಂ. 174) ಈ 9 ತಲಗಳ ನಂತರ ವೇದಿ, ಇದರ ಮೇಲೆ ಚತುರಶ್ರವಾದ ಅಧೋಪದ್ಮ ಮತ್ತು ಕಳಸ ಕಂಡು ಬರುತ್ತದೆ.

**ಪ್ರಾಕಾರ**: ಈ ದೇವಾಲಯವು ವಿಶಾಲವಾದ ಪ್ರಾಕಾರವನ್ನು ಹೊಂದಿದ್ದು ಇಡೀ ಪ್ರಾಕಾರಕ್ಕೆ ಮೇಲ್ಭಾಗದಲ್ಲಿ ಕಬ್ಬಿಣದ ತಗಡುಗಳ ಛಾವಣಿಯನ್ನು ಅಳವಡಿಸಲಾಗಿದೆ. ಮುಖಮಂಟಪದ ಮುಂಭಾಗದಲ್ಲಿ ಗರುಡ ಸ್ತಂಭ, ಸುಖನಾಸಿಯ ಹೊರಭಾಗದ ಭಿತ್ತಿಯ ಬಳಿ ಮೂರು ಶಾಸನ ಕಲ್ಲುಗಳು ಮತ್ತು ಪ್ರಾಕಾರದ ಪೂರ್ವದಿಕ್ಕಿನ ಗೋಡೆಗೆ ಹೊಂದಿಕೊಂಡಂತೆ ಮೂರು ತಲಗಳನ್ನು ಹೊಂದಿರುವ ಬೃಹತ್ ದ್ವಾರಗೋಪುರವಿದೆ. (ಚಿ.ಸಂ. 175)

**ಕೀರ್ತಿನಾರಾಯಣ–ಹೆರಗು**

ಇದು ಹೆರಗು ಗ್ರಾಮದ ಆಗ್ನೇಯ ದಿಕ್ಕಿನಲ್ಲಿ ರಸ್ತೆ ಬದಿಯಲ್ಲಿ ಎತ್ತರವಾದ ಪ್ರದೇಶ ಮೇಲೆ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. (ಚಿ.ಸಂ. 176) ಇದನ್ನು ಎರಡನೇ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1217ರಲ್ಲಿ ಜಯಭಟ್ಟಯ್ಯ ನಾಯಕನು ನಿರ್ಮಿಸಿ ಅರಸನಿಂದ

ಆನೆಹಳ್ಳಿ ಎಂಬ ಗ್ರಾಮವನ್ನು ದನವನ್ನಾಗಿ ಪಡೆದನೆಂಬುದು ಇಲ್ಲಿನ ಶಾಸನದಿಂದ[135] ತಿಳಿದು ಬರುತ್ತದೆ. ಈ ಗ್ರಾಮದ ಕ್ರಿ.ಶ.1218ರ ಶಾಸನವು[136] ಜೈತ ನಾರಾಯಣ ಎಂಬ ದೇವಾಲಯದ ಪ್ರತಿಷ್ಠಾಪನೆಯನ್ನು ತಿಳಿಸುತ್ತದೆ. ಈ ಗ್ರಾಮದಲ್ಲಿ ಜೈತ ನಾರಾಯಣ ಎಂಬ ಹೆಸರಿನ ಬೇರೆ ಯಾವುದೇ ದೇವಾಲಯ ಕಂಡು ಬರುವುದಿಲ್ಲವಾದ್ದರಿಂದ ಜೈತ ನಾರಾಯಣ ದೇವಾಲಯವೇ ಪ್ರಸ್ತುತ ಕೀರ್ತಿನಾರಾಯಣ ದೇವಾಲಯವಾಗಿದೆ ಎಂಬುದಾಗಿ ತಿಳಿಯುತ್ತದೆ. ಇದು 1998ನೇ ಇಸವಿಗೂ ಮುಂಚೆ ಶಿಥಿಲಾವಸ್ಥೆಯಲ್ಲಿದ್ದು 2002ನೇ ಇಸವಿಯಲ್ಲಿ ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯು ಇದನ್ನು ಜೀರ್ಣೋದ್ಧಾರಗೊಳಿಸಿದೆ. ಇದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪದ ಭಾಗಗಳನ್ನು ಹೊಂದಿದೆ.

**ಗರ್ಭಗೃಹ:** ಇದು 7X7 ಅಡಿ ಉದ್ದ-ಅಗಲವನ್ನು ಹೊಂದಿದ್ದು, ಇದರ ಮಧ್ಯ ಭಾಗದಲ್ಲಿ 1.5 ಅಡಿ ಎತ್ತರದ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ 5 ಅಡಿ ಎತ್ತರದ ಕೀರ್ತಿನಾರಾಯಣ ವಿಗ್ರಹವಿದೆ. ಬಲ ಹಿಂಬದಿಯ ಕೈಯಲ್ಲಿ ಪದ್ಮ, ಬಲ ಮುಂಬದಿಯ ಕೈಯಲ್ಲಿ ಶಂಖ, ಎಡ ಹಿಂಬದಿಯ ಕೈಯಲ್ಲಿ ಗದಾ ಮತ್ತು ಎಡ ಮುಂಬದಿಯ ಕೈಯಲ್ಲಿ ಚಕ್ರವನ್ನು ಹಿಡಿದಿರುವ ಶಿಲ್ಪವು ಸರ್ವಾಭರಣಗಳಿಂದ ಅಲಂಕೃತವಾಗಿದೆ. ಶಿಲ್ಪದ ಹಿಂಬದಿಯಲ್ಲಿ ಆಕರ್ಷಕವಾದ ಪ್ರಭಾವಳಿಯಿದ್ದು ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಪಡಿ ಮೂಡಿಸಲಾಗಿದೆ. ನಾರಾಯಣ ಶಿಲ್ಪದ ಎರಡೂ ಬದಿಯಲ್ಲಿ ಭೂದೇವಿ ಮತ್ತು ಶ್ರೀದೇವಿಯರ ಶಿಲ್ಪಗಳನ್ನೂ ಸಹ ಕೆತ್ತಲಾಗಿದೆ.[137] ಗರ್ಭಗೃಹದ ಭುವನೇಶ್ವರಿಯು ಸರಳ ಪದ್ಮದ ರಚನೆಯನ್ನು ಹೊಂದಿದ್ದು, ಇದರ ಬಾಗಿಲುವಾಡವು ಯಾವುದೇ ಅಲಂಕರಣಗಳನ್ನು ಹೊಂದಿರುವುದಿಲ್ಲ. ಲಲಾಟಬಿಂಬದಲ್ಲಿ ಇಬ್ಬರು ಚಾಮರಧಾರಿಣಿಯರ ನಡುವೆ ಇರುವ ನಾರಾಯಣನ ಶಿಲ್ಪವನ್ನು ಕೆತ್ತಲಾಗಿದ್ದು ದ್ವಾರದ ಎರಡೂ ಪಾರ್ಶ್ವದಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರ ಶಿಲ್ಪಗಳಿವೆ. (ಚಿ.ಸಂ. 177)

**ಸುಖನಾಸಿ:** ಗರ್ಭಗೃಹದ ನಂತರ ಸುಖನಾಸಿ ಭಾಗವಿದ್ದು ಇದು 7X7 ಅಡಿ ವಿಸ್ತೀರ್ಣವನ್ನು ಹೊಂದಿದೆ. ಇದರ ಭುವನೇಶ್ವರಿಯು ನಾಭಿಚ್ಛಂಧ ಮಾದರಿಯದ್ದಾಗಿದ್ದು ಇದರ ಮಧ್ಯಭಾಗದಲ್ಲಿ ಸರಳ ಪದ್ಮದ ರಚನೆಯಿರುವ ಶಿಲಾಫಲಕವಿದೆ. ಸುಖನಾಸಿಯ ದ್ವಾರಬಂಧವು ಸರಳವಾಗಿದ್ದು ಇದರ ಎರಡು ಪಾರ್ಶ್ವದಲ್ಲಿ ಜಾಲಾಂಧ್ರಗಳಿವೆ ಮತ್ತು ಲಲಾಟಬಿಂಬದಲ್ಲಿ ಕಾಳಿಂಗ ಮರ್ಧನ ಶಿಲ್ಪವಿದೆ. ಈ ಶಿಲ್ಪದ ಎರಡು ಬದಿಯಲ್ಲಿ ಇಳಿ ಬಿದ್ದಂತೆ ಗುಬುಟುಗಳನ್ನು ನಿರ್ಮಿಸಲಾಗಿದ್ದು, ದ್ವಾರಬಂಧದ ಮೇಲ್ಭಾಗದಲ್ಲಿ 7 ಚಿಕ್ಕ ಚಿಕ್ಕ ಶಿಖರದ ಮಾದರಿಗಳು ಕಂಡು ಬರುತ್ತವೆ. (ಚಿ.ಸಂ.

178) ದ್ವಾರದ ಎರಡೂ ಪಾರ್ಶ್ವದಲ್ಲಿ ಪರಿಚಾರಕಿಯರೊಂದಿಗಿರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳವೆ.

**ನವರಂಗ**: ಇದು 15X15 ಅಡಿ ಉದ್ದ-ಅಗಲವನ್ನು ಹೊಂದಿದ್ದು ನಾಲ್ಕು ಶ್ರೀಕಾರ ಸ್ತಂಭಗಳನ್ನು ಒಳಗೊಂಡಿದೆ. (ಚಿ.ಸಂ. 179) ಇವು ಪೀಠ ಚತುರಶ್ರವಾದ ದಿಂಡು, ಘಂಟಾಕಾರವನ್ನು ಹೊಂದಿರುವ ಶಲಾಕ, ಕಂಠ, ಫಲಕ ಮತ್ತು ಮುಷ್ಠಿಬಂಧ ಪೋತಿಕೆಯನ್ನು ಹೊಂದಿವೆ. ಬೋದಿಗೆಯಲ್ಲಿಯೂ ಸಹ ಇಳಬಿಟ್ಟಂತಿರುವ ಗುಬುಟುಗಳ ನಿರ್ಮಾಣವನ್ನು ಗುರುತಿಸಬಹುದು. ನವರಂಗವು ಹೆಸರೇ ಸೂಚಿಸುವಂತೆ 9 ಅಂಕಣಗಳನ್ನು ಹೊಂದಿದ್ದು ಪ್ರತಿ ಅಂಕಣದ ಮೇಲ್ಭಾಗದಲ್ಲಿ ಭುವನೇಶ್ವರಿಗಳು ಕಂಡು ಬರುತ್ತವೆ. ಮಧ್ಯದ ಅಂಕಣದ ಭುವನೇಶ್ವರಿಯು ಎರಡು ಹಂತಗಳಿಂದ ಕೂಡಿದ್ದು ಮೊದಲು ಚೌಕ, ನಂತರ ಅಷ್ಟ, ಪುನಃ ಚೌಕಾಕಾರವನ್ನು ಹಾಗೂ ಮಧ್ಯದ ಶಿಲಾಫಲಕದಲ್ಲಿ ಸರಳ ಪದ್ಮದ ರಚನೆಯನ್ನು ಹೊಂದಿದೆ. ಉಳಿದ ಭುವನೇಶ್ವರಿಗಳು ಒಂದು ಹಂತವನ್ನು ಹಾಗೂ ಕೇಂದ್ರ ಭಾಗದಲ್ಲಿ ಶತಾತಪತ್ರ ಪದ್ಮಶಿಲಾ ಫಲಕವನ್ನು ಹೊಂದಿವೆ. ನವರಂಗದ ಎಡಭಾಗದಲ್ಲಿ ಭಾಷ್ಯಕರ, ನಮ್ಮಾಳ್ವರ್ ಅವರ ಶಿಲ್ಪಗಳು ಮತ್ತು ಬಲಭಾಗದಲ್ಲಿ ಗಣಪತಿಯ ಶಿಲ್ಪವಿವೆ. ನವರಂಗದ ಬಾಗಿಲುವಾಡವು ಸರಳವಾಗಿದ್ದು ಲಲಾಟಬಿಂಬದಲ್ಲಿ ವೇಣುಗೋಪಾಲನ ಶಿಲ್ಪವಿದೆ. ದ್ವಾರದ ಎರಡೂ ಬದಿಯಲ್ಲಿ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರು ಶಂಖ, ಚಕ್ರ, ಗದಾಧಾರಿಗಳಾಗಿ ನಿಂತಿದ್ದಾರೆ.

**ಮುಖಮಂಟಪ**: ಇದು ಎರಡು ಸ್ತಂಭಗಳಿಂದ ಕೂಡಿದ್ದು ಒಂದು ಅಂಕರಣದಷ್ಟು ವಿಸ್ತಾರವನ್ನು ಹೊಂದಿದೆ. (ಚಿ.ಸಂ. 180) ಈ ಸ್ತಂಭಗಳು ವೃತ್ತಾಕಾರದ ದಿಂಡು, ಕಂಠ, ಫಲಕ ಮತ್ತು ಆಧಾರ ಬೋದಿಗೆಯನ್ನು ಹೊಂದಿವೆ. ಇದರ ಭುವನೇಶ್ವರಿಯು ಎರಡು ಹಂತಗಳನ್ನು ಹೊಂದಿರುವ ನಾಭಿಚ್ಛಂಧ ಮಾದರಿಯದ್ದಾಗಿದ್ದು, ಕೇಂದ್ರ ಭಾಗದಲ್ಲಿ ಪದ್ಮಕೇಸರವನ್ನು ಕೆತ್ತಲಾಗಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ದೇವಾಲಯವು 4 ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದ್ದು ಇದರಲ್ಲಿ ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ, ಮಹಾಪಟ್ಟಿ, ದಂತಪಂಕ್ತಿ, ಪಟ್ಟಿಕಾ ಮತ್ತು ವೇದಿ ಭಾಗಗಳಿದ್ದು ಇದನ್ನು ಪಾದಬಂಧ ಅಧಿಷ್ಠಾನವೆಂದು ಕರೆಯಲಾಗಿದೆ.[138] ಅಧಿಷ್ಠಾನದ ನಂತರ ಭಿತ್ತಿ ಭಾಗವಿದ್ದು, ಇದು ಯಾವುದೇ ಶಿಲ್ಪಾಲಂಕರಣಗಳಿಂದ ಕೂಡಿರದೇ ಕೇವಲ ಬ್ರಹ್ಮಕಾಂತ ಭಿತ್ತಿಪಾದಗಳ ನಿರ್ಮಾಣದೊಂದಿಗೆ ಸರಳವಾಗಿದೆ. (ಚಿ.ಸಂ. 181) ಭಿತ್ತಿಯ ನಂತರ ಉತ್ತರ, ವಲ್ಲಭಿ ಮತ್ತು ಕಪೋತ ಭಾಗಗಳವೆ.

**ಶಿಖರ**: ಇದು ೨ ತಲಗಳನ್ನು (ಕಪೋತಗಳು) ಹೊಂದಿದ್ದು ಇದರ ಮೇಲೆ ವೇದಿ ನಂತರ ಬ್ರಹ್ಮಕಾಂತ ಮಾದರಿಯ ಅದೋಪದ್ಮ ಹಾಗೂ ಕಳಸವು ಕಂಡು ಬರುತ್ತದೆ. ಈ ಮಾದರಿಯ ಶಿಖರಗಳನ್ನು ಫಾಂಸಾನ ಶೈಲಿಯ ಶಿಖರಗಳು ಎಂದು ಕರೆಯಲಾಗಿದೆ.[139] (ಚಿ.ಸಂ. 182) ಈ ಶೈಲಿಯ ಶಿಖರಗಳನ್ನು ನಾವು ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯ, ಗೊರೂರಿನ ತ್ರಿಕೂಟೇಶ್ವರ ದೇವಾಲಯ ಮತ್ತು ಹರಿಹರಪುರದ ಹರಿಹರೇಶ್ವರ ದೇವಾಲಯಗಳಲ್ಲಿ ನೋಡಬಹುದು. ಶಿಖರದ ಅಂತಿಮ ಭಾಗವಾದ ಕಳಸವು ಈ ದೇವಾಲಯದಲ್ಲಿ ಅತ್ಯಂತ ಆಕರ್ಷಕವಾಗಿ ಮೂಡಿ ಬಂದಿದೆ.[140] ಶಿಖರದ ಮುಂಭಾಗದಲ್ಲಿ ಶಾಲಾಕಾರದ ಸುಖನಾಸವಿದ್ದು ಇದರ ಮುಂದಿನ ಫಲಕದಲ್ಲಿ ಆಕರ್ಷಕವಾದ ಗರುಡ ಶಿಲ್ಪವನ್ನು ಚಿತ್ರಿಸಲಾಗಿದೆ. ಮುಖಮಂಟಪದ ಮುಂದೆ ಲೋಹದಿಂದ ಮಾಡಿದ ಗರುಡ ಸ್ತಂಭವಿದ್ದು, ದೇವಾಲಯದ ಹಿಂಭಾಗದಲ್ಲಿ ಚಿಕ್ಕ ದ್ವಾರ ಮಂಟಪವಿದೆ. ಶಿಲ್ಪಾಲಂಕರಣಗಳು ಇಲ್ಲದಿದ್ದರೂ ಕೆಲವು ಅಂಶಗಳಿಂದ ಆಕರ್ಷಕವಾಗಿರುವ ಈ ದೇವಾಲಯವನ್ನು ಪ್ರಸ್ತುತ ಕರ್ನಾಟಕ ಪ್ರಾಚ್ಯವಸ್ತು ಪರಂಪರೆ ಇಲಾಖೆಯು ಸಂರಕ್ಷಿಸುತ್ತಿದೆ.

**ಚನ್ನಕೇಶವ ದೇವಾಲಯ–ಮೊಸಳೆ**

ಇದು ನಾಗೇಶ್ವರ ದೇವಾಲಯದ ಪಕ್ಕದಲ್ಲಿ ಅಂದರೆ ಎಡಪಾರ್ಶ್ವದಲ್ಲಿ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. ಈ ದೇವಾಲಯವೂ ಸಹ ನಾಗೇಶ್ವರ ದೇವಾಲಯದ ರೀತಿಯಲ್ಲೇ ವಾಸ್ತುವಿನ್ಯಾಸ ಮತ್ತು ಅಳತೆಯನ್ನು ಹೊಂದಿದ್ದು ಸೋಪುಗಲ್ಲಿನಿಂದ ನಿರ್ಮಾಣವಾಗಿದೆ. (ಚಿ.ಸಂ. 183) ಇದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ.

**ಗರ್ಭಗೃಹ**: ಗರ್ಭಗೃಹವು ಚೌಕಾಕಾರದಲ್ಲಿದ್ದು ಇದರ ಮಧ್ಯಭಾಗದಲ್ಲಿ ಒಂದೂವರೆ ಅಡಿ ಎತ್ತರದ ಗರುಡ ಪೀಠದ ಮೇಲೆ 6 ಅಡಿ ಎತ್ತರದ ಸುಂದರವಾದ, ಚತುರ್ಭುಜವನ್ನು ಹೊಂದಿರುವ ಕೇಶವ ಮೂರ್ತಿಯಿದೆ. ಚನ್ನಕೇಶವ ಎಂಬ ಹೆಸರಿಗೆ ತಕ್ಕಂತೆ ಅನ್ವರ್ಥಕವಾದಂತಿರುವ ಈ ಶಿಲ್ಪವು ಬಲ ಹಿಂದಿನ ಕೈಯಲ್ಲಿ ಶಂಖ, ಎಡ ಹಿಂದಿನ ಕೈಯಲ್ಲಿ ಚಕ್ರ, ಎಡ ಮುಂದಿನ ಕೈಯಲ್ಲಿ ಗದಾ ಮತ್ತು ಬಲ ಮುಂದಿನ ಕೈಯಲ್ಲಿ ಪದ್ಮವನ್ನು ಹಿಡಿದು ಸರ್ವಾಭರಣಗಳಿಂದ ಅಲಂಕೃತವಾಗಿದೆ. ಈ ಶಿಲ್ಪವು ಆಕರ್ಷಕವಾದ ಪ್ರಭಾವಳಿಯನ್ನು ಹೊಂದಿದ್ದು, ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕಂಡರಿಸಲಾಗಿದೆ.[141] ಕೇಶವನ ಕಿರೀಟದ ಮೇಲ್ಭಾಗದಲ್ಲಿ ಅಂದರೆ ಗರ್ಭಗೃಹದ ಛಾವಣಿಯಲ್ಲಿ ಮಗುಚಿದ ಕಮಲದ ರೀತಿಯ

ಭುವನೇಶ್ವರಿಯನ್ನು ಕಾಣಬಹುದು. ಗರ್ಭಗೃಹದ ದ್ವಾರವು ವಜ್ರ, ವಲ್ಲಿ, ಸ್ತಂಭ ಮತ್ತು ವಲ್ಲಿ ಎಂಬ ಚತುಶಾಖೆಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಈ ಶಿಲ್ಪದ ಎರಡೂ ಪಾರ್ಶ್ವದಲ್ಲಿ ಇಳಿಬಿಟ್ಟಂತೆ ಗುಬುಟುಗಳ ನಿರ್ಮಾಣವನ್ನು ಗುರುತಿಸಬಹುದು. ದ್ವಾರಬಂಧದ ಮೇಲ್ಭಾಗದಲ್ಲಿ ಚಿಕ್ಕ ಚಿಕ್ಕ ಶಿಖರದ ಮಾದರಿಗಳನ್ನು ನಿರ್ಮಿಸಿದ್ದು, ದ್ವಾರದ ಎರಡೂ ಪಾರ್ಶ್ವದಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರ ಶಿಲ್ಪಗಳಿವೆ. (ಚಿ.ಸಂ. 184)

**ಸುಖನಾಸಿ:** ಗರ್ಭಗೃಹದ ನಂತರ ಸುಖನಾಸಿ ಭಾಗವಿದ್ದು ಇದರ ಭುವನೇಶ್ವರಿಯು ಅತ್ಯಾಕರ್ಷಕವಾಗಿ ಮೂಡಿ ಬಂದಿರುತ್ತದೆ. ಇದು ಅಷ್ಟಕೋನದ ದಿಂಡುಗಳ ನಡುವೆ ಚತುರಶ್ರವಾದ ಶಿಲಾಫಲಕವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಉಗ್ರನರಸಿಂಹನ ಶಿಲ್ಪವನ್ನು ಮತ್ತು ಸುತ್ತಲೂ ಮೃದಂಗ, ಕೊಳಲು ಇನ್ನಿತರ ವಾದ್ಯಗಳನ್ನು ನುಡಿಸುತ್ತಿರುವ ವಾದ್ಯವೃಂದದವರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ವಿತಾನದಲ್ಲಿ ಕೀರ್ತಿಮುಖ ಮತ್ತು ಶಿಲಾಮೊಗ್ಗುಗಳನ್ನು ಸಹ ಅಲಂಕರಣದ ಭಾಗವಾಗಿ ನಿರ್ಮಿಸಿರುವುದನ್ನು ಗುರುತಿಸಬಹುದು. (ಚಿ.ಸಂ. 185) ಸುಖನಾಸಿಯ ದ್ವಾರಬಂಧವು ಆಕರ್ಷಕವಾಗಿದ್ದು ಇದರ ಎರಡೂ ಪಾರ್ಶ್ವದಲ್ಲಿ ಜಾಲಾಂಧ್ರಗಳನ್ನು ನಿರ್ಮಿಸಲಾಗಿದ್ದು, ದ್ವಾರಬಂಧದ ಮೇಲ್ಭಾಗದಲ್ಲಿ ಮಕರ ತೋರಣಗಳ ನಡುವೆ ಕುಳಿತಿರುವ ವಿಷ್ಣುವಿನ ಶಿಲ್ಪವನ್ನು ಕೆತ್ತಲಾಗಿದೆ. ಸುಖನಾಸಿ ದ್ವಾರದ ಎರಡೂ ಪಾರ್ಶ್ವದಲ್ಲಿ ದ್ವಾರಪಾಲಕರ ಬದಲಿಗೆ ಶಂಖನಾದವನ್ನು ಮೊಳಗಿಸುತ್ತಿರುವಂತಿರುವ ಬಾಲಕರ ಶಿಲ್ಪಗಳನ್ನು ಮತ್ತು ಚಾಮರಧಾರಿಣಿಯರ ಶಿಲ್ಪಗಳನ್ನು ಆಕರ್ಷಕವಾಗಿ ಕಂಡರಿಸಲಾಗಿದೆ.[142] (ಚಿ.ಸಂ.186) ಈ ಶಿಲ್ಪಗಳ ಪಕ್ಕದಲ್ಲಿ ಕಳಸ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ಎರಡು ಸ್ತ್ರೀ ಶಿಲ್ಪಗಳು ಕಂಡು ಬರುತ್ತವೆ.

**ನವರಂಗ:** ಇದು 20X20 ಅಡಿ ಉದ್ದ-ಅಗಲವನ್ನು ಮತ್ತು ಒಂಭತ್ತು ಅಂಕಣಗಳನ್ನು ಹೊಂದಿದ್ದು (ಚಿ.ಸಂ.187) ಪ್ರತಿಯೊಂದು ಅಂಕಣದ ಮೇಲ್ಭಾಗದಲ್ಲಿ ಆಕರ್ಷಕವಾದ ಭುವನೇಶ್ವರಿಗಳನ್ನು ಕೆತ್ತಲಾಗಿದೆ. ನವರಂಗವು ನಾಲ್ಕು ಶ್ರೀಕಾರ ಸ್ತಂಭಗಳಿಂದ ಕೂಡಿದ್ದು ಇವುಗಳನ್ನು ತಿರುಗು ಯಂತ್ರದ ಸಹಾಯದಿಂದ ನಿರ್ಮಿಸಲಾಗಿದ್ದು ಇವು ಪೀಠ, ಚತುರಶ್ರವಾದ ದಿಂಡು ಘಂಟಾಕಾರದ ದಿಂಡು, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ ಪೋತಿಕೆಯನ್ನು ಹೊಂದಿವೆ. ಕಂಠ ಮತ್ತು ಫಲಕದ ಭಾಗದಲ್ಲಿ ಸೂಕ್ಷ್ಮ ಮಣಿಮಾಲೆಗಳ ರೀತಿಯ ಕೆತ್ತನೆಯನ್ನು ಮಾಡಿರುವುದು ಸಹ ಗೋಚರಿಸುತ್ತದೆ. ನವರಂಗದಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ಆರು ದೇವಕೋಷ್ಠಗಳನ್ನು ನಿರ್ಮಿಸಲಾಗಿದ್ದು ಅವುಗಳನ್ನು ಪ್ರದಕ್ಷಿಣಾ ಕ್ರಮದಲ್ಲಿ ಈ ರೀತಿ

ಹೆಸರಿಸಬಹುದಾಗಿದೆ. ಮೊದಲನೇ ದೇವಕೋಷ್ಠದಲ್ಲಿ ಲಕ್ಷ್ಮೀನಾರಾಯಣ ಶಿಲ್ಪವಿದ್ದು, ಇದರಲ್ಲಿ ನಾರಾಯಣನು ಸುಖಾಸನದಲ್ಲಿ ಕುಳಿತಿದ್ದು ಈತನ ಎಡ ತೊಡೆಯ ಮೇಲೆ ಲಕ್ಷ್ಮಿಯು ಆಸೀನಳಾಗಿರುವಂತೆ ಕೆತ್ತಲಾಗಿದೆ. (ಚಿ.ಸಂ.188) ಈ ಶಿಲ್ಪದಲ್ಲಿ ನಾರಾಯಣನು ಬಲ ಮುಂಬದಿಯ ಕೈಯಲ್ಲಿ ಚಕ್ರ, ಎಡ ಹಿಂಬದಿಯ ಕೈಯಲ್ಲಿ ಶಂಖವನ್ನು ಹಿಡಿದಿದ್ದು ಎಡ ಮುಂಬದಿಯ ಕೈಯನ್ನು ಲಕ್ಷ್ಮಿಯ ಹೆಗಲಿನ ಮೇಲೆ ಇಳಿಬಿಟ್ಟಿದ್ದಾನೆ. ಈತನ ಬಲ ಹಿಂಬದಿಯ ಕೈ ಭಗ್ನವಾಗಿದೆ. ಲಕ್ಷ್ಮಿಯು ಬಲಗೈಯಲ್ಲಿ ನಾರಾಯಣನ ಸೊಂಟ ಮತ್ತು ಎಡಗೈಯಲ್ಲಿ ಪದ್ಮವನ್ನು ಹಿಡಿದು ನಾರಾಯಣನ ಮುಖವನ್ನೇ ನೋಡುತ್ತಿರುವಂತೆ ಈ ಶಿಲ್ಪದಲ್ಲಿ ಕಂಡರಿಸಲಾಗಿದೆ. ಸರ್ವಾಭರಣಗಳನ್ನು ಧರಿಸಿರುವ ಲಕ್ಷ್ಮೀನಾರಾಯಣ ಶಿಲ್ಪದ ಹಿಂದೆ ಪ್ರಭಾವಳಿಯನ್ನು ಹಾಗೂ ಈ ಕೋಷ್ಠದ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ಶಿಖರಾಕೃತಿಯನ್ನು ನಿರ್ಮಿಸಲಾಗಿದೆ. ಎರಡನೇ ಕೋಷ್ಠದಲ್ಲಿ ಸರಸ್ವತಿಯ ಶಿಲ್ಪವಿದ್ದು, ಈಕೆಯು ಪಾಶ, ಅಂಕುಶ, ಅಕ್ಷಮಾಲೆ ಮತ್ತು ಪುಸ್ತಕವನ್ನು ಹಿಡಿದು ಸರ್ವಾಭರಣ ಭೂಷಿತೆಯಾಗಿದ್ದಾಳೆ. ಈ ದೇವಕೋಷ್ಠದ ಮೇಲ್ಭಾಗದಲ್ಲಿಯೂ ಸಹ ಶಿಖರಾಕೃತಿಯನ್ನು ಕೆತ್ತಲಾಗಿದ್ದು ಇದರಲ್ಲಿ 5 ತಲಗಳು ಕಂಡು ಬರುತ್ತವೆ. ಪೂರ್ವಾಭಿಮುಖವಾಗಿರುವ ಮೂರನೇ ದೇವಕೋಷ್ಠದಲ್ಲಿ ಶಂಖ, ಚಕ್ರ, ಪದ್ಮ ಮತ್ತು ಫಲವನ್ನು ಹಿಡಿದಿರುವ ಸುಂದರವಾದ ಗಣೇಶ ಶಿಲ್ಪವಿದೆ. ನವರಂಗದ ಎಡಭಾಗದಲ್ಲಿರುವ ನಾಲ್ಕನೇ ದೇವಕೋಷ್ಠದಲ್ಲಿ ಅತ್ಯಂತ ಸುಂದರವಾದ ಸ್ಥಾನಕ ವೈಷ್ಣವಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಬಲ ಹಿಂಬದಿಯ ಕೈಯಲ್ಲಿ ಶಂಖ ಹಾಗೂ ಮುಂಬದಿಯ ಕೈಯಲ್ಲಿ ಫಲವನ್ನು ಹಿಡಿದು ಚಿನ್ಮುದ್ರೆಯನ್ನು ಹೊಂದಿರುವ ವೈಷ್ಣವಿಯು ಹಾರಾ, ಮುಕ್ತಾಹಾರ, ಯಜ್ಞೋಪವೀತ, ಕಂಕಣ, ರತ್ನಾಂಗುಲೀಯಕಗಳು, ವನಮಾಲೆ, ಶಿರಸ್ಚಕ್ರ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದಾಳೆ, ಶಿಲ್ಪದ ಎರಡು ಪಾರ್ಶ್ವದಲ್ಲಿ ಚಾಮರಧಾರಿಣಿಯರು ಮತ್ತು ಮೇಲ್ಭಾಗದಲ್ಲಿ ಸುಂದರವಾದ ಪ್ರಭಾವಳಿಯಿದೆ. ಐದನೇ ದೇವಕೋಷ್ಠದಲ್ಲಿ ಆಸೀನ ಮೂರ್ತಿಯಾಗಿರುವ ಲಕ್ಷ್ಮಿಯು ಬಲ ಹಿಂಬದಿಯ ಕೈಯಲ್ಲಿ ಶಂಖ, ಮುಂಬದಿಯ ಕೈಯಲ್ಲಿ ಪಾಶ, ಎಡ ಹಿಂಬದಿಯ ಕೈಯಲ್ಲಿ ಚಕ್ರ ಮತ್ತು ಎಡ ಮುಂಬದಿಯ ಕೈಯಲ್ಲಿ ಕಳಸವನ್ನು ಹಿಡಿದು ಸರ್ವ ಆಭರಣಗಳಿಂದ ಅಲಂಕೃತಳಾಗಿದ್ದಾಳೆ. ನವರಂಗದ ಆರನೇ ದೇವಕೋಷ್ಠದಲ್ಲಿ ಯೋಗಾನರಸಿಂಹನ ಶಿಲ್ಪವಿದ್ದು ಈತನು ಪದ್ಮಾಸನದಲ್ಲಿ ಉತ್ಕುಟಿಕ ಭಂಗಿಯಲ್ಲಿ ಕುಳಿತಿದ್ದು, ಬಲ ಹಿಂಬದಿಯ ಕೈಯಲ್ಲಿ ಚಕ್ರ ಮತ್ತು ಎಡ ಹಿಂಬದಿಯ ಕೈಯಲ್ಲಿ ಶಂಖವನ್ನು ಧರಿಸಿದ್ದು, ಮುಂದಿನ ಎರಡೂ ಕೈಗಳು ಯೋಗಮುದ್ರೆಯಲ್ಲಿವೆ. ನವರಂಗದ ಈ ಕೋಷ್ಠಗಳನ್ನು ದೇವಾಲಯ ನಿರ್ಮಾಣದ ರೀತಿಯಲ್ಲಿ ಅಂದರೆ ಷಡ್ವರ್ಗ ಕ್ರಮದಲ್ಲಿಯೇ ನಿರ್ಮಿಸಲಾಗಿದ್ದು,

(ಚಿ.ಸಂ.189) ಇವುಗಳಗೂ ಕೂಡ ದ್ವಾರಬಂಧ ಮತ್ತು ಲಲಾಟ ಶಿಲ್ಪಗಳನ್ನು ಕೆತ್ತಿರುವುದನ್ನು ನಾನು ನೋಡಬಹುದಾಗಿದೆ.

**ನವರಂಗದ ಭುವನೇಶ್ವರಿಗಳು:** ಹೊಯ್ಸಳ ದೇವಾಲಯಗಳಲ್ಲಿ ಭುವನೇಶ್ವರಿಗಳು ಬಹುಮುಖ್ಯ ಆಕರ್ಷಣೀಯ ಭಾಗವಾಗಿದ್ದು ಇವುಗಳನ್ನು ಅತ್ಯಂತ ಸುಂದರವಾಗಿ, ಅಲಂಕಾರಿಕವಾಗಿ ಮತ್ತು ಸೂಕ್ಷ್ಮವಾಗಿ ಕೆತ್ತನೆ ಮಾಡಲಾಗಿರುತ್ತದೆ. ಈ ಚನ್ನಕೇಶವ ದೇವಾಲಯದ ಭುವನೇಶ್ವರಿಗಳು ಸಹ ಬಹಳ ಸುಂದರವಾಗಿ ಕಂಡರಿಸಲ್ಪಟ್ಟಿದ್ದು ಅವುಗಳ ಲಕ್ಷಣಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ. (ಚಿ.ಸಂ.190)

1. **ಆಗ್ನೇಯ ದಿಕ್ಕಿನ ಭುವನೇಶ್ವರಿ:** ಇದು ನಕ್ಷತ್ರಾಕಾರವನ್ನು ಹೊಂದಿದ್ದು ಇದೇ ಆಕಾರದಲ್ಲಿಯೇ ಒಳಹೋಗುತ್ತಾ ಕಿರಿದಾಗಿದೆ. ಇದು ಸುಮಾರು ಮೂರು ಅಡಿಯಷ್ಟು ಆಳವನ್ನು ಹೊಂದಿದ್ದು ಇದರಲ್ಲಿ ಚಿಕ್ಕ ಶಿಲಾಮೊಗ್ಗುಗಳ ರಚನೆಯಿದೆ.

2. **ದಕ್ಷಿಣ ದಿಕ್ಕಿನ ಭುವನೇಶ್ವರಿ:** ಇದು ಅಷ್ಟಕೋನಾಕೃತಿಯನ್ನು ಹೊಂದಿದ್ದು ಅದೇ ಆಕಾರದಲ್ಲಿ ಒಳಹೋಗಿದ್ದು ಇದರ ಮಧ್ಯಭಾಗದಲ್ಲಿ ಪದ್ಮಕೇಸರವಿದೆ.

3. **ನೈರುತ್ಯ ದಿಕ್ಕಿನ ಭುವನೇಶ್ವರಿ:** ಇದು ಲಾಳಾಕಾರವನ್ನು ಹೊಂದಿದ್ದು ಇದೇ ಆಕಾರದಲ್ಲಿಯೇ ಒಳಹೋಗಿದ್ದು ಇದರ ಮಧ್ಯಭಾಗದಲ್ಲಿ ಪದ್ಮಕೇಸರವನ್ನು ಜೋತು ಬಿದ್ದಿರುವಂತೆ ಕೆತ್ತಲಾಗಿದೆ.

4. **ಪಶ್ಚಿಮ ದಿಕ್ಕಿನ ಭುವನೇಶ್ವರಿ:** ಇದು ಅಷ್ಟಕೋನಾಕಾರವನ್ನು ಹೊಂದಿದ್ದು ಮೂರು ಹಂತಗಳಲ್ಲಿ ಒಳಕ್ಕೆ ಸರಿದಿದೆ. ಇದು ಮೂರು ಅಡ್ಡಪಟ್ಟಿಕೆಗಳನ್ನು ಹಾಗೂ 16 ಲಂಬಪಟ್ಟಿಕೆಗಳನ್ನು ಹೊಂದಿದೆ.

5. **ವಾಯುವ್ಯ ದಿಕ್ಕಿನ ಭುವನೇಶ್ವರಿ:** ಇದು ಪ್ರಾರಂಭದಿಂದಲೂ ಚತುರಶ್ರವಾಗಿದ್ದು ಇದೇ ಆಕಾರದಲ್ಲಿಯೇ ಒಳಹೋಗಿದ್ದು ಮೂರು ಹಂತಗಳನ್ನು ಹೊಂದಿದೆ. 32 ಲಂಬಪಟ್ಟಿಕೆಗಳು ಮತ್ತು ಮೂರು ಚತರುಶ್ರ ಪಟ್ಟಿಕೆಗಳನ್ನು ಹೊಂದಿರುವ ಈ ವಿತಾನದಲ್ಲಿ ಲಂಬಪಟ್ಟಿಕೆ ಮತ್ತು ಅಡ್ಡ ಪಟ್ಟಿಕೆಗಳು ಸಂಧಿಸುವ ಜಾಗದಲ್ಲಿ ಶಿಲಾ ಮೊಗ್ಗುಗಳನ್ನು ಚಿತ್ರಿಸಲಾಗಿದೆ.

6. **ಉತ್ತರ ದಿಕ್ಕಿನ ಭುವನೇಶ್ವರಿ:** ಮೊದಲು ಚತುರಶ್ರವಾಗಿ ನಂತರ ನಕ್ಷತ್ರಾಕಾರದಲ್ಲಿರುವ ಈ ವಿತನವು ಇದೇ ಆಕಾರದಲ್ಲಿಯೇ ಮೂರು ಹಂತಗಳಲ್ಲಿ ಒಳ ಹೋಗಿದ್ದು ಇದರ ಕೇಂದ್ರ ಭಾಗದಲ್ಲಿ ಪದ್ಮ ಕೇಸರವಿದೆ.

7. **ಈಶಾನ್ಯ ದಿಕ್ಕಿನ ಭುವನೇಶ್ವರಿ**: ಪಾದಭಾಗದಲ್ಲಿ ಚೌಕಾಕಾರವನ್ನು ಹೊಂದಿರುವ ಈ ವಿತಾನವು ಒಳ ಹೋದಂತೆ ಬಹುಕೋನಾಕೃತಿಯನ್ನು ಪಡೆದು, ಕಿರಿದಾಗುತ್ತಾ ಮಧ್ಯ ಭಾಗದಲ್ಲಿ ಬಾಳೆ ಹೂವಿನ ರೀತಿಯ ಕೆತ್ತನೆಯೊಂದಿಗೆ ಅಂತಿಮಗೊಂಡಿದೆ.

೮. **ಪೂರ್ವ ದಿಕ್ಕಿನ ಭುವನೇಶ್ವರಿ**: ಅಷ್ಟಕೋನಾಕೃತಿಯಲ್ಲಿರುವ ಈ ವಿತಾನವು ಒಳಹೋದಂತೆ ಎರಡು ವೃತ್ತಾಕಾರವನ್ನು ನಿರ್ಮಿಸಿ ಮಧ್ಯಭಾಗದಲ್ಲಿ ಪದ್ಮಕೇಸರದ ರಚನೆಯೊಂದಿಗೆ ಕೊನೆಗೊಂಡಿದೆ.

೯. **ನವರಂಗದ ಮಧ್ಯ ಅಂಕಣದ ಭುವನೇಶ್ವರಿ**: ಮೂರು ಹಂತಗಳಲ್ಲಿ ವೃತ್ತಾಕಾರವಾಗಿ ಒಳಹೋಗಿರುವ ಈ ಭುವನೇಶ್ವರಿಯು ಅತ್ಯಾಕರ್ಷಕವಾಗಿದ್ದು ಇದರ ಪಾದಭಾಗದ ದಿಂಡು ಅಷ್ಟಕೋನಗಳನ್ನು ಹೊಂದಿದೆ. ಇದರಲ್ಲಿ ದಿಕ್ಕಿಗನುಸಾರವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಮತ್ತು ಯಕ್ಷ-ಯಕ್ಷಿಯರು ಹಾಗೂ ಕೀರ್ತಿಮುಖಗಳ ಕೆತ್ತನೆಯನ್ನು ಮಾಡಿದ್ದಾರೆ.[143]

ನವರಂಗವು ಹೀಗೆ ಆಕರ್ಷಕವಾದ ಭುವನೇಶ್ವರಿಗಳನ್ನು ಹೊಂದಿದ್ದು ಇವುಗಳು ನೋಡುಗರ ಮನಸ್ಸನ್ನು ಸೆರೆ ಹಿಡಿಯುವುದರ ಜೊತೆಗೆ ದೇವಾಲಯದ ಸೌಂದರ್ಯವನ್ನು ಇಮ್ಮಡಿಗೊಳಿಸಿವೆ ಎಂದೆ ತಪ್ಪಾಗಲಾರದು. ನವರಂಗದ ದ್ವಾರಬಂಧವು ಸರಳವಾಗಿದ್ದು ಇದರ ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳ ಕೆತ್ತನೆ ಕಂಡು ಬರುವುದಿಲ್ಲ ಹಾಗೂ ದ್ವಾರದ ಎರಡೂ ಪಾರ್ಶ್ವದಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. (ಚಿ.ಸಂ. 191)

**ಮುಖಮಂಟಪ**: ನವರಂಗದ ನಂತರ ಮುಖಮಂಟಪವಿದ್ದು ಇದರಲ್ಲಿ ಎರಡು ಶ್ರೀಕಾರ ಮಾದರಿಯ ಸ್ತಂಭಗಳು ಮತ್ತು ಕಕ್ಷಾಸನಗಳಿವೆ. ಈ ಕಕ್ಷಾಸನಗಳ ಹಿಂಬದಿಯ ಅಧಿಷ್ಠಾನ ಮತ್ತು ಕಟಾಂಜನದಲ್ಲಿ ಯೋಧರು, ವಾದ್ಯ ವೃಂದದವರು, ಮಿಥುನ ಶಿಲ್ಪಗಳು, ಕೀರ್ತಿಮುಖ ಮತ್ತು ಸುರುಳಿ ಬಳ್ಳಿಗಳ ಕೆತ್ತನೆಯು ಕಂಡು ಬರುತ್ತದೆ.[144] ಮುಖಮಂಟಪವು ಆಕರ್ಷಕವಾದ ಭುವನೇಶ್ವರಿಯನ್ನು ಹೊಂದಿದ್ದು ಇದು ಅಷ್ಟಕೋನಾಕೃತಿಯಲ್ಲಿ ಒಳಹೋಗುತ್ತಾ ಕಿರಿದಾಗಿದೆ. (ಚಿ.ಸಂ. 192) ಇದರ ಮಧ್ಯಭಾಗದಲ್ಲಿ ಪದ್ಮಕೇಸರವನ್ನು ಇಳಬಿಟ್ಟಂತೆ ಕೆತ್ತಲಾಗಿದ್ದು ಸುತ್ತಲೂ ಚಿಕ್ಕ ಚಿಕ್ಕ ಶಿಲಾಮೊಗ್ಗುಗಳಿವೆ. ಭುವನೇಶ್ವರಿಯ ಪಾದ ಭಾಗದ ದಿಂಡುಗಳ ಮೇಲೆ ಆಯಾ ದಿಕ್ಕಿಗನುಗುಣವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಸಹ ಕೆತ್ತಲಾಗಿದೆ.

**ಅಧಿಷ್ಠಾನ**: ಇದು 4 ಅಡಿ ಎತ್ತರ ಹಾಗೂ ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ, ಗಳ, ದಂತಪಂಕ್ತಿ, ಆಲಿಂಗ ಮತ್ತು ಪ್ರತಿ ಭಾಗಗಳನ್ನು ಹೊಂದಿರುವ ಪಾದಬಂಧ ಮಾದರಿಯ

ಅಧಿಷ್ಠಾನವಾಗಿದೆ. ಆದರೆ ದೇವಾಲಯದ ಮುಖಮಂಟಪದ ಅಧಿಷ್ಠಾನವು ಮಂಚಬಂಧ ಮಾದರಿಯ ಲಕ್ಷಣಗಳನ್ನು ಹೊಂದಿರುತ್ತದೆ.

**ಭಿತ್ತಿ**: ಅಧಿಷ್ಠಾನದ ನಂತರ ಭಿತ್ತಿಯು ಹಿನ್‌ಸರಿತ ಮಾದರಿಯಲ್ಲಿ ನಿರ್ಮಾಣವಾಗಿದ್ದು ಇದರಲ್ಲಿ ಕೋಷ್ಠಗಳು, ಶಿಲ್ಪಗಳು, ಸ್ತಂಭ ಪಂಜರಗಳು, ಸುರುಳಿ-ಬಳ್ಳಿಗಳು, ಬ್ರಹ್ಮಕಾಂತ ಭಿತ್ತಿ ಪಾದಗಳು ಹಾಗೂ ಇನ್ನಿತರ ಅಲಂಕರಣೆಗಳು ಕಂಡು ಬರುತ್ತವೆ. ಈ ದೇವಾಲಯದ ಪ್ರಮುಖ ಆಕರ್ಷಣೀಯ ಭಾಗವೆಂದರೆ ಭಿತ್ತಿ ಶಿಲ್ಪಗಳು ಇವುಗಳನ್ನು ಬಹಳ ಸುಂದರವಾಗಿ ಕೆತ್ತಲಾಗಿದ್ದು, ಪ್ರಧಾನ ದೇವತಾ ಶಿಲ್ಪಗಳಿರುವ ಕೋಷ್ಠದ ಮೇಲೆ ವಿವಿಧ ಮಾದರಿಯ ಶಿಖರಾಕೃತಿಗಳನ್ನು ಹಾಗೂ ಇತರ ಶಿಲ್ಪಗಳ ಮೇಲ್ಭಾಗದಲ್ಲಿ ಸುರುಳಿ-ಬಳ್ಳಿಗಳ ಕೆತ್ತನೆಯನ್ನು ಮಾಡಲಾಗಿದೆ. (ಚಿ.ಸಂ.193) ನವರಂಗದ ಉತ್ತರ ಮತ್ತು ದಕ್ಷಿಣ ದಿಕ್ಕಿನ ಹೊರಭಿತ್ತಿಯಲ್ಲಿ ಎರಡು ದೇವಕೋಷ್ಠಗಳನ್ನು ಆಕರ್ಷಕವಾಗಿ ನಿರ್ಮಿಸಲಾಗಿದ್ದು ಇವುಗಳು ಒಂದು ಮಂಟಪದಂತೆ ಭಾಸವಾಗುತ್ತವೆ. ಭಿತ್ತಿಯಲ್ಲಿ ಸಂಪೂರ್ಣವಾಗಿ ವೈಷ್ಣವ ಶಿಲ್ಪಗಳೇ ಪ್ರಧಾನವಾಗಿ ಕಂಡು ಬಂದಿದ್ದು ಅವುಗಳನ್ನು ದೇವಾಲಯದ ಆಗ್ನೇಯ ದಿಕ್ಕಿನಿಂದ ಪ್ರಾರಂಭಿಸಿ ಪ್ರದಕ್ಷಿಣಾ ಕ್ರಮವಾಗಿ ಈ ರೀತಿ ಹೆಸರಿಸಬಹುದಾಗಿದೆ. ರತಿ, ಮನ್ಮಥ, ಗರುಡ, ಕೇಶವ, ಸಂಕರ್ಷಣ, ಭೂದೇವಿ, ಭೂವರಾಹ ಮೂರ್ತಿ, ಕಾಳಿಂಗ ಮರ್ಧನ, ವೇಣುಗೋಪಾಲ, ಹೂಮಾಲೆ ಹಿಡಿದಿರುವ ಸ್ತ್ರೀ, ಚಾಮರಧಾರಿಣಿ, ಖಾಲಿ ದೇವಕೋಷ್ಠಕದ ಎರಡೂ ಪಕ್ಕದಲ್ಲಿ ಗಜಕೇಸರಿ ಶಿಲ್ಪ, ಹೂವಾಡಿಗ, ಉಗ್ರನರಸಿಂಹ, ಗರುಡ, ಜನಾರ್ಧನ, ಚಾಮರಧಾರಿಣಿ, ಆಸೀನ ಮಾಧವ, ಶ್ರೀಕೃಷ್ಣ, ಚಾಮರಧಾರಿಣಿ, ಗೋವರ್ಧನ ಗಿರಿಧಾರಿ, ವಿಷ್ಣು, ಗರುಡ, ಕಾಳಾಮುಖ ಯತಿ, ಲಕ್ಷ್ಮೀ, ವಿಷ್ಣು, ಗರುಡ, ಚಾಮರಧಾರಿಣಿ, ಭೂದೇವಿ, ಯೋಗಾನರಸಿಂಹ, ಶ್ರೀದೇವಿ, ಚಾಮರಧಾರಿಣಿ, ಹನುಮಂತ, ಅನಿರುದ್ಧ, ಮಾಧವ, ಗರುಡ, ಚಾಮರಧಾರಿಣಿ, ಶ್ರೀದೇವಿ, ವರದರಾಜ, ಭೂದೇವಿ, ಚಾಮರಧಾರಿಣಿ, ಗರುಡ, ಮಾಧವ, ಶ್ರೀಧರ, ಗರುಡ, ಚಾಮರಧಾರಿಣಿ, ಶ್ರೀದೇವಿ, ನಾರಾಯಣ, ಭೂದೇವಿ, ಚಾಮರಧಾರಿಣಿ, ಮಾಧವ ಚಾಮರಧಾರಿಣಿ, ಗೋವಿಂದ, ಚಾಮರಧಾರಿಣಿ, ಗರುಡ, ದೇವಿ, ಸಂಕರ್ಷಣ, ಹಿರಣ್ಯಾ, ತ್ರಿವಿಕ್ರಮ, ಬಲಿ ಮತ್ತು ವಾಮನ, ಗರುಡ, ಆಸೀನ ಹರಿ, ಕಾಳಾಮುಖ ಯತಿ, ಸ್ತ್ರೀ ಶಿಲ್ಪ, ಅಚ್ಯುತ, ದೇವಕೋಷ್ಠದ ಎರಡೂ ಕಡೆ ಚಾಮರಧಾರಿಣಿಯರು, ದೇವಿ ಶಿಲ್ಪ, ಲಕ್ಷ್ಮೀನಾರಾಯಣ, ಜನಾರ್ಧನ, ಕಾಳಿಂಗ ಮರ್ಧನ ಮತ್ತು ವಾಮನ ಶಿಲ್ಪಗಳು ಕಂಡು ಬಂದಿದ್ದು ಇವುಗಳಲ್ಲಿ ಪ್ರಮುಖ ಶಿಲ್ಪಗಳ ಲಕ್ಷಣಗಳನ್ನು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಚನ್ನಕೇಶವ ದೇವಾಲಯದ ಪ್ರಮುಖ ಭಿತ್ತಿ ಶಿಲ್ಪಗಳು**

1. **ರತಿ–ಮನ್ಮಥ**: ತ್ರಿಭಂಗಿಯಲ್ಲಿ ನಿಂತಿರುವ ರತಿಯ ಶಿಲ್ಪವು ಭಾಗಶಃ ಭಗ್ನವಾಗಿದ್ದರೂ ಉಳಿದಿರುವ ಅವಶೇಷಗಳು ರತಿಯ ಸೌಂದರ್ಯಕ್ಕೆ ಸಾಕ್ಷಿಯಾಗಿವೆ. ಧಮ್ಮಿಲವನ್ನು ಹಾಕಿರುವ ಸ್ತ್ರೀಯು ಕಿವಿಗಳಿಗೆ ಕುಂಡಲವನ್ನು, ಕಂಠೀ, ಹಾರ, ವನಮಾಲೆ, ಯಜ್ಞೋಪವೀತ, ಪಾದಕಟಕವನ್ನು ಧರಿಸಿದ್ದು ಎಡಗೈಯಲ್ಲಿ ಮಾತುಲುಂಗ ಫಲವನ್ನು ಹಿಡಿದಿದ್ದಾಳೆ. (ಚಿ.ಸಂ. 194)

2. **ಗರುಡ**: ಅಂಜಲಿ ಮುದ್ರೆಯೊಂದಿಗೆ ಎಡಗಾಲಿನ ಮಂಡಿಯನ್ನು ಕೆಳಕ್ಕೆ ಊರಿ ತನ್ನ ರೆಕ್ಕೆಗಳನ್ನು ಬಿಚ್ಚಿ ಕುಳಿತಿರುವ ಗರುಡ ಮೂರ್ತಿಯು ಭುಜಕೀರ್ತಿ, ಕೇಯೂರ, ಹಸ್ತಕಟಕ, ಕಂಠೀ, ಹಾರ, ಮುಕ್ತಾಹಾರ, ಉದರಬಂಧ, ಪಾದಕಟಕ ಮುಂತಾದ ವಸ್ತ್ರಾಭರಣಗಳನ್ನು ಧರಿಸಿದ್ದು, ನಮ್ರಭಾವದಲ್ಲಿರುವಂತೆ ಈ ಶಿಲ್ಪವನ್ನು ಕೆತ್ತಲಾಗಿದೆ. (ಚಿ.ಸಂ. 195)

3. **ಭೂವರಾಹ ಮೂರ್ತಿ**: ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕಂಡು ಬರುವ ಈ ಶಿಲ್ಪದಲ್ಲಿ ವಿಷ್ಣುವು ಭೂವರಾಹ ಅವತಾರದಲ್ಲಿ ಅಂದರೆ ವರಾಹ (ಹಂದಿ) ಮುಖ, ಪುರುಷ ದೇಹ ಮತ್ತು ಷಡ್ಭುಜಗಳನ್ನು ಹೊಂದಿದ್ದು, ತನ್ನ ಎಡ ಭುಜದ ಮೇಲೆ ಭೂದೇವಿಯನ್ನು ಕೂರಿಸಿಕೊಂಡಿದ್ದಾನೆ. (ಚಿ.ಸಂ. 196) ಭುಜಸ್ಕಂದ, ಕೇಯೂರ, ಹಸ್ತಕಟಕ, ಪಾದಕಟಕ, ನೂಪುರ, ಕಂಠೀ, ಹಾರ, ಮುಕ್ತಾಹರ, ವನಮಾಲೆ ಮತ್ತು ಕಿರೀಟ ಮುಕುಟವನ್ನು ಧರಿಸಿರುವ ವಿಷ್ಣುವು ಬಲಭಾಗದ ಕೈಗಳಲ್ಲಿ ಗದಾ ಮತ್ತು ಚಕ್ರ, ಎಡಬಾಗದ ಕೈಗಳಲ್ಲಿ ಪದ್ಮ, ಫಲ ಮತ್ತು ಗುರಾಣಿಯನ್ನು ಹಿಡಿದಿದ್ದಾನೆ.

4. **ಕಾಳಿಂಗಮರ್ಧನ**: ಸರ್ವ ಆಭರಣಗಳಿಂದಲೂ ಅಲಂಕೃತನಾಗಿರುವ ಕೃಷ್ಣನು ಏಳು ಹೆಡೆಗಳನ್ನು ಹೊಂದಿರುವ ಕಾಳಿಂಗ ಸರ್ಪದ ಮೇಲೆ ನರ್ತಿಸುತ್ತಿರುವಂತೆ ಆಕರ್ಷಕವಾಗಿ ಈ ಶಿಲ್ಪವನ್ನು ಕೆತ್ತಲಾಗಿದೆ. (ಚಿ.ಸಂ. 197)

5. **ವೇಣುಗೋಪಾಲ**: ಈ ಶಿಲ್ಪದಲ್ಲಿ ಕೃಷ್ಣನು ಕೊಳಲನ್ನು ನುಡಿಸುತ್ತಿದ್ದು, ಈ ಕೊಳಲಿನ ನಾದಕ್ಕೆ ಗೋವುಗಳು, ಗೋಪಾಲಕ, ಸರ್ಪ ಮತ್ತು ಒಂದು ಪಕ್ಷಿಯು ಸಹ ಮಂತ್ರಮುಗ್ಧವಾಗಿರುವಂತೆ ಕೆತ್ತಲಾಗಿದೆ.(ಚಿ.ಸಂ.198) ತ್ರಿಭಂಗಿಯಲ್ಲಿರುವ ವೇಣು ಗೋಪಾಲನು ಹಸ್ತಕಟಕ, ಕೇಯೂರ, ಹಾರ, ಮುಕ್ತಾಹಾರ, ವನಮಾಲೆ, ಪಾದ ಕಟಕ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದಾನೆ.

6. **ಗಜಕೇಸರಿ**: ದಕ್ಷಿಣ ದಿಕ್ಕಿನ ದೇವಕೋಷ್ಠದ ಎರಡೂ ಪಾರ್ಶ್ವದಲ್ಲಿ ಆನೆಯು ಹಣೆಪಟ್ಟಿ, ಕಂಠೀ ಮತ್ತು ಹಾರಗಳಿಂದ ಕೂಡಿದ್ದು ಇದರ ಮೇಲೆ ಉಗ್ರವಾದ ಸಿಂಹವು ತನ್ನ ಹಿಂಬದಿಯ ಎಡಗಾಲನ್ನು ಆನೆಯ ಬೆನ್ನ ಮೇಲೆ ಇಟ್ಟು ತನ್ನ ಮುಂಗಾಲುಗಳನ್ನು ಮೇಲಕ್ಕೆ ಎತ್ತಿರುವಂತೆ ಬಹಳ ಸುಂದರವಾಗಿ ಕಂಡರಿಸಲಾಗಿದೆ. (ಚಿ.ಸಂ. 199)

7. **ಉಗ್ರನರಸಿಂಹ**: ಈ ಶಿಲ್ಪದಲ್ಲಿ ವಿಷ್ಣುವು ನರಸಿಂಹಾವತಾರದಲ್ಲಿ ಪ್ರಹ್ಲಾದನ ತಂದೆಯಾದ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆಯುತ್ತಿರುವಂತೆ ಕೆತ್ತಲಾಗಿದ್ದು, (ಚಿ.ಸಂ. 200) ಇದರಲ್ಲಿ ನರಸಿಂಹನು ಆಲೀಢಾಸನದಲ್ಲಿ ಕುಳಿತಿದ್ದಾನೆ.

8. **ಚಾಮರಧಾರಿಣಿ**: ದ್ವಿಭಂಗಿಯಲ್ಲಿರುವ ಈ ಶಿಲ್ಪವು ಶಿರಶ್ಚಕ್ರ, ಕಿರೀಟ, ಹರ, ಮುಕ್ತಾಹಾರ, ಕೇಯೂರ, ಭುಜಕೀರ್ತಿ, ಹಸ್ತಕಟಕ, ಯಜ್ಞೋಪವೀತ, ವನಮಾಲೆ, ಪಾದ ಕಟಕ ಇನ್ನೂ ಮುಂತಾದ ಆಭರಣಗಳನ್ನು ಧರಿಸಿದ್ದು ಬಲಗೈಯಲ್ಲಿ ಚಾಮರವನ್ನು ಮತ್ತು ಎಡಗೈಯಲ್ಲಿ ಮಾತುಲುಂಗ ಫಲವನ್ನು ಹಿಡಿದಿದೆ. (ಚಿ.ಸಂ. 201)

9. **ಗೋವರ್ಧನ ಗಿರಿಧಾರಿ**: ಸರ್ವಾಭರಣಗಳಿಂದ ಭೂಷಿತನಾಗಿರುವ ಕೃಷ್ಣನು ದ್ವಿಭಂಗಿಯಲ್ಲಿ ನಿಂತಿದ್ದು, ತನ್ನ ಎಡಗೈನಿಂದ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದಿದ್ದು ಇದರ ಕೆಳಗೆ ಗೋವುಗಳು, ಮಾನವರು ರಕ್ಷಣೆ ಪಡೆಯುತ್ತಿರುವಂತೆ ಬಹಳ ಸುಂದರವಾಗಿ ಈ ಶಿಲ್ಪವನ್ನು ಕೆತ್ತಲಾಗಿದೆ. (ಚಿ.ಸಂ. 202)

10. **ಬಲಿಚಕ್ರವರ್ತಿ ಮತ್ತು ವಾಮನ**: ಶಿರಶ್ಚಕ್ರ ಸಮೇತ ಕಿರೀಟ ಮುಕುಟವನ್ನು ಧರಿಸಿರುವ ಬಲಿರಾಜನು ಹಾರ, ಮುಕ್ತಾಹಾರ, ಕೇಯೂರ, ಭುಜ ಕೀರ್ತಿ, ಉದರ ಬಂಧ, ಹಸ್ತ ಕಟಕ, ಪಾದ ಕಟಕ ಇನ್ನೂ ಮುಂತಾದ ಆಭರಣಗಳಿಂದ ಭೂಷಿತನಾಗಿದ್ದು ತನ್ನ ಎರಡೂ ಕೈಗಳಿಂದ ವಾಮನನಿಗೆ ಕುಂಭವನ್ನು ನೀಡುತ್ತಿರುವಂತೆ ನೈಜ ಚಿತ್ರಣವನ್ನು ಈ ಶಿಲ್ಪದಲ್ಲಿ ಮೂಡಿಸಲಾಗಿದೆ. (ಚಿ.ಸಂ. 203)

11. **ಕಾಳಾಮುಖ ಯತಿ**: ಕಾಳಾಮುಖ ಯತಿ ಎನ್ನಬಹುದಾದ ಶಿಲ್ಪವು ನಿಲುವಂಗಿ ರೀತಿಯ ವಸ್ತ್ರವನ್ನು ತಲೆಗೆ ಉಷ್ಣಿಷ, ತೋಳುಗಳಿಗೆ ಮಣಿಹಾರ, ಯಜ್ಞೋಪವೀತವನ್ನು ಧರಿಸಿದ್ದು ಬಲಗೈಯಲ್ಲಿ ದಂಡವನ್ನು ಎಡಗೈಯಲ್ಲಿ ಸುರುಳಿ ಸುತ್ತಿರುವ ಉರಗವನ್ನು ಹಿಡಿದಿದ್ದಾನೆ. (ಚಿ.ಸಂ. 204) ಈ ರೀತಿಯ ಶಿಲ್ಪವನ್ನು ಕೋರವಂಗಲದ ಬೂಚೇಶ್ವರ ಮತ್ತು ಹೊನ್ನಾವರದ ಕೇಶವ ದೇವಾಲಯದ ಭಿತ್ತಿಗಳಲ್ಲಿಯೂ ಕಾಣಬಹುದಾಗಿದೆ.

**ಪ್ರಸ್ತರ**: ದೇವಾಲಯದ ಪ್ರಸ್ತರ ಭಾಗವು ಸುಂದರವಾದ ರೀತಿಯಲ್ಲಿ ಜೋಡಣೆಗೊಂಡಿದ್ದು ಉತ್ತರ, ವಲ್ಲಭಿ, ಕಪೋತ ಮತ್ತು ವಾಜನಗಳನ್ನು ಒಳಗೊಂಡಿದೆ. ಕಪೋತದ ಮೇಲ್ಭಾಗದಲ್ಲಿ ಪದ್ಮ ಮತ್ತು ಇದರ ಮೇಲ್ಭಾಗದಲ್ಲಿ ಆಲಿಂಗವನ್ನು ಅಳವಡಿಸಲಾಗಿದೆ.

**ಹಾರ**: ಚನ್ನಕೇಶವ ದೇವಾಲಯದ ಹಾರ ಭಾಗವು ಬಹಳ ಸುಂದರವಾಗಿ ಮೂಡಿಬಂದಿದ್ದು ಇದು ಕೂಟ, ಶಾಲಾ, ಪಂಜರ, ನಾಸಿ, ಅರ್ಧನಾಸಿ ಮತ್ತು ಕೀರ್ತಿಮುಖಗಳ ಅಲಂಕರಣೆಗಳಿಂದ ಕೂಡಿದೆ. ಇದರಲ್ಲಿ ಕಂಡು ಬರುವ ಭದ್ರಶಾಲಾಗಳಲ್ಲಿ ಕೇಶವ, (ಚಿ.ಸಂ. 205) ವಿಷ್ಣು, ಗೋವರ್ಧನಗಿರಿ ಧಾರಿ, ವೇಣುಗೋಪಾಲ, ಮಾಧವ ಇನ್ನೂ ಮುಂತಾದ ಶಿಲ್ಪಗಳನ್ನು ಬಹಳ ಸುಂದರವಾಗಿ ಕಂಡರಿಸಲಾಗಿದೆ. ಇವುಗಳಲ್ಲದೇ ಹಾರ ಭಾಗದ ವಿವಿಧ ನಾಸಿಗಳಲ್ಲಿ ಯಕ್ಷ-ಯಕ್ಷಿಯರ ಶಿಲ್ಪಗಳು, ಇತರ ದೇವತೆಗಳ ಶಿಲ್ಪಗಳನ್ನು ಕೆತ್ತಲಾಗಿದ್ದು ಇವುಗಳ ಮೇಲೆ ಕೀರ್ತಿಮುಖಗಳ ಅಲಂಕರಣೆಯನ್ನು ಗುರುತಿಸಬಹುದಾಗಿದೆ.

**ಶಿಖರ**: ದೇವಾಲಯದ ಶಿಖರವು ಬಹಳ ಸುಂದರವಾಗಿ ಬ್ರಹ್ಮಚ್ಛಂಧ ಮಾದರಿಯಲ್ಲಿ ನಿರ್ಮಿಸಲ್ಪಟ್ಟಿದ್ದು ದ್ರಾವಿಡ ಶೈಲಿಯನ್ನು ಹೊಂದಿದೆ. ಇದು ಕೂಟ, ಶಾಲಾ, ಪಂಜರ, ನಾಸಿ, ಅರ್ಧನಾಸಿ ಮತ್ತು ಕೀರ್ತಿಮುಖಗಳ ಅಲಂಕರಣೆಯಿಂದ ಕೂಡಿದ್ದು 3 ತಲಗಳನ್ನು ಹೊಂದಿದೆ. (ಚಿ.ಸಂ. 206) ಮೂರು ತಲಗಳ ಭದ್ರನಾಸಿಗಳಲ್ಲಿ ಪ್ರಧಾನ ವೈಷ್ಣವ ದೇವತೆಗಳ ಶಿಲ್ಪಗಳನ್ನು ಬಹಳ ಸುಂದರವಾಗಿ ಚಿತ್ರಿಸಿದ್ದಾರೆ. ಶಿಖರದ ದಕ್ಷಿಣ ದಿಕ್ಕಿನ ಮೊದಲ ತಲದ ಭದ್ರನಾಸಿಯಲ್ಲಿ ಜನಾರ್ಧನ, ಎರಡನೇ ತಲದ ಭದ್ರನಾಸಿಯಲ್ಲಿ ಕಾಳಿಂಗಮರ್ಧನ, ಮೂರನೇ ತಲದಲ್ಲಿ ವಿಷ್ಣುವಿನ ಶಿಲ್ಪ, ಪಶ್ಚಿಮ ದಿಕ್ಕಿನ ಮೊದಲನೇ ತಲದಲ್ಲಿ ವಿಷ್ಣು, ಎರಡನೇ ತಲದಲ್ಲಿ ಕರಂಡ ಮುಕುಟವನ್ನು ಧರಿಸಿ ತ್ರಿಶೂಲ ಮತ್ತು ಢಮರನ್ನು ಹಿಡಿದಿರುವ ಶಿವ, ಮೂರನೇ ತಲದಲ್ಲಿ ವಿಷ್ಣು ಹಾಗೂ ಉತ್ತರ ದಿಕ್ಕಿನಲ್ಲಿ ಮೊದಲನೇ ತಲದಲ್ಲಿ ಕಾಳಿಂಗಮರ್ಧನ, ಎರಡನೇ ತಲದಲ್ಲಿ ವೇಣುಗೋಪಾಲ ಮತ್ತು ಮೂರನೇ ತಲದಲ್ಲಿ ಕೇಶವ ಶಿಲ್ಪಗಳನ್ನು ಪ್ರತಿಷ್ಠಾಪಿಸಿದ್ದಾರೆ. ಈ ಪ್ರಧಾನ ಭದ್ರನಾಸಿಗಳ ಎಡ ಮತ್ತು ಬಲ ಭಾಗದಲ್ಲಿ ಕಂಡು ಬರುವ ನಾಸಿಗಳಲ್ಲಿ ಯಕ್ಷ-ಯಕ್ಷಿಯರು ಹಾಗು ಇನ್ನಿತರ ದೇವ-ದೇವತೆಯರ ಶಿಲ್ಪಗಳಿದ್ದು ಇವುಗಳ ಮೇಲ್ಭಾಗದಲ್ಲಿ ಅರ್ಧ ಕೀರ್ತಿಮುಖಗಳ ರಚನೆ ಕಂಡು ಬರುತ್ತದೆ. (ಚಿ.ಸಂ. 207) ಶಿಖರವು ಮೂರು ತಲಗಳಲ್ಲಿ ಮೇಲಕ್ಕೆ ಹೋಗುತ್ತಾ ಪಿರಮಿಡ್ಡಿನಾಕೃತಿಯಲ್ಲಿದ್ದು, ಮೂರನೇ ತಲದ ಮೇಲ್ಭಾಗದಲ್ಲಿ ಒಂದು ವೇದಿಕೆಯ ಮೇಲೆ ಮೊಗಚಿದ ತಾವರೆ ದಳಗಳ ಅಲಂಕರಣದಿಂದ ಕೂಡಿದ ಪುಷ್ಕರ ಶಿಲೆಯಿದೆ. ಇದರ ಮಧ್ಯ ಭಾಗದಲ್ಲಿ ಅತ್ಯಂತ ಸುಂದರವಾದ ಸ್ತೂಪಿಯನ್ನು ಕಲ್ಲಿನಿಂದ ನಿರ್ಮಿಸಲಾಗಿದ್ದು ಇದು ಅಲಂಕೃತವಾದ ಕುಂಭ, ಕುಂಭದ ಮುಖದಲ್ಲಿ ಪತ್ರಗಳು ಹಾಗೂ ಮೇಲ್ಭಾಗದಲ್ಲಿ

ಪೂರ್ಣ ಫಲವನ್ನು ಹೊಂದಿರುವ ಸಾಲಾಂಕೃತ ಸ್ತೂಪಿಯಾಗಿದೆ. ಶಿಖರದ ಮುಂಭಾಗದಲ್ಲಿ ಶಾಲಾಕಾರದ ಸುಖನಾಸವಿದ್ದು ಇದರ ಮೇಲ್ಭಾಗದಲ್ಲಿ ಹೊಯ್ಸಳರ ರಾಜಲಾಂಛನವಾದ ಸಳನು ಹುಲಿಯೊಂದಿಗೆ ಹೋರಾಡುತ್ತಿರುವ ಅತ್ಯಂತ ಸುಂದರವಾದ ಶಿಲ್ಪವನ್ನು ನಿರ್ಮಿಸಿದ್ದಾರೆ.[145] ಇದರ ಮುಂಭಾಗದಲ್ಲಿ ಅಂದರೆ ಸುಖನಾಸದ ಫಲಕದಲ್ಲಿ ನರ್ತನ ಮಾಡುತ್ತಿರುವ ಕೇಶವನ ಶಿಲ್ಪವನ್ನು ಹಾಗೂ ಈತನ ಎರಡೂ ಪಾರ್ಶ್ವದಲ್ಲಿ ಕೊಳಲು, ಮೃದಂಗ ಇನ್ನೂ ಮುಂತಾದ ಸಂಗೀತ ಪರಿಕರಗಳನ್ನು ನುಡಿಸುತ್ತಿರುವ ವಾದ್ಯವೃಂದದವರ ಶಿಲ್ಪಗಳನ್ನು ಬಹಳ ಆಕರ್ಷಕವಾಗಿ ಕೆತ್ತಲಾಗಿದೆ.

ಹೀಗೆ ಮೊಸಳೆಯ ಚನ್ನಕೇಶವ ದೇವಾಲಯ ತನ್ನ ಅನುಪಮ ಶಿಲ್ಪಸೌಂದರ್ಯ ಮತ್ತು ವಾಸ್ತುಶೈಲಿಯಿಂದ ಹೊಯ್ಸಳರ ಕಲಾಪ್ರೌಢಿಮೆಗೆ ಸಾಕ್ಷಿಯಾಗಿ ನಿಂತಿದ್ದು (ಚಿ.ಸಂ.208) ಇದನ್ನು ಮತ್ತು ಶೈವ ದೇವಾಲಯಗಳಲ್ಲಿ ವಿವರಿಸಿರುವ ನಾಗೇಶ್ವರ ದೇವಾಲಯವನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿಸುತ್ತಿದೆ ಹಾಗೂ ನಾಗೇಶ್ವರ ಮತ್ತು ಚನ್ನಕೇಶವ ದೇವಾಲಯಗಳು ಅಕ್ಕಪಕ್ಕದಲ್ಲಿ ತಲೆಯೆತ್ತಿ ನಿಂತಿರುವುದು ಹೊಯ್ಸಳರು ಪ್ರತಿಪಾದಿಸಿದ್ದ ಧಾರ್ಮಿಕ ಸಾಮರಸ್ಯದ ಪ್ರತೀಕವೆಂದೇ ಭಾವಿಸಿದರೆ ಅತಿಶಯೋಕ್ತಿಯಾಗಲಾರದು.

**ಹಿರಿಕಡಲೂರು**

ಈ ಗ್ರಾಮವು ಹಾಸನ ನಗರದಿಂದ ಪೂರ್ವ ದಿಕ್ಕಿಗೆ 15 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಪ್ರಾಚೀನ ಕಾಲದಲ್ಲಿ ಇದು ಒಂದು ಅಗ್ರಹಾರವಾಗಿದ್ದು ಇದನ್ನು ಅರುಂಧತೀಪುರ ಎಂಬ ಹೆಸರಿನಿಂದ ಕರೆಯುತ್ತಿದ್ದರೆಂಬುದು ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ. ಈ ಗ್ರಾಮದಲ್ಲಿ 5 ಶಾಸನಗಳು ಮತ್ತು ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾದ ಚನ್ನಕೇಶವ ಮತ್ತು ಈಶ್ವರ ದೇವಾಲಯಗಳು ಕಂಡು ಬರುತ್ತವೆ. ಆದರೆ ಈ ದೇವಾಲಯಗಳ ನಿರ್ಮಾಣದ ಕಾಲಮಾನ ಮತ್ತು ಅರಸನ ಹೆಸರನ್ನು ತಿಳಿಸುವ ಯಾವುದೇ ಶಾಸನಗಳು ದೊರತಿರುವುದಿಲ್ಲ. ಪ್ರಸ್ತುತ ದೊರೆತಿರುವ 5 ಶಾಸನಗಳಲ್ಲಿ ಎರಡು ಶಾಸನಗಳು[146] ವಿಜಯನಗರ ಅರಸರ ಸಾಮಂತ ಪಾಳೆಯಗಾರ ಆಳ್ವಿಕೆಯ ಕಾಲದ ದಾನ ಶಾಸನಗಳಾಗಿದ್ದು, ಮತ್ತೊಂದು ಶಾಸನ[147] ಹೊಯ್ಸಳ ಅರಸ ಎರಡನೇ ನರಸಿಂಹನ ಕಾಲದ ದಾನ ಶಾಸನವಾಗಿದೆ. ಉಳಿದ ಎರಡು ಶಾಸನಗಳು ಕೇವಲ ಶಾಸನ ಸ್ತುತಿಯನ್ನು ತಿಳಿಸಿದ್ದು ಯಾವುದೇ ಪ್ರಮುಖ ಮಾಹಿತಿ ದೊರೆಯುವುದಿಲ್ಲ. ಇಲ್ಲಿ ಕಂಡು ಬಂದಿರುವ ಈ ಎರಡು ದೇವಾಲಯಗಳಲ್ಲಿ

ಚನ್ನಕೇಶವ ದೇವಾಲಯವು ಶಿಥಿಲಾವಸ್ಥೆಯಲ್ಲಿದ್ದರೆ, ಈಶ್ವರ ದೇವಾಲಯವನ್ನು ಪುನರ್‌ನಿರ್ಮಾಣ ಮಾಡಲಾಗಿದೆ.

**ಚನ್ನಕೇಶವ ದೇವಾಲಯ**

ಇದು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಒಂದು ಎತ್ತರವಾದ ಪ್ರದೇಶದ ಮೇಲೆ ಪೂರ್ವಾಭಿಮುಖವಾಗಿ ಶಿಥಿಲಾವಸ್ಥೆಯಲ್ಲಿ ಕಂಡು ಬಂದಿದ್ದು, (ಚಿ.ಸಂ. 209) ಪ್ರಾರಂಭದಲ್ಲಿ ಇದಕ್ಕೆ ಪ್ರಾಕಾರ ಹಾಗೂ ಇದರೊಳಗೆ ರಂಗನಾಥ ಗುಡಿಯೂ ಇತ್ತೆಂದು ಇಲ್ಲಿನ ಶಾಸನಗಳು[148] ತಿಳಿಸುತ್ತವೆ. ಆದರೆ ಪ್ರಸ್ತುತ ಚನ್ನಕೇಶವ ದೇವಾಲಯದ ಬಳಿ ಯಾವುದೇ ಗುಡಿಯಾಗಲೀ, ಪ್ರಾಕಾರವಾಗಲೀ ಕಂಡು ಬರುವುದಿಲ್ಲ. ಈ ದೇವಾಲಯದ ನಿರ್ಮಾಣದ ಕಾಲಮಾನಕ್ಕೆ ಸಂಬಂಧಿಸಿದಂತೆ ಶಾಸನಗಳು ದೊರೆತಿಲ್ಲವಾದರೂ, ಇದರ ವಾಸ್ತುಶೈಲಿ, ಕಂಬಗಳ ವಿನ್ಯಾಸ ಮತ್ತು ಭುವನೇಶ್ವರಿಗಳು ಇನ್ನೂ ಮುಂತಾದ ಅಂಶಗಳಿಂದ ಇದು ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಖಚಿತವಾಗಿ ಹೇಳಬಹುದಾಗಿದೆ. ಇದು ಏಕಕೂಟ ದೇವಾಲಯವಾಗಿದ್ದು ಕೆಂಪು ಮಿಶ್ರಿತ ಕಣಶಿಲೆಯಿಂದ (ಸೋಪುಗಲ್ಲು) ನಿರ್ಮಾಣವಾಗಿದೆ. ಇದರಲ್ಲಿ ಗರ್ಭಗೃಹ, ಸುಖನಾಸಿ, ನವರಂಗ, ತೆರೆದ ಮುಖಮಂಟಪ ಭಾಗಗಳು ಕಂಡು ಬಂದಿದ್ದು ಸುತ್ತಲೂ ದೇವಾಲಯದ ಅವಶೇಷಗಳು ಬಿದ್ದಿವೆ. ಹಾಗೂ ಮುಖಮಂಟಪದ ಮುಂಭಾಗದಲ್ಲಿ ದ್ವಾರಮಂಟಪದ ಅವಶೇಷದಂತೆ ಭಾಸವಾಗುವ ಒಂದು ಭಾಗವು ಕಂಡು ಬರುತ್ತದೆ.

**ಗರ್ಭಗೃಹ**: ಇದು 7X8 ಅಡಿ ಉದ್ದ ಅಗಲವನ್ನು ಹೊಂದಿದ್ದು ಇದರ ಒಳಭಾಗದಲ್ಲಿ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ. ಆದರೆ ಇದರೊಳಗೆ ಇದ್ದ ಕೇಶವನ ವಿಗ್ರಹವನ್ನು ನವರಂಗದ ಮಧ್ಯದ ಅಂಕಣಕ್ಕೆ ತಂದು ನಿಲ್ಲಿಸಿದ್ದಾರೆ. ಗರ್ಭಗುಡಿಯ ವಿತಾನವು ಸರಳ ಪದ್ಮದ ರಚನೆಯಿಂದ ಕೂಡಿದ್ದು ಇದರ ಬಾಗಿಲುವಾಡವು ವಜ್ರ, ವಲ್ಲೀ, ಸ್ತಂಭ, ವಲ್ಲೀ ಹಾಗೂ ಮತ್ತೊಂದು ಅಲಂಕಾರಿಕ ಕೆತ್ತನೆಯನ್ನು ಹೊಂದಿರುವ ಪಂಚಶಾಖೆಗಳಿಂದ ಕೂಡಿದೆ. ದ್ವಾರಬಂಧದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು, ದ್ವಾರದ ಎರಡೂ ಪಾರ್ಶ್ವದಲ್ಲಿ ಚಾಮರಧಾರಿಣಿಯರೊಂದಿಗೆ ಶಂಖ, ಚಕ್ರ, ಗದಾಧಾರಿಗಳಾಗಿ ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ.

**ಸುಖನಾಸಿ**: ಗರ್ಭಗೃಹದ ನಂತರ ಸುಖನಾಸಿಯು ಯಾವುದೇ ಶಿಲ್ಪಗಳಿಲ್ಲದೇ ಸರಳವಾಗಿದ್ದು, ನವಪದ್ಮಮಂಡಲ ವಿತಾನವನ್ನು ಹೊಂದಿದೆ. ಹಾಗೂ ನವಪದ್ಮಗಳಿರುವ ಶಿಲಾಫಲಕದ ನಾಲ್ಕು

ಪಾರ್ಶ್ವದಲ್ಲಿ ಕೀರ್ತಿಮುಖಗಳ ಅಲಂಕರಣೆಯು ಕಂಡು ಬರುತ್ತದೆ. ಇದರ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು ಇದರ ಮೇಲ್ಭಾಗದ ತೊಲೆಯು ಭಗ್ನವಾಗಿದೆ.

**ನವರಂಗ**: ನವರಂಗವು 24X24 ಅಡಿ ಉದ್ದ ಅಗಲವನ್ನು ಹೊಂದಿದ್ದು ನಾಲ್ಕು ಶ್ರೀಕಾರ ಮಾದರಿಯ ಸ್ತಂಭಗಳನ್ನು (ಚಿ.ಸಂ. 210) ಮತ್ತು 9 ಭುವನೇಶ್ವರಿಗಳನ್ನು ಒಳಗೊಂಡಿದೆ. ಗರ್ಭಗುಡಿಯಲ್ಲಿ ಇರಬೇಕಾದ ಕೇಶವನ ವಿಗ್ರಹವು ನವರಂಗದ ಮಧ್ಯದ ಅಂಕಣದಲ್ಲಿ ಕಂಡು ಬಂದಿದ್ದು,[149] ಇದು 1 ½ ಅಡಿ ಗರುಡ ಪೀಠದ ಮೇಲೆ ಭೂದೇವಿ-ಶ್ರೀದೇವಿ ಸಮೇತನಾಗಿ ಸಮಭಂಗಿಯಲ್ಲಿ ನಿಂತಿದ್ದು 4½ ಅಡಿ ಎತ್ತರವನ್ನು ಹೊಂದಿದೆ. (ಚಿ.ಸಂ.211) ಈ ಶಿಲ್ಪವು ಕಂಠೀ, ಹಾರ, ಮುಕ್ತಾಹಾರ, ಭುಜಕೀರ್ತಿ, ಕೇಯೂರ, ಉದರಬಂಧ, ಹಸ್ತಕಟಕ, ಯಜ್ಞೋಪವೀತ, ವನಮಾಲೆ ಮತ್ತು ಪಾದ ಕಟಕ, ಕಿರೀಟ ಮುಕುಟವನ್ನು ಧರಿಸಿದ್ದು ಬಲ ಹಿಂಬದಿಯ ಕೈಯಲ್ಲಿ ಶಂಖ, ಬಲ ಮುಂಬದಿಯ ಕೈಯಲ್ಲಿ ಪದ್ಮ ಮತ್ತು ಎಡ ಹಿಂಬದಿಯ ಕೈಯಲ್ಲಿ ಚಕ್ರವನ್ನು ಹಿಡಿದಿದೆ. ಆದರೆ ಎಡ ಮುಂಬದಿಯ ಕೈ ಭಗ್ನವಾಗಿದೆ. ಶಿಲ್ಪದ ಹಿಂಬದಿಯಲ್ಲಿ ಸುಂದರವಾದ ಪ್ರಭಾವಳಿಯಿದ್ದು ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಿದ್ದಾರೆ. ನವರಂಗದ ಸ್ತಂಭಗಳು ಲೇತ್ ಯಂತ್ರದ ಸಹಾಯದಿಂದ ನಿರ್ಮಿಸಲ್ಪಟ್ಟಿದ್ದು ಇವು ಪೀಠ, ಚತುರಶ್ರವಾದ ದಿಂಡು, ಘಂಟಾಕಾರದ ದಿಂಡು, ಕಂಠ, ಫಲಕ ಮತ್ತು ಮುಷ್ಠಿಬಂಧ ಪೋತಿಕೆಯನ್ನು ಹೊಂದಿದೆ. ಘಂಟಾಕಾರವನ್ನು ಹೊಂದಿರುವ ಶಲಾಕದ ಮೇಲ್ಭಾಗದಲ್ಲಿ ಅತ್ಯಂತ ಸೂಕ್ಷ್ಮವಾಗಿ ಮಣಿಮಾಲೆಗಳ ರೀತಿಯ ಆಕರ್ಷಕವಾದ ಕೆತ್ತನೆಯು ಕಂಡು ಬರುತ್ತದೆ.[150] ನವರಂಗವು 9 ಆಕರ್ಷಕವಾದ ಭುವನೇಶ್ವರಿಗಳನ್ನು ಹೊಂದಿದ್ದು ಇದರಲ್ಲಿ ನೈರುತ್ಯ ದಿಕ್ಕಿನ ಭುವನೇಶ್ವರಿಯು ಕುಸಿದಿರುತ್ತದೆ. ಮಧ್ಯದ ಅಂಕಣದ ಭುವನೇಶ್ವರಿಯು ಮೂರು ಅಡಿಯಷ್ಟು ಆಳವನ್ನು ಹೊಂದಿದ್ದು, ಸುತ್ತಲೂ ಶಿಲಾಮೊಗ್ಗುಗಳನ್ನು ಮತ್ತು ಮಧ್ಯಭಾಗದಲ್ಲಿ ಪದ್ಮ ಕೇಸರವನ್ನು ಹೊಂದಿದೆ.[151] ಇನ್ನುಳಿದ ಎಲ್ಲಾ ಭುವನೇಶ್ವರಿಗಳು ಸಮತಟ್ಟಾದ ಶಿಲಾಫಲಕದ ಮೇಲೆ ನವಪದ್ಮಗಳ ರಚನೆಯಿಂದ ಕೂಡಿದ್ದು ಆಕರ್ಷಕವಾದ ಕೀರ್ತಿಮುಖಗಳ ಅಲಂಕರಣೆಯನ್ನು ಹೊಂದಿವೆ. ನವರಂಗದ ಭಿತ್ತಿಯು ಯಾವುದೇ ಕೋಷ್ಠಗಳನ್ನು ಮತ್ತು ಅಲಂಕರಣೆಯನ್ನು ಹೊಂದಿರದೆ ಸರಳವಾಗಿದ್ದು ಭಿತ್ತಿಗೆ ಹೊಂದಿಕೊಂಡಂತೆ ವರ್ಧಮಾನ ಮಾದರಿಯ ಸ್ತಂಭಗಳು ಕಂಡು ಬರುತ್ತವೆ. ನವರಂಗದ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದ್ದು, ಇದರ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ದ್ವಾರದ ಎರಡೂ ಪಾರ್ಶ್ವದಲ್ಲಿ ಇಬ್ಬರು ಚಾಮರಧಾರಿಣಿಯರ ನಡುವೆ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. (ಚಿ.ಸಂ.

212) ನವರಂಗದ ಮುಂಭಾಗದಲ್ಲಿ ಒಂದು ಚಿಕ್ಕ ಮುಖಮಂಟಪವಿದ್ದು ಇದರ ಭುವನೇಶ್ವರಿಯು ಪಾದ ಭಾಗದಲ್ಲಿ ಅಷ್ಟಕೋನದ ದಿಂಡುಗಳನ್ನು ಹೊಂದಿದ್ದು ಒಳಭಾಗದಲ್ಲಿ ಮೂರು ವೃತ್ತಾಕಾರಗಳು ಮತ್ತು ಶಿಲಾಮೊಗ್ಗುಗಳ ರಚನೆಯಿಂದ ಕೂಡಿದೆ.

**ತೆರೆದ ಮುಖಮಂಟಪ**: ದೇವಾಲಯದ ಮುಂಭಾಗದಲ್ಲಿ 14 ಶ್ರೀಕಾರ ಸ್ತಂಭಗಳು ಮತ್ತು 8 ಅಂಕಣಗಳನ್ನು ಹೊಂದಿರುವ ಒಂದು ತೆರೆದ ಮುಖಮಂಟಪವಿದೆ.[152](ಚಿ.ಸಂ. 213) ಈ ಮಂಟಪವು ಶಿಥಿಲಾವಸ್ಥೆಯಲ್ಲಿದ್ದು, ಇದರ ಈಶಾನ್ಯ ದಿಕ್ಕಿನ ಛಾವಣಿಯು ಕುಸಿದಿದೆ. ಇದರ ಭುವನೇಶ್ವರಿಗಳು ಅತ್ಯಾಕರ್ಷಕವಾಗಿದ್ದು ಒಂದಕ್ಕಿಂತ ಒಂದು ಭಿನ್ನತೆಯಿಂದ ಕೂಡಿವೆ. ಇವು ನವಪದ್ಮಮಂಡಲ, ಪುಷ್ಪಮಂಡಲ, ಪದ್ಮಕೇಸರವು ಜೋತು ಬಿದ್ದಂತೆ, ಮೂರು ಹಂತಗಳಲ್ಲಿ ವೃತ್ತಾಕಾರವಾಗಿ ಒಳಹೋಗಿರುವಂತೆ ಹಾಗೂ ನಕ್ಷತ್ರಾಕರವಾಗಿ ಕೆತ್ತಲ್ಪಟ್ಟಿವೆ. ಹೀಗೆ ಆಕರ್ಷಕವಾದ ಕೆತ್ತನೆಗಳನ್ನು ಹೊಂದಿರುವ ಭುವನೇಶ್ವರಿಯ ಕೆಲವು ಭಾಗಗಳು ಕುಸಿಯುವ ಹಂತವನ್ನು ತಲುಪಿದ್ದು, ಮುಂದಿನ ದಿನಗಳಲ್ಲಿ ಈ ತೆರೆದ ಮಂಟಪವನ್ನು ಜೀರ್ಣೋದ್ಧಾರಗೊಳಸದಿದ್ದರೇ ಅತ್ಯಮೂಲ್ಯವಾದ ಕಲಾಕೃತಿಗಳು ನಷ್ಟವಾಗುವುದಂತೂ ಖಚಿತ ಎನ್ನಬಹುದಾಗಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ಈ ದೇವಾಲಯದ ಅಧಿಷ್ಠಾನವು ಭಾಗಶಃ ಮುಚ್ಚಿಹೋಗಿದ್ದು ಪ್ರಸ್ತುತ ಎರಡು ಅಡಿಯಷ್ಟು ಮಾತ್ರ ಕಾಣಿಸುತ್ತದೆ. ಇದರಲ್ಲಿ ಪದ್ಮ, ಆಲಿಂಗ ಮತ್ತು ವೇದಿ ಭಾಗಗಳಿವೆ. ಅಧಿಷ್ಠಾನದ ನಂತರ ಭಿತ್ತಿಯು ಶಿಥಿಲಾವಸ್ಥೆಯಲ್ಲಿ ಕಂಡು ಬರುತ್ತದೆ. (ಚಿ.ಸಂ. 214) ನವರಂಗದ ದಕ್ಷಿಣ ದಿಕ್ಕಿನ ಹೊರಭಿತ್ತಿಯು ಕುಸಿದಿದ್ದು, ಭಿತ್ತಿಯ ನಿರ್ಮಾಣದಲ್ಲಿ ಇಟ್ಟಿಗೆ ಮತ್ತು ಮಣ್ಣನ್ನು ಸಹ ಬಳಸಿರುವುದು ಈ ಕುಸಿದಿರುವ ಭಾಗದಿಂದ ಕಂಡು ಬರುತ್ತದೆ. ದಕ್ಷಿಣ ದಿಕ್ಕಿನ ಭಿತ್ತಿಯನ್ನು ಹೊರತುಪಡಿಸಿ, ದೇವಾಲಯದ ಉಳಿದ ಭಾಗದ ಭಿತ್ತಿಯು ಸರಳವಾಗಿದ್ದು ಬ್ರಹ್ಮಕಾಂತ ಭಿತ್ತಿಪಾದಗಳ ಅಲಂಕರಣೆಯಿಂದ ಕೂಡಿದೆ. ಭಿತ್ತಿಯ ಅಂತಿಮ ಭಾಗದಲ್ಲಿ ಉತ್ತರ, ವಲ್ಲಭಿ ಮತ್ತು ಕಪೋತ ಭಾಗಗಳಿವೆ.

**ಶಿಖರ**: ಇದು 9 ತಲಗಳು ಅಥವಾ ಕಪೋತಗಳನ್ನು ಹೊಂದಿದ್ದು ಇದರ ಮೇಲೆ ವೇದಿಕಾ ನಂತರ ಚತುರಶ್ರವಾದ ಅದೋಪದ್ಮದ ರಚನೆಯಿದ್ದು ಈ ಮಾದರಿಯ ಶಿಖರಗಳನ್ನು ಫಾಂಸಾನ ಶೈಲಿಯ ಶಿಖರಗಳೆಂದು ಕರೆಯಲಾಗುತ್ತದೆ. (ಚಿ.ಸಂ. 215) ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯದ ವಿಷ್ಣು, ಕಾಳಿ ಮತ್ತು ಭೂತನಾಥ ಗುಡಿಗಳ ಮೇಲ್ಭಾಗದಲ್ಲಿ ಹಾಗೂ ಹೆರಗಿನ ಕೀರ್ತಿನಾರಾಯಣ ದೇವಾಲಯದಲ್ಲಿ ಈ ಫಾಂಸಾನ ಶೈಲಿಯ ಶಿಖರಗಳನ್ನು

ನೋಡಬಹುದಾಗಿದೆ. ಈ ದೇವಾಲಯದ ಶಿಖರವೂ ಸಹ ಶಿಥಿಲಾವಸ್ಥೆಯಲ್ಲಿದ್ದು ಇದರ ಮುಂಭಾಗದಲ್ಲಿ ಶಾಲಾಕಾರದ ಸುಖನಾಸ ಭಾಗದ ರಚನೆಯಿದೆ.

**ದೇವಾಲಯದ ಅವಶೇಷಗಳು:** ಸ್ತಂಭಗಳ ದಿಂಡು, ಕಂಠ, ಮಂಡಿ, ಫಲಕ, ಕೋಷ್ಠಗಳ ಮೇಲ್ಭಾಗದಲ್ಲಿ ನಿರ್ಮಿಸುವ ಶಿಖರಾಕೃತಿಗಳು, ಭುವನೇಶ್ವರಿಯ ಫಲಕಗಳು, ಭಿತ್ತಿಯ ಅಲಂಕಾರಿಕ ಸ್ತಂಭಗಳು ಇನ್ನೂ ಮುಂತಾದ ಅವಶೇಷಗಳು ಈ ದೇವಾಲಯದ ಸುತ್ತಲೂ ಬಿದ್ದಿವೆ. (ಚಿ.ಸಂ. 216) ಹಾಗೂ ದೇವಾಲಯದ ತೆರೆದ ಮಂಟಪದ ಸ್ವಲ್ಪ ದೂರದಲ್ಲಿ ದ್ವಾರಮಂಟಪದ ರಚನೆಯನ್ನು ಹೋಲುವ ಕೆಲವು ಅವಶೇಷಗಳು ಕಂಡು ಬರುತ್ತವೆ. ಇದರ ಪಕ್ಕದಲ್ಲೇ ದೇವಾಲಯದ ನಿರ್ಮಾಣಕ್ಕೆ ಬಳಸಿದ್ದ ರಾಶಿ ರಾಶಿ ಕಲ್ಲುಗಳು ಸಹ ಕಂಡು ಬರುತ್ತವೆ. ಆದ್ದರಿಂದ ಹಿರಿಕಡಲೂರಿನ ಕ್ರಿ.ಶ.1563ರ ಶಾಸನದಲ್ಲಿ[153] ತಿಳಿಸಿರುವಂತೆ ಈ ಚನ್ನಕೇಶವ ದೇವಾಲಯಕ್ಕೆ ಒಂದು ಪ್ರಾಕಾರ ಹಾಗೂ ಇದರೊಳಗೆ ಒಂದು ಗುಡಿ ಇತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ಕಾಲಾನಂತರದಲ್ಲಿ ಇವುಗಳು ನಾಶ ಹೊಂದಿರುವುದು ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಪ್ರಸ್ತುತ ಈ ಚನ್ನಕೇಶವ ದೇವಾಲಯವೂ ಸಹ ಶಿಥಿಲಾವಸ್ಥೆಯಲ್ಲಿದ್ದು, ಇದನ್ನು ಜೀರ್ಣೋದ್ಧಾರಕ್ಕೆ ಒಳಪಡಿಸಿದರೆ ಇದು ಒಂದು ಉತ್ತಮ ಸ್ಮಾರಕವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ ಎಂದು ಅಭಿಪ್ರಾಯಿಸಬಹುದು.

**ಹರಿಹರಪುರ**

ಈ ಗ್ರಾಮವು ಹಾಸನ ನಗರದಿಂದ ಪೂರ್ವ ದಿಕ್ಕಿಗೆ 24 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಇಲ್ಲಿ ಹರಿಹರೇಶ್ವರ, ಬೀರಲಿಂಗೇಶ್ವರ ಮತ್ತು ದೊಡ್ಡಮ್ಮದೇವಿ ದೇವಾಲಯಗಳು ಹಾಗೂ ಒಂದು ಶಾಸನ ಕಂಡು ಬರುತ್ತದೆ. ಈ ಶಾಸನವು ಶಕವರುಷದ 1256ನೇ ಕಾಲಮಾನವನ್ನು ಮಾತ್ರ ತಿಳಿಸಿದ್ದು ಪಠ್ಯವು ಇಷ್ಟಕ್ಕೆ ನಿಂತು ಹೋಗಿದೆ.[154] ಮೇಲೆ ಹೆಸರಿಸಿದ ದೇವಾಲಯಗಳಲ್ಲಿ ಹರಿಹರೇಶ್ವರ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದು ಬೀರಲಿಂಗೇಶ್ವರ ಮತ್ತು ದೊಡ್ಡಮ್ಮ ದೇವಾಲಯಗಳು ಇತ್ತೀಚಿನ ಕಾಲದಲ್ಲಿ ನಿರ್ಮಾಣವಾಗಿವೆ.

**ಹರಿಹರೇಶ್ವರ ದೇವಾಲಯ**

ಇದು ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ತ್ರಿಕೂಟಾಚಲ ಮಾದರಿಯಲ್ಲಿ ಕಂಡು ಬಂದಿದೆ. (ಚಿ.ಸಂ. 217) ಈ ದೇವಾಲಯದ ನಿರ್ಮಾಣವನ್ನು ತಿಳಿಸುವ ಯಾವುದೇ ಶಾಸನಗಳು ದೊರೆತಿಲ್ಲವಾದರೂ, ಇದರ ವಾಸ್ತುಶೈಲಿಯ ಆಧಾರದ ಮೇಲೆ ಇದನ್ನು ಹೊಯ್ಸಳರ ಕಾಲಘಟ್ಟಕ್ಕೆ ಅನ್ವಯಿಸಬಹುದಾಗಿದೆ. ದೇವಾಲಯವು ಮೂರು ಗರ್ಭಗುಡಿ,

ಪ್ರಧಾನ ಗರ್ಭಗುಡಿಯ ಮುಂದೆ ಸುಖನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ದುರಾದೃಷ್ಟವಶಾತ್ ಈ ಮೂರು ಗರ್ಭಗುಡಿಯಲ್ಲಿ ಇಂದು ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ. ಪೂರ್ವಾಭಿಮುಖವಾಗಿರುವ ಮುಖ್ಯ ಗರ್ಭಗುಡಿಯಲ್ಲಿ ಹರಿಹರ ಮೂರ್ತಿ, ದಕ್ಷಿಣ ದಿಕ್ಕಿನ ಗರ್ಭಗುಡಿಯಲ್ಲಿ ಸರಸ್ವತಿ ಮತ್ತು ಉತ್ತರ ದಿಕ್ಕಿನ ಗರ್ಭಗುಡಿಯಲ್ಲಿ ಅನಂತಶಯನ ಮೂರ್ತಿಗಳು ಇದ್ದವೆಂದು ತಿಳಿದು ಬರುತ್ತದೆ. ಆದರೆ ಡೆನ್ಮಾರ್ಕಿನ ಎಡ್ವರ್ಡ್ ಲೊವಿನ್‌ತಲ್ ಎಂಬ ಅಧಿಕಾರಿಗೆ ಹೊಯ್ಸಳ ಶಿಲ್ಪಗಳನ್ನು ಸಂಗ್ರಹಿಸುವ ಹವ್ಯಾಸವಿದ್ದು, ಈ ಶಿಲ್ಪಗಳನ್ನು ಈ ಗ್ರಾಮದಿಂದ ತೆಗೆದುಕೊಂಡು ಹೋಗಿ ಡೆನ್ಮಾರ್ಕಿನ ಕೊಪೆನ್‌ಹೆಗನ್‌ನ ನ್ಯಾಷನಲ್ ಮ್ಯೂಸಿಯಂನಲ್ಲಿ ಇಟ್ಟನೆಂದು ತಿಳಿದು ಬರುತ್ತದೆ.[155]

**ಪಶ್ಚಿಮ ದಿಕ್ಕಿನ ಗರ್ಭಗುಡಿ ಮತ್ತು ಸುಖನಾಸಿ:** ಪೂರ್ವಾಭಿಮುಖವಾಗಿ ಕಂಡು ಬರುವ ಈ ಗರ್ಭಗುಡಿಯು ದೇವಾಲಯದ ಪ್ರಧಾನ ಗರ್ಭಗುಡಿಯಾಗಿದ್ದು 7X7 ಅಡಿ ಉದ್ದ-ಅಗಲವನ್ನು ಹೊಂದಿದೆ. ಇದರಲ್ಲಿ ಕೇವಲ ಪೀಠ ಭಾಗವಿದ್ದು ಇದರ ಮುಂದಿನ ಫಲಕದಲ್ಲಿ ನಂದಿ ಮತ್ತು ಗರುಡ ಶಿಲ್ಪವನ್ನು ಕೆತ್ತಲಾಗಿದೆ. ಈ ಪೀಠದ ಮೇಲೆ ಹರಿಹರಮೂರ್ತಿಯ ವಿಗ್ರಹವು ಪ್ರತಿಷ್ಠಾಪಿತವಾಗಿದ್ದುದರಿಂದ ಶೈವ ಮತ್ತು ವೈಷ್ಣವ ಪರಂಪರೆ ಎರಡನ್ನೂ ಪ್ರತಿಬಿಂಬಿಸಲು ನಂದಿ ಮತ್ತು ಗರುಡ ಶಿಲ್ಪವನ್ನು ಕಂಡರಿಸಲಾಗಿದೆ. ಇದರ ದ್ವಾರಬಂಧವು ಸರಳವಾಗಿದ್ದು ಲಲಾಟಬಿಂಬದಲ್ಲಿ ಚಾಮರಧಾರಿಣಿಯರ ನಡುವೆ ಹರಿಹರ ಶಿಲ್ಪವಿದೆ. ದ್ವಾರದ ಎಡಭಾಗದಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಕನಿದ್ದರೆ, ಬಲಭಾಗದಲ್ಲಿ ತ್ರಿಶೂಲ, ಢಮರು, ಗದಾ ಮತ್ತು ತರ್ಜನಿ ಹಸ್ತಮುದ್ರೆಯೊಂದಿಗೆ ದ್ವಿಭಂಗಿಯಲ್ಲಿ ನಿಂತಿರುವ ಶೈವ ದ್ವಾರಪಾಲಕನ ಶಿಲ್ಪವಿದೆ. ಈ ಗರ್ಭಗುಡಿಯು ಸರಳ ಪದ್ಮದ ರಚನೆಯಿರುವ ನಾಭಿಚ್ಛಂಧ ಮಾದರಿಯ ವಿತಾನವನ್ನು ಹೊಂದಿದೆ. ಗರ್ಭಗೃಹದ ಮುಂದೆ ಸುಖನಾಸಿಯು 7X7 ಅಡಿ ಉದ್ದ ಅಗಲವನ್ನು ಹಾಗೂ ಸರಳ ಪದ್ಮ ರಚನೆಯಿರುವ ನಾಭಿಚ್ಛಂಧ ಮಾದರಿಯ ವಿತಾನವನ್ನು ಹೊಂದಿದೆ. ಇದರ ದ್ವಾರಬಂಧವು ಎರಡೂ ಪಾರ್ಶ್ವಗಳಲ್ಲಿ ಜಾಲಾಂಧ್ರಗಳನ್ನು ಹೊಂದಿದ್ದು ಇವುಗಳ ಕೆಳಭಾಗದಲ್ಲಿ ದ್ವಾರಪಾಲಕರ ಬದಲಿಗೆ ರತಿ-ಮನ್ಮಥರ ಶಿಲ್ಪಗಳನ್ನು ಕೆತ್ತಲಾಗಿದೆ ಹಾಗೂ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. (ಚಿ.ಸಂ. 218)

**ಉತ್ತರ ದಿಕ್ಕಿನ ಗರ್ಭಗುಡಿ:** ದಕ್ಷಿಣಾಭಿಮುಖವಾಗಿ ಕಂಡು ಬರುವ ಈ ಗರ್ಭಗುಡಿಯು 7X7 ಅಡಿ ಉದ್ದ ಅಗಲವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಗರುಡ ಪೀಠವಿದೆ. ಪ್ರಾರಂಭದಲ್ಲಿ

ಈ ಪೀಠದ ಮೇಲೆ ಅನಂತಶಯನ ಮೂರ್ತಿಯು ಇತ್ತೆಂದು ತಿಳಿದು ಬರುತ್ತದೆಯಾದರೂ, 1897ರ ನಂತರ ಇದನ್ನು ತೆಗೆದುಕೊಂಡು ಹೋಗಿ ಡೆನ್ಮಾರ್ಕಿನ ಕೋಪೆನ್‌ಹೆಗನ್‌ನ ನ್ಯಾಷನಲ್ ಮ್ಯೂಸಿಯಂನಲ್ಲಿ ಇಡಲಾಗಿದೆ.[156](ಚಿ.ಸಂ. 219) ಗರ್ಭಗೃಹದ ದ್ವಾರಬಂಧವು ಸರಳವಾಗಿದ್ದು, ದ್ವಾರದ ಎರಡು ಬದಿಯಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳು ಮತ್ತು ಲಲಾಟಬಿಂಬದಲ್ಲಿ ಆಕರ್ಷಕವಾದ ಅನಂತಶಯನ ಶಿಲ್ಪವಿದೆ. (ಚಿ.ಸಂ. 220)

**ದಕ್ಷಿಣ ದಿಕ್ಕಿನ ಗರ್ಭಗುಡಿ**: ಉತ್ತರಾಭಿಮುಖವಾಗಿರುವ ಈ ಗರ್ಭಗುಡಿಯು 7X7 ಅಡಿ ಉದ್ದ-ಅಗಲವನ್ನು ಹೊಂದಿದ್ದು, ಇದರಲ್ಲಿಯೂ ಸಹ ಯಾವುದೇ ಶಿಲ್ಪಗಳು ಕಂಡು ಬರದೇ ಕೇವಲ ಹಂಸಪೀಠವಿದೆ. ಪ್ರಾರಂಭದಲ್ಲಿ ಇದರಲ್ಲಿ ಸರಸ್ವತಿ ಶಿಲ್ಪವಿತ್ತೆಂದು ದಾಖಲೆಗಳು ತಿಳಿಸುತ್ತವೆ.[157] ಆದರೆ ಇದರಲ್ಲಿ ಸರಸ್ವತಿಯ ಬದಲಿಗೆ ಬ್ರಹ್ಮನ ಶಿಲ್ಪವು ಇದ್ದಿರಬಹುದೆಂದು ಊಹಿಸಬಹುದು. ಏಕೆಂದರೆ ಹಂಸ ಪೀಠವು ಬ್ರಹ್ಮ ಮತ್ತು ಸರಸ್ವತಿ ಇಬ್ಬರಿಗೂ ಸಲ್ಲುತ್ತದೆಯಾದ್ದರಿಂದ ಬಹುಶಃ ದೇವಾಲಯದ ಈ ಗರ್ಭಗುಡಿಯಲ್ಲಿ ತ್ರಿಮೂರ್ತಿ ಕಲ್ಪನೆಯ ಆಧಾರದ ಮೇಲೆ ಬ್ರಹ್ಮನ ಶಿಲ್ಪವನ್ನು ಪ್ರತಿಷ್ಠಾಪಿಸಿದ್ದಿರಬಹುದೆಂದು ಊಹಿಸಬಹುದಾಗಿದೆ. ಈ ಗರ್ಭಗೃಹವು ಸರಳವಾದ ದ್ವಾರಬಂಧವನ್ನು ಹೊಂದಿದ್ದು ದ್ವಾರದ ಎರಡೂ ಪಾರ್ಶ್ವದಲ್ಲಿ ಪಾಶ, ಅಂಕುಶ, ಗದಾ ಮತ್ತು ಪದ್ಮವನ್ನು ಹಿಡಿದು ದ್ವಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರ ಶಿಲ್ಪಗಳನ್ನು ಹಾಗೂ ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿ ಕುಳಿತ ಸರಸ್ವತಿಯ ಶಿಲ್ಪವನ್ನು ಕೆತ್ತಲಾಗಿದೆ. ಈ ಶಿಲ್ಪದ ಎರಡೂ ಕಡೆ ಸ್ತಂಭ ಪಂಜರಗಳ ಮಾದರಿಯನ್ನು ನಿರ್ಮಿಸಲಾಗಿದೆ.

**ನವರಂಗ**: ಇದು 18X20 ಅಡಿ ಉದ್ದ-ಅಗಲವನ್ನು ಮತ್ತು ನಾಲ್ಕು ಶ್ರೀಕಾರ ಮಾದರಿಯ ಸ್ತಂಭಗಳನ್ನು ಒಳಗೊಂಡಿದೆ. (ಚಿ.ಸಂ. 221) ಈ ಸ್ತಂಭಗಳು ಪೀಠ, ಚತುರಶ್ರವಾದ ದಿಂಡು, ಘಂಟಾಕಾರದ ಶಲಾಕ, ಕಂಠ, ಮಂಡಿ, ಫಲಕ ಮತ್ತು ಮುಷ್ಠಿಬಂಧ ಮೋದಿಗೆಯನ್ನು ಹೊಂದಿವೆ. ನವರಂಗದ ಭುವನೇಶ್ವರಿಗಳು ಅತ್ಯಾಕರ್ಷಕವಾಗಿ ಮೂಡಿ ಬಂದಿದ್ದು ಇವುಗಳು ಬಹುಕೋನಗಳಲ್ಲಿ ಒಳಹೋದಂತೆ, ಅಷ್ಟಕೋನಗಳಲ್ಲಿ, ನಕ್ಷತ್ರಾಕಾರದಲ್ಲಿ, ವೃತ್ತಾಕಾರವಾಗಿ ಒಳಹೋದಂತೆ, ಪದ್ಮಕೇಸರವು ಜೋತು ಬಿದ್ದಂತೆ. ಹೀಗೆ ಹಲವು ಮಾದರಿಗಳಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿ ಕೆತ್ತಲ್ಪಟ್ಟಿವೆ. ನವರಂಗದ ಮಧ್ಯ ಅಂಕಣದ ಭುವನೇಶ್ವರಿಯು ಸುಂದರವಾಗಿ ಕೆತ್ತಲ್ಪಟ್ಟಿದ್ದು ಕೀರ್ತಿಮುಖಗಳು ಮತ್ತು ಶಿಲಾಮೊಗ್ಗುಗಳ ಅಲಂಕರಣದಿಂದ ಕೂಡಿದ್ದು ಇದರ ಮಧ್ಯಭಾಗದ ಶಿಲಾಫಲಕದಲ್ಲಿ ತಾಂಡವೇಶ್ವರನ ಸುತ್ತಲೂ ದಿಕ್ಕಿಗನುಸಾರವಾಗಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ.[158] ಈ ಭುವನೇಶ್ವರಿಯು ಪಾದಭಾಗದಲ್ಲಿ ಅಷ್ಟಕೋನದ

ದಿಂಡುಗಳನ್ನು ಹೊಂದಿದ್ದು ಈ ದಿಂಡುಗಳ ಮೇಲೆಯೂ ಸಹ ಅಷ್ಟದಿಕ್ಪಾಲಕರ ಶಿಲ್ಪಗಳಿವೆ ಹಾಗೂ ಈ ದಿಂಡಿನ ಮೇಲ್ಭಾಗದಲ್ಲಿ ವಿವಿಧ ಸಂಗೀತ ಪರಿಕರಗಳನ್ನು ನುಡಿಸುತ್ತಿರುವ ವಾದ್ಯವೃಂದದವರ ಶಿಲ್ಪಗಳಿವೆ. (ಚಿ.ಸಂ. 222) ಒಟ್ಟಿನಲ್ಲಿ ನವರಂಗದ ಈ ಮುಖ್ಯ ಭುವನೇಶ್ವರಿಯು ಅಷ್ಟದಿಕ್ಪಾಲಕರು, ಸಂಗೀತಗಾರರ ಶಿಲ್ಪಗಳು ಮತ್ತು ಕೀರ್ತಿಮುಖ ಹಾಗೂ ಶಿಲಾಮೊಗ್ಗುಗಳ ಅಲಂಕರಣೆಯಿಂದ ವಿಶಿಷ್ಟವಾಗಿ ರೂಪುಗೊಂಡಿದೆ ಎಂದು ಹೇಳಬಹುದು. ನವರಂಗದಲ್ಲಿ ಸುಖನಾಸಿ ದ್ವಾರದ ಪಾರ್ಶ್ವ ಭಿತ್ತಿಗಳಲ್ಲಿ ಎರಡು ದೇವಕೋಷ್ಠಗಳ ನಿರ್ಮಾಣವಿದ್ದು, ಬಲಭಾಗದ ದೇವಕೋಷ್ಠದಲ್ಲಿ ಇತ್ತೀಚಿನ ಕಾಲದ ಗಣೇಶ ಶಿಲ್ಪವನ್ನು ಪ್ರತಿಷ್ಠಾಪಿಸಿದ್ದರೆ, ಎಡ ಭಾಗದ ಕೋಷ್ಠವು ಯಾವುದೇ ಶಿಲ್ಪಗಳಿಲ್ಲದೇ ಖಾಲಿ ಇರುತ್ತದೆ. ನವರಂಗದ ದ್ವಾರಬಂಧವು ಸರಳವಾಗಿದ್ದು, ಇದರ ಲಲಾಟಬಿಂಬದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಹಾಗೂ ದ್ವಾರದ ಬಲಭಾಗದಲ್ಲಿ ತ್ರಿಶೂಲ, ಢಮರು, ಗದಾ ಮತ್ತು ವ್ಯಾಖ್ಯಾನ ಹಸ್ತ ಮುದ್ರೆಯನ್ನು ಹೊಂದಿರುವ ಶೈವ ದ್ವಾರಪಾಲಕ ಮತ್ತು ಎಡ ಭಾಗದಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದಿರುವ ವೈಷ್ಣವ ದ್ವಾರಪಾಲಕನ ಶಿಲ್ಪಗಳಿವೆ.

**ಮುಖಮಂಟಪ**: ನವರಂಗದ ಮುಂಭಾಗದಲ್ಲಿ ಮುಖಮಂಟಪವಿದ್ದು, ಇದರಲ್ಲಿ ಕಕ್ಷಾಸನಗಳು ಮತ್ತು ಎರಡು ಪೂರ್ವಾಶ್ರ ಸ್ತಂಭಗಳು ಕಂಡು ಬರುತ್ತವೆ. ಹಾಗೂ ಇದರ ಭುವನೇಶ್ವರಿಯು ಸರಳ ಪದ್ಮದ ಅಲಂಕರಣೆಯನ್ನು ಹೊಂದಿರುವ ನಾಭಿಚ್ಛಂಧ ಮಾದರಿಯಿಂದ ಕೂಡಿದೆ. ಮುಖಮಂಟಪಕ್ಕೆ ಪ್ರವೇಶಿಸಲು ಸೋಪಾನಗಳಿದ್ದು ಇವುಗಳ ಎರಡೂ ಬದಿಯಲ್ಲಿ ಆನೆಯ ಶಿಲ್ಪಗಳನ್ನು ನಿಲ್ಲಿಸಲಾಗಿದೆ. ವಿವಿಧ ಆಭರಣಗಳ ಅಲಂಕರಣೆಯಿಂದ ಕೂಡಿರುವ ಈ ಆನೆ ಶಿಲ್ಪಗಳ ಸೊಂಡಿಲು ಮತ್ತು ದಂತಗಳು ಭಗ್ನವಾಗಿವೆ.

**ಅಧಿಷ್ಠಾನ ಮತ್ತು ಭಿತ್ತಿ**: ಈ ದೇವಾಲಯವು ನಾಲ್ಕು ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದ್ದು, ಇದರಲ್ಲಿ ಉಪಾನ, ಜಗತಿ, ಪದ್ಮ, ಚತುರಶ್ರ ಕುಮುದ, ದಂತಪಂಕ್ತಿ, ಪಟ್ಟಿಕಾ ಮತ್ತು ವೇದಿ ಭಾಗಗಳನ್ನು ಒಳಗೊಂಡಿದೆ. ಅಧಿಷ್ಠಾನದ ನಂತರ ಭಿತ್ತಿಯ ನಿರ್ಮಾಣವಿದ್ದು, ಇದು ಯಾವುದೇ ಶಿಲ್ಪಾಲಂಕರಣಗಳನ್ನು ಹೊಂದಿರದೇ ಸರಳವಾದ ಅರೆಗಂಬಗಳ ರಚನೆಯಿಂದ ಕೂಡಿದೆ. (ಚಿ.ಸಂ. 223)

**ಶಿಖರ**: ಈ ದೇವಾಲಯದ ಮೂರು ಗರ್ಭಗುಡಿಗಳ ಮೇಲ್ಭಾಗದಲ್ಲಿ ಶಿಖರದ ನಿರ್ಮಾಣವು ಕಂಡು ಬರುತ್ತದೆ. ಈ ಶಿಖರಗಳು 9 ತಲಗಳನ್ನು ಹೊಂದಿದ್ದು, ಈ ತಲಗಳ ಮೇಲ್ಭಾಗದಲ್ಲಿ ಒಂದು ವೇದಿಕೆ, ಈ ವೇದಿಕೆಯ ಮೇಲೆ ಬೋರಲು ಹಾಕಿದ ಕಮಲದ ರೀತಿಯ ಪುಷ್ಕರ

ಶಿಲೆಯ ರಚನೆಯಿದೆ. (ಚಿ.ಸಂ. 224) ಪುಷ್ಕರ ಶಿಲೆಯ ಮೇಲ್ಭಾಗದಲ್ಲಿ ಅಂತಿಮವಾಗಿ ಸುಂದರವಾದ ಸ್ತೂಪಿಯ ನಿರ್ಮಾಣವಿದೆ. ಈ ರೀತಿಯ ಲಕ್ಷಣಗಳನ್ನು ಹೊಂದಿರುವ ಶಿಖರಗಳನ್ನು ಪಾಂಸಾನ ಶೈಲಿಯ ಶಿಖರಗಳೆಂದು ಕರೆಯಲಾಗಿದ್ದು ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯ, ಹೆರಗಿನ ಕೀರ್ತಿನಾರಾಯಣ, ಗೊರೂರಿನ ತ್ರಿಕೂಟೇಶ್ವರ ದೇವಾಲಯಗಳಲ್ಲೂ ಈ ಮಾದರಿಯ ಶಿಖರಗಳು ಕಂಡು ಬರುತ್ತವೆ.

**ಚನ್ನಕೇಶವ ದೇವಾಲಯ–ನಿಟ್ಟೂರು**

ಈ ದೇವಾಲಯವು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಒಂದು ಎತ್ತರವಾದ ಪ್ರದೇಶದ ಮೇಲೆ ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. (ಚಿ.ಸಂ. 225) ಈ ಗ್ರಾಮದಲ್ಲಿ 7 ಶಾಸನಗಳು[159] ದೊರೆತಿದ್ದು, ದುರಾದೃಷ್ಟವಶಾತ್ ಯಾವ ಶಾಸನವೂ ಕೂಡ ಈ ದೇವಾಲಯದ ನಿರ್ಮಾಣ ಮತ್ತು ಇದಕ್ಕೆ ದಾನ ನೀಡಿದ ವಿಚಾರಗಳನ್ನು ತಿಳಸುವುದಿಲ್ಲ. ಆದರೆ ಈ ಗ್ರಾಮವು ಹೊಯ್ಸಳರ ಪ್ರಧಾನ ಆಳ್ವಕೆಗೆ ಒಳಪಟಟಿದ್ದಂತಹ ನೀರ್ಗುಂದ ನಾಡಿನ ಪ್ರಮುಖ ಅಗ್ರಹಾರವಾಗಿದ್ದರಿಂದ ಹಾಗೂ ಈ ದೇವಾಲಯದ ವಾಸ್ತು ಶೈಲಿ ಮತ್ತು ಕೆಲವು ಭಾಗಗಳು ಹೊಯ್ಸಳ ಶೈಲಿಯನ್ನು ಹೋಲುವುದರಿಂದ ಈ ದೇವಾಲಯವು ಹೊಯ್ಸಳರ ಕಾಲದಲ್ಲಿಯೇ ನಿರ್ಮಾಣವಾಗಿರಬಹುದೆಂದು ಹೇಳಬಹುದಾಗಿದೆ. ಇದು ಗರ್ಭಗುಡಿ, ಸುಖನಾಸಿ, ನವರಂಗ ಮತ್ತು ನವರಂಗದ ಬಲ ಭಾಗದಲ್ಲಿ ಮತ್ತೊಂದು ಗುಡಿಯನ್ನು ಹೊಂದಿದ್ದು ದ್ವಿಕೂಟಾಚಲ ದೇವಾಲಯವಾಗಿ ಕಂಡು ಬರುತ್ತದೆ.

**ಗರ್ಭಗೃಹ**: ಇದು 7X7 ಅಡಿ ಉದ್ದ–ಅಗಲವನ್ನು ಹೊಂದಿದ್ದು ಪೂರ್ವಾಭಿಮುಖವಾಗಿ ಕಂಡು ಬರುತ್ತದೆ. ಇದರ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಗರುಡ ಪೀಠದ ಮೇಲೆ 4 ಅಡಿ ಎತ್ತರದ ಅತ್ಯಂತ ಸುಂದರವಾದ ಕೇಶವನ ವಿಗ್ರಹವು ಪ್ರತಿಷ್ಠಾಪಿತವಾಗಿದೆ. (ಚಿ.ಸಂ. 226) ಇದು ಬಲ ಹಿಂಬದಿಯ ಕೈಯಲ್ಲಿ ಶಂಖ, ಬಲ ಮುಂಬದಿಯ ಕೈಯಲ್ಲಿ ಪದ್ಮ, ಎಡ ಹಿಂಬದಿಯ ಕೈಯಲ್ಲಿ ಚಕ್ರ ಮತ್ತು ಎಡ ಮುಂಬದಿಯ ಕೈಯಲ್ಲಿ ಗದೆಯನ್ನು ಹಿಡಿದು, ಭೂದೇವಿ–ಶ್ರೀದೇವಿ ಸಮೇತವಾಗಿರುವ ಸ್ಥಾನಕ ಮೂರ್ತಿಯಾಗಿದೆ. ಸರ್ವಾಭರಣಗಳಿಂದ ಭೂಷಿತವಾಗಿರುವ ಈ ಶಿಲ್ಪದ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಿದ್ದಾರೆ. ಈ ಗರ್ಭಗೃಹವು ಸರಳ ಪದ್ಮದ ರಚನೆಯನ್ನು ಹೊಂದಿರುವ ನಾಭಿಛಂಧ ಮಾದರಿಯ ವಿತಾನವನ್ನು ಹೊಂದಿದೆ. ಇದರ ಬಾಗಿಲುವಾಡವು ಸರಳವಾಗಿದ್ದು, ದ್ವಾರಬಂಧದ ಮೇಲ್ಭಾಗದಲ್ಲಿ ಐದು ಚಿಕ್ಕ ಶಿಖರದ ಮಾದರಿಗಳನ್ನು ಕೆತ್ತಿದ್ದಾರೆ.

**ಸುಖನಾಸಿ**: ಗರ್ಭಗೃಹದ ನಂತರ ಸುಖನಾಸಿಯಿದ್ದು ಇದು ಸಹ 7X7 ಅಡಿ ಉದ್ದ-ಅಗಲವನ್ನು ಹೊಂದಿದ್ದು, ಸರಳವಾದ ನಾಭಿಛ್ಛಂಧ ವಿತಾನವನ್ನು ಹಾಗೂ ಜಾಲಾಂಧ್ರಗಳಿಂದ ಕೂಡಿದ ಬಾಗಿಲುವಾಡವನ್ನು ಹೊಂದಿದೆ. ದ್ವಾರಬಂಧದ ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ. ಆದರೆ ದ್ವಾರಬಂಧದ ಮೇಲ್ಭಾಗದಲ್ಲಿ ನಾಲ್ಕು ಚಿಕ್ಕ ಶಿಖರಾಕೃತಿಗಳನ್ನು ನಿರ್ಮಿಸಿದ್ದಾರೆ.

**ದಕ್ಷಿಣದ ಗರ್ಭಗೃಹ**: ನವರಂಗದ ಬಲಭಾಗದಲ್ಲಿ ಉತ್ತರಾಭಿಮುಖವಾಗಿ 7X7 ಅಡಿ ವಿಸ್ತೀರ್ಣದ ಒಂದು ಗುಡಿಯಿದ್ದು, ಇದರ ಮಧ್ಯ ಭಾಗದಲ್ಲಿ 1 ½ ಅಡಿ ಎತ್ತರದ ಗರುಡ ಪೀಠದ ಮೇಲೆ 4 ಅಡಿ ಎತ್ತರದ ಅತ್ಯಂತ ಆಕರ್ಷಕವಾದ ವೇಣುಗೋಪಾಲನ ಶಿಲ್ಪವು ಪ್ರತಿಷ್ಠಾಪನೆಯಾಗಿದೆ. ಸರ್ವಾಭರಣಗಳಿಂದ ಅಲಂಕೃತವಾಗಿ ತ್ರಿಭಂಗಿಯಲ್ಲಿ ನಿಂತಿರುವ ಈ ಶಿಲ್ಪದ ಎರಡೂ ಪಾರ್ಶ್ವದ ಪಟ್ಟಿಕೆಗಳಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮ, ಕೈಮುಗಿದು ಕುಳಿತಿರುವ ಭಕ್ತರು ಹಾಗೂ ಗೋವುಗಳ ಶಿಲ್ಪಗಳನ್ನು ಕೆತ್ತಲಾಗಿದೆ. (ಚಿ.ಸಂ. 227)

**ನವರಂಗ**: ನವರಂಗವು 18X18 ಅಡಿ ಉದ್ದ-ಅಗಲವನ್ನು ಹೊಂದಿದ್ದು ಇದರಲ್ಲಿ 9 ಭುವನೇಶ್ವರಿಗಳು ಮತ್ತು ನಾಲ್ಕು ಸ್ತಂಭಗಳು ಕಂಡು ಬರುತ್ತವೆ. ಈ ಸ್ತಂಭಗಳು ಪೀಠ, ಚತುರಶ್ರವಾದ ದಿಂಡು, 16 ಕೋನ, 8 ಕೋನ, 16 ಕೋನ, 4 ಕೋನದ ದಿಂಡು, ಕಂಠ, ಮಂಡಿ-ಫಲಕ ಮತ್ತು ಮುಷ್ಠಿಬಂಧ ಪೋತಿಕೆಯನ್ನು ಹೊಂದಿವೆ. (ಚಿ.ಸಂ. 228) ಈ ಮಾದರಿಯ ಸ್ತಂಭಗಳು ಇದೇ ಗ್ರಾಮದ ಸೋಮೇಶ್ವರ ದೇವಾಲಯದಲ್ಲಿ ಕಂಡು ಬಂದಿದ್ದು ಇವು ಕಲ್ಯಾಣಿ ಚಾಳುಕ್ಯರ ಪ್ರಾರಂಭದ ಶೈಲಿಯನ್ನು ಹೋಲುತ್ತವೆ ಎಂದು ಹೇಳಬಹುದಾಗಿದೆ. ನವರಂಗದ ಭುವನೇಶ್ವರಿಗಳು ಸರಳ ಪದ್ಮದ ಕೆತ್ತನೆಯಿರುವ ನಾಭಿಛ್ಛಂಧ ಮಾದರಿಯಲ್ಲಿ ನಿರ್ಮಾಣವಾಗಿವೆ. ಇದರ ದ್ವಾರಬಂಧವು ಸರಳ ಅಲಂಕರಣೆಯಿಂದ ಕೂಡಿದ್ದು ಲಲಾಟಬಿಂಬದಲ್ಲಿ ಸುಂದರವಾದ ಕಾಳಿಂಗಮರ್ಧನ ಶಿಲ್ಪವಿದೆ ಹಾಗೂ ದ್ವಾರಬಂಧದ ಮೇಲ್ಭಾಗದಲ್ಲಿ 5 ಚಿಕ್ಕ ಶಿಖರಾಕೃತಿಗಳನ್ನು ನಿರ್ಮಿಸಲಾಗಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ದೇವಾಲಯವು ನಾಲ್ಕು ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದ್ದು ಇದರಲ್ಲಿ ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ, ಗಳ ಮತ್ತು ಮಹಾಪಟ್ಟಿ ಭಾಗಗಳು ಕಂಡು ಬರುತ್ತವೆ. ಈ ಅಧಿಷ್ಠಾನದ ಮೇಲೆ ಭಿತ್ತಿಯ ನಿರ್ಮಾಣವಿದ್ದು ಇದರಲ್ಲಿ ಅರೆಗಂಬಗಳ ಕೆತ್ತನೆಯನ್ನು ಮಾತ್ರ ಮಾಡಲಾಗಿದೆ. (ಚಿ.ಸಂ. 229) ಹಾಗೂ ಭಿತ್ತಿಯ ಕೆಲವು ಭಾಗಗಳಲ್ಲಿ ಅಲ್ಲಲ್ಲಿ ಭಿತ್ತಿ ಸ್ತಂಭಗಳ ಕೆತ್ತನೆಯೂ ಗೋಚರಿಸುತ್ತದೆ. ಒಟ್ಟಾರೆಯಾಗಿ ಈ ದೇವಾಲಯದ

ಭಿತ್ತಿಯು ಸರಳ ಲಕ್ಷಣಗಳನ್ನು ಹೊಂದಿದೆ ಎಂದು ಅಭಿಪ್ರಾಯಿಸಬಹುದು. ದೇವಾಲಯಕ್ಕೆ ಶಿಖರದ ನಿರ್ಮಾಣವು ಕಂಡು ಬರುವುದಿಲ್ಲ ಹಾಗೂ ಇದರ ಕೈಪಿಡಿ ಗೋಡೆಯನ್ನು ಇತ್ತೀಚಿನ ಇಟ್ಟಿಗೆ ಮತ್ತು ಸಿಮೆಂಟ್‌ಅನ್ನು ಬಳಸಿ ನಿರ್ಮಿಸಲಾಗಿದೆ.

**ಕೆಲವತ್ತಿ**: ಈ ಗ್ರಾಮವು ಹಾಸನ ನಗರದಿಂದ ಉತ್ತರ ದಿಕ್ಕಿಗೆ 15 ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಇದು ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ನಿರ್ಗುಂದ ನಾಡಿಗೆ ಸೇರಿದ್ದ ಒಂದು ಪ್ರಮುಖ ಅಗ್ರಹಾರವಾಗಿದ್ದು, ಇಲ್ಲಿ ಮೂರು ಶಾಸನಗಳು[160] ಮತ್ತು ತಿರುಮಲ, ಲಕ್ಷ್ಮೀನಾರಾಯಣ ಹಾಗೂ ಮಲ್ಲೇಶ್ವರ ದೇವಾಲಯಗಳು ಕಂಡು ಬರುತ್ತವೆ. ಲಕ್ಷ್ಮೀನಾರಾಯಣ ದೇವಾಲಯವು ಹೊಯ್ಸಳರ ಆಳ್ವಿಕೆಯ ಕಾಲಘಟ್ಟದಲ್ಲಿ ನಿರ್ಮಾಣವಾಗಿದ್ದರೆ ಉಳಿದ ದೇವಾಲಯಗಳು ಇತ್ತೀಚಿನ ಕಾಲದಲ್ಲಿ ಹೊಸದಾಗಿ ನಿರ್ಮಾಣವಾಗಿರುತ್ತವೆ. ಈ ಗ್ರಾಮದ ಕ್ರಿ.ಶ.1123ರ ಶಾಸನವು[161] ವಿಷ್ಣುವರ್ಧನನ ಸಹೋದರ ಉದಯಾದಿತ್ಯನು ಕೆಲವತ್ತಿ ಗ್ರಾಮದಲ್ಲಿ ಮರಣ ಹೊಂದಿದ ವಿಚಾರವನ್ನು ಹಾಗೂ ಈತನ ನೆನಪಿಗೋಸ್ಕರ ವಿಷ್ಣುವರ್ಧನನು ಪರೋಕ್ಷ ವಿನಯದ ರೂಪದಲ್ಲಿ ಕೆಲವೆತ್ತಿ ಗ್ರಾಮವನ್ನು ಅಗ್ರಹಾರವನ್ನಾಗಿ ಮಾರ್ಪಡಿಸಿ ದಾನ ನೀಡಿದ ವಿಚಾರವನ್ನು ಪ್ರಸ್ತಾಪಿಸುತ್ತದೆ.

**ಲಕ್ಷ್ಮೀನಾರಾಯಣ ದೇವಾಲಯ**: ಇದು ಗ್ರಾಮದ ಮಧ್ಯ ಭಾಗದಲ್ಲಿ ಮಲ್ಲೇಶ್ವರ ದೇವಾಲಯದ ಪಕ್ಕದಲ್ಲಿ ಪಶ್ಚಿಮಾಭಿಮುಖವಾಗಿ ಶಿಥಿಲಾವಸ್ಥೆಯಲ್ಲಿ ಕಂಡು ಬರುತ್ತದೆ. (ಚಿ.ಸಂ. 230) ಇದೇ ಗ್ರಾಮದ ಕ್ರಿ.ಶ.1267ರ ಶಾಸನವು[162] ಈ ದೇವಾಲಯದಲ್ಲಿ ಅಲ್ಲಾಳಪೆರುಮಾಳ್ ದೇವರನ್ನು ಪ್ರತಿಷ್ಠಾಪಿಸಿದ ವಿಚಾರವನ್ನು ತಿಳಿಸುತ್ತದೆ. ಗರ್ಭಗುಡಿ, ಸುಖನಾಸಿ ಭಾಗವನ್ನು ಮಾತ್ರ ಹೊಂದಿರುವ ಈ ದೇವಾಲಯದ ಉಳಿದ ಭಾಗಗಳು ಕಂಡು ಬರುವುದಿಲ್ಲ.

**ಗರ್ಭಗೃಹ**: ಇದು 6X6 ಅಡಿ ಉದ್ದ-ಅಗಲವನ್ನು ಹೊಂದಿದ್ದು ಇದರ ಮಧ್ಯ ಭಾಗದಲ್ಲಿ 1 ½ ಅಡಿ ಎತ್ತರದ ಗರುಡ ಪೀಠದ ಮೇಲೆ ನಾಲ್ಕು ಅಡಿ ಎತ್ತರದ ನಾರಾಯಣ ಶಿಲ್ಪವಿದೆ. ಸ್ಥಾನಕ ಭಂಗಿಯಲ್ಲಿರುವ ಈ ಶಿಲ್ಪವು ಬಲ ಹಿಂಬದಿಯ ಕೈಯಲ್ಲಿ ಪದ್ಮ, ಬಲ ಮುಂಬದಿಯ ಕೈಯಲ್ಲಿ ಶಂಖ, ಎಡ ಹಿಂಬದಿಯ ಕೈಯಲ್ಲಿ ಗದಾ ಮತ್ತು ಎಡ ಮುಂಬದಿಯ ಕೈಯಲ್ಲಿ ಚಕ್ರವನ್ನು ಹಿಡಿದಿದ್ದು, ಕಂಠೀ, ಹಾರ, ಮುಕ್ತಾಹಾರ, ಭುಜಕೀರ್ತಿ, ಹಸ್ತಕಟಕ, ಅಂಗುಲೀಯಕಗಳು, ಉದರಬಂಧ, ಯಜ್ಞೋಪವೀತ, ವನಮಾಲೆ ಮತ್ತು ಪಾದಕಟಕ ಇನ್ನೂ ಮುಂತಾದ ಆಭರಣಗಳಿಂದ ಅಲಂಕೃತವಾಗಿದೆ. (ಚಿ.ಸಂ. 231) ಹಾಗೂ ಈ ಶಿಲ್ಪದ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಗರ್ಭಗುಡಿಯು ಸರಳ

ಪದ್ಮದ ರಚನೆಯಿರುವ ನಾಭಿಚ್ಛಂದ ವಿತಾನವನ್ನು ಹೊಂದಿದ್ದು ಇದರ ದ್ವಾರಬಂಧವು ಯಾವುದೇ ಅಲಂಕರಣೆಗಳಿಲ್ಲದೇ ಸರಳವಾಗಿದೆ.

**ಸುಖನಾಸಿ:** ಇದು 6x6 ಅಡಿ ಉದ್ದ-ಅಗಲವನ್ನು ಹೊಂದಿದ್ದು ಇದರ ಭುವನೇಶ್ವರಿಯು ಯಾವುದೇ ಅಲಂಕರಣಗಳಿಲ್ಲದೇ ಸರಳವಾಗಿದೆ. ಇದರ ಬಾಗಿಲುವಾಡವು ಆಕರ್ಷಕವಾಗಿದ್ದು ದ್ವಾರದ ಎರಡೂ ಬದಿಯಲ್ಲಿ ಪೂರ್ಣಕುಂಭಗಳ ಕೆತ್ತನೆಯಿದೆ. ಇವುಗಳ ಮೇಲ್ಭಾಗದಲ್ಲಿ ಪುಷ್ಪದಳಗಳನ್ನು ಹೊಂದಿರುವ ಅಲಂಕಾರಿಕವಾದ ರಚನೆಯು ಕಂಡು ಬರುತ್ತದೆ. ಸುಖನಾಸಿಯ ನಂತರದಲ್ಲಿ ದೇವಾಲಯದ ಯಾವುದೇ ಭಾಗಗಳು ಕಂಡು ಬರುವುದಿಲ್ಲ. ದೇವಾಲಯದ ಎಡಪಾರ್ಶ್ವ ಮತ್ತು ಹಿಂಭಾಗದಲ್ಲಿ ಮಾತ್ರ ಅಧಿಷ್ಠಾನವಿದ್ದು, ಉಳಿದ ಭಾಗಗಳಲ್ಲಿ ಭಗ್ನವಾಗಿರುತ್ತದೆ. (ಚಿ.ಸಂ. 232) ಈ ಅಧಿಷ್ಠಾನದ ರಚನಾ ಕ್ರಮವನ್ನು ನೋಡಿದಾಗ ಇದೊಂದು ಸುಂದರವಾದ ದೇವಾಲಯವಾಗಿದ್ದಂತೆ ತೋರುತ್ತದೆ. ದುರಾದೃಷ್ಟವಶಾತ್ ಇದರ ಇತರ ಭಾಗಗಳು ನಷ್ಟವಾಗಿದ್ದು ಕೇವಲ ಗರ್ಭಗೃಹ ಮತ್ತು ಸುಖನಾಸಿ ಭಾಗಗಳು ಉಳಿದು ಬಂದಿವೆ.

## ಜೈನ ಬಸದಿಗಳು

ಭಾರತದ ಪ್ರಾಚೀನ ಧರ್ಮಗಳಲ್ಲಿ ಜೈನ ಧರ್ಮವೂ ಸಹ ಒಂದು. ಇದಕ್ಕೆ ಸಂಬಂಧಿಸಿದಂತೆ ಜೈನ ಮತ್ತು ಜೈನೇತರ ಗ್ರಂಥಗಳು, ಶಿಲಾ ಶಾಸನಗಳು, ಪ್ರಾಚ್ಯವಸ್ತು ಸ್ಮಾರಕಗಳು ಇವೆಲ್ಲವೂ ಜೈನ ಧರ್ಮದ ಐತಿಹಾಸಿಕ ಹಿನ್ನೆಲೆಯನ್ನು ತಿಳಿಸುತ್ತವೆ.[163] ವರ್ಧಮಾನ ಮಹಾವೀರ ಈ ಧರ್ಮದ ಸ್ಥಾಪಕನೆಂಬುದು ತಿಳಿದು ಬರುತ್ತದೆಯಾದರೂ ಈತನಿಗೂ ಮುಂಚೆ 23 ತೀರ್ಥಂಕರರಿಂದ ಜೈನ ಧರ್ಮ ಹುಟ್ಟಿತೆಂದು ಜೈನರು ಗುರುತಿಸುತ್ತಾರೆ. ಉತ್ತರ ಭಾರತದಿಂದ ಜೈನ ಧರ್ಮವು ಕ್ರಿಸ್ತ ಪೂರ್ವದಲ್ಲಿ ಮೌರ್ಯ ಚಕ್ರವರ್ತಿ ಚಂದ್ರಗುಪ್ತ ಹಾಗೂ ಆತನ ಗುರು ಭದ್ರಬಾಹು ಕರ್ನಾಟಕದ ಶ್ರವಣಬೆಳಗೊಳಕ್ಕೆ ಬಂದು ಇಲ್ಲೇ ಸಲ್ಲೇಖನ ವ್ರತ ಕೈಗೊಂಡರೆಂಬ ಐತಿಹಾಸಿಕ ಘಟನೆಯೊಂದಿಗೆ ಕರ್ನಾಟಕದ ಜೈನ ಪರಂಪರೆಯ ಇತಿಹಾಸ ಪ್ರಾರಂಭವಾಗುತ್ತದೆ. ಎರಡು ಸಾವಿರ ವರ್ಷಗಳ ಹಿಂದಿನಿಂದಲೂ ಜೈನ ಧರ್ಮವು ತನ್ನ ವಿಶಿಷ್ಟ ಆಚರಣೆಗಳ ಮೂಲಕ ಕರ್ನಾಟಕದಲ್ಲಿ ಇಂದಿಗೂ ಉಳಿದು ಬಂದಿದೆ.

ಭಾರತೀಯ ವಾಸ್ತುಶಿಲ್ಪ ಶೈಲಿಗಳಲ್ಲಿ ಜೈನ ವಾಸ್ತುಶಿಲ್ಪ ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ವಿಸ್ತಾರವಾಗಿಯೂ, ವೈವಿಧ್ಯಮಯವಾಗಿಯೂ ಬೆಳೆಯಿತು. ಬೌದ್ಧ ಮತ್ತು ವೈದಿಕ ಧರ್ಮಗಳ ಜೊತೆ ಜೊತೆಯಾಗಿ ಬೆಳೆದು ಬಂದು ಭಾರತೀಯ ಕಲಾ ವೈಭವಕ್ಕೆ ಮಹತ್ತರವಾದ

ಕಾಣಿಕೆಯನ್ನು ನೀಡಿದೆ. ಬೌದ್ಧ ಮತ್ತು ವೈದಿಕ ವಾಸ್ತುಶಿಲ್ಪ ಬೆಳೆದಂತೆ ಇದೂ ಸಹ ಆಯಾ ಪ್ರದೇಶಗಳಲ್ಲಿ ಪ್ರಚಲಿತವಿದ್ದಂತಹ ವಾಸ್ತುಶಿಲ್ಪ ಶೈಲಿಯನ್ನೇ ಅನುಸರಣೆ ಮಾಡಿಕೊಂಡು ಕೆಲವು ವೈಶಿಷ್ಟ್ಯಗಳೊಡನೆ ತನ್ನ ಬಸದಿಗಳಲ್ಲಿಯೂ ಅಳವಡಿಸಿಕೊಂಡಿತು.[164]

ಜೈನ ದೇವಾಲಯವನ್ನು ಬಸದಿ ಎಂದು ಕರೆಯಲಾಗುತ್ತದೆ. ಜೈನ ಸನ್ಯಾಸಿಗಳು ಮಳೆಗಾಲದ ನಾಲ್ಕು ತಿಂಗಳುಗಳನ್ನು ಹೊರತುಪಡಿಸಿ ಉಳಿದ ಕಾಲದಲ್ಲಿ ವಿಹರಿಸುತ್ತಿರಬೇಕೆಂಬ ನಿಯಮವಿದ್ದರೂ ಕ್ರಮೇಣ ಈ ನಿಯಮ ಸಡಿಲಗೊಂಡು ಮುನಿಗಳು ಬಸದಿಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಈ ಬಸದಿಗಳು ಜೈನ ಮುನಿಗಳ ವಾಸಗೃಹಗಳೂ ಆಗಿದ್ದವು. ಈ ರೀತಿಯಾಗಿ ಉಗಮಗೊಂಡಂತಹ ಜೈನ ದೇವಾಲಯಗಳನ್ನು ಬಸದಿ, ಕೋಇಯಿಲ್, ಚೈತ್ಯಾಲಯ, ಚೇದಿಯ ಎಂದು ಸಹ ಕರೆಯುತ್ತಾರೆ. ಬಸದಿಗಳನ್ನು ಕಟ್ಟಿದರೆ ರಾಜನ ಮತ್ತು ಪ್ರಜೆಗಳ ಯಶಸ್ಸು, ಐಶ್ವರ್ಯವೂ ವೃದ್ಧಿಯಾಗುತ್ತದೆ ಎಂಬ ನಂಬಿಕೆಯಿದ್ದುದರಿಂದ ಬಸದಿಗಳನ್ನು ಕಟ್ಟಿಸಿದರು. ಕರ್ನಾಟಕಕ್ಕೆ ಜೈನಧರ್ಮ ಕ್ರಿಸ್ತಪೂರ್ವ ಕಾಲದಲ್ಲಿಯೇ ಬಂದರೂ ಆ ಕಾಲದಲ್ಲಿ ಇಲ್ಲಿ ಜೈನ ಬಸದಿಗಳು ನಿರ್ಮಾಣವಾಗಿರುವುದಕ್ಕೆ ಪ್ರಾಚೀನ ದಾಖಲೆಗಳು ಲಭ್ಯವಿಲ್ಲ. ದೊರೆತಿರುವ ಆಧಾರಗಳೆಲ್ಲವೂ ಕ್ರಿ.ಶ.6ನೆಯ ಶತಮಾನದ ಅನಂತರದ ಕಾಲದ್ದಾಗಿವೆ. ಕ್ರಿ.ಶ.6ನೆಯ ಶತಮಾನಕ್ಕಿಂತಲೂ ಹಿಂದಿನ ಕಾಲದಿಂದಲೂ ಸಹ ಬಸದಿಗಳು ನಿರ್ಮಿತವಾಗಿದ್ದರೂ ಸಹ ನಮಗೆ ಅವುಗಳ ಬಗೆಗೆ ಖಚಿತವಾದ ಆಧಾರಗಳು ದೊರೆಯುವುದಿಲ್ಲ. ಕರ್ನಾಟಕದಲ್ಲಿ ನಮಗೆ ದೊರೆಯುವ ಅತ್ಯಂತ ಪ್ರಾಚೀನವಾದ ಬಸದಿ ಎಂದರೆ ಕ್ರಿ.ಶ.634ರ ಐಹೊಳೆಯ ಮೇಗುತಿ ಜಿನಾಲಯ. ಇಮ್ಮಡಿ ಪುಲಿಕೇಶಿಯ ಆಶ್ರಿತನಾದ ರವಿಕೀರ್ತಿಯಿಂದ ನಿರ್ಮಿತವಾದ ಈ ಜಿನಾಲಯ ಇಂದಿಗೂ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡಿದೆ.[165]

ಕರ್ನಾಟಕದಲ್ಲಿ ಅನೇಕ ರಾಜಮನೆತನಗಳು ನೀಡಿದ ಪ್ರೋತ್ಸಾಹದಿಂದಾಗಿ ಜೈನ ವಾಸ್ತುಶಿಲ್ಪ ವೈವಿಧ್ಯಮಯವಾಗಿ ಬೆಳೆಯಲು ಅವಕಾಶವಾಯಿತು. ಗಂಗರ ಕಾಲದಲ್ಲಿ ಜೈನ ವಾಸ್ತುಶಿಲ್ಪ ಸಮೃದ್ಧಿಯಾಗಿದ್ದು, ಶ್ರವಣಬೆಳಗೊಳದ ಇಂದ್ರಗಿರಿಯಲ್ಲಿ ಜೈನಮೂರ್ತಿ ಶಿಲ್ಪದ ಪರಾಕಾಷ್ಠೆಯಾದ ಗೊಮ್ಮಟೇಶ್ವರ ಶಿಲ್ಪವು ಚಾವುಂಡರಾಯನಿಂದ ನಿರ್ಮಾಣವಾಯಿತು. ಗಂಗರ ನಂತರ ಆಳ್ವಿಕೆ ನಡೆಸಿದ ಹೊಯ್ಸಳರು ಕೂಡ ಜೈನ ವಾಸ್ತುಶಿಲ್ಪಕ್ಕೆ ಪ್ರೇರಣೆಯನ್ನು ನೀಡಿದರು. ಇದರಿಂದ ಕಂಬದಹಳ್ಳಿ, ಬಸ್ತಿಹಳ್ಳಿ, ಜಿನನಾಥಪುರ, ಅರಸೀಕೆರೆ, ಹನಸೋಗೆ ಇನ್ನೂ ಮುಂತಾದ ಸ್ಥಳಗಳಲ್ಲಿ ಜೈನ ಬಸದಿಗಳು ನಿರ್ಮಾಣವಾದವು.[166]

ಹೊಯ್ಸಳ ರಾಜಮನೆತನದ ಪ್ರಾರಂಭಿಕ ಅರಸರು ಮೂಲತಃ ಜೈನೀಯರಾಗಿದ್ದರಿಂದ ಸ್ವಾಭಾವಿಕವಾಗಿ ಇವರು ಜೈನಧರ್ಮದ ಬಗ್ಗೆ ಒಲವನ್ನು ಹೊಂದಿದ್ದರು. ವಿಷ್ಣುವರ್ಧನನು ಶ್ರೀರಾಮಾನುಜಾಚಾರ್ಯರ ಪ್ರಭಾವದಿಂದಾಗಿ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದರೂ ಸಹ ಜೈನ ಧರ್ಮವನ್ನು ಕಡೆಗಣಿಸಲಿಲ್ಲ. ಹಾಗೂ ಈತನ ನಂತರ ಆಳ್ವಿಕೆ ನಡೆಸಿದ ಅರಸರು ಕೂಡ ಜೈನ ಮತಕ್ಕೆ ಪ್ರೋತ್ಸಾಹವನ್ನು ನೀಡಿದರು. ಇದರ ಪರಿಣಾಮವಾಗಿ ಹಾಸನ ಜಿಲ್ಲೆಯಾದ್ಯಂತ ಹಾಗೂ ಇವರ ಆಳ್ವಿಕೆಯ ಇತರ ಪ್ರದೇಶಗಳಲ್ಲಿ ಹಲವಾರು ಜೈನ ಬಸದಿಗಳು ನಿರ್ಮಾಣವಾದವು.

ಹಾಸನ ತಾಲೂಕು ಸಹ ಹೊಯ್ಸಳರ ನೇರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಇಲ್ಲಿಯೂ ಸಹ ಹಲವಾರು ಜೈನ ಬಸದಿಗಳು ನಿರ್ಮಾಣವಾದವು. ಆದರೆ ಈ ಬಸದಿಗಳು ಇಂದು ಕೇವಲ ಶಾಸನ ಉಲ್ಲೇಖಕ್ಕೆ ಮಾತ್ರ ಸೀಮಿತವಾಗಿವೆ. ಅಂದರೆ ಬಹುಪಾಲು ಬಸದಿಗಳು ಇಂದು ಶಿಥಿಲವಾಗಿವೆ ಹಾಗೂ ಕಣ್ಮರೆಯಾಗಿವೆ. ಪ್ರಸ್ತುತ ಮರ್ಕುಲಿಯ ಆದಿನಾಥ ಬಸದಿಯು ಸುಸ್ಥಿತಿಯಲ್ಲಿದ್ದರೆ, ಶಾಂತಿಗ್ರಾಮದ ಶಾಂತಿನಾಥ ಬಸದಿಯು ಪುನರ್ ನಿರ್ಮಾಣಗೊಂಡಿದೆ. ಹೆರಗಿನ ಪಾರ್ಶ್ವನಾಥ ಬಸದಿಯು ಭಗ್ನಾವಶೇಷವಾಗಿ ಕಂಡು ಬರುತ್ತದೆ. ಮುಗುಳೂರಿನಲ್ಲಿ ಎರಡು ಜೈನ ಬಸದಿಗಳು ನಿರ್ಮಾಣವಾದವು ಎಂದು ಶಾಸನಗಳು ಉಲ್ಲೇಖಿಸುತ್ತವೆಯಾದರೂ ಇಂದು ಇವುಗಳಲ್ಲಿ ಒಂದು ಬಸದಿ ಭಗ್ನ ಸ್ಥಿತಿಯಲ್ಲಿದ್ದರೆ, ಇನ್ನೊಂದು ಬಸದಿ ಕಣ್ಮರೆಯಾಗಿದೆ. ಕೆಲವು ಬಸದಿಗಳ ದ್ವಾರಬಂಧಗಳು ಇತರ ಶೈವ, ವೈಷ್ಣವ ದೇವಾಲಯಗಳಲ್ಲಿ ಕಂಡು ಬರುತ್ತವೆ. ಈ ನಿಟ್ಟಿನಲ್ಲಿ ಹಾಸನ ತಾಲೂಕಿನ ಜೈನ ಬಸದಿಗಳನ್ನು ಅವಲೋಕನಕ್ಕೆ ಒಳಪಡಿಸಿದಾಗ ಬಹುತೇಕ ಬಸದಿಗಳು ನಾಶವಾಗಿರುವುದಂತೂ ಸತ್ಯ ಸಂಗತಿಯಾಗಿದೆ.

**ಶಾಂತಿನಾಥ ಬಸದಿ–ಶಾಂತಿಗ್ರಾಮ**

ಇದು ಗ್ರಾಮದ ಮಧ್ಯಭಾಗದಲ್ಲಿ ಉತ್ತರಾಭಿಮುಖವಾಗಿ ಕಂಡು ಬರುತ್ತದೆ. ಈ ಬಸದಿಯನ್ನು ಹೊಯ್ಸಳ ವಿಷ್ಣುವರ್ಧನನ ಪತ್ನಿ ಶಾಂತಲೆಯು ಕ್ರಿ.ಶ.1093ರಲ್ಲಿ ಜೀರ್ಣೋದ್ಧಾರಪಡಿಸಿದಳೆಂಬುದು ದಾಖಲೆಗಳಿಂದ ತಿಳಿದು ಬರುತ್ತದೆ.[167] ಆದರೆ ಇದರ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸ್ಪಷ್ಟವಾದ ಶಾಸನಗಳು ದೊರೆತಿರುವುದಿಲ್ಲ. ಹೊಯ್ಸಳರ ಪ್ರಾರಂಭದ ಅರಸರು ಮತ್ತು ಶಾಂತಲೆಯು ಜೈನೀಯರಾಗಿದ್ದರಿಂದ ಹಾಗೂ ಈ ಬಸದಿಯ ಸುಮತಿ ತೀರ್ಥಂಕರ ಶಿಲ್ಪವು ಹೊಯ್ಸಳ ಶೈಲಿಯ ಶಿಲ್ಪ ಲಕ್ಷಣಗಳನ್ನು ಹೊಂದಿರುವುದರಿಂದ ಈ ಬಸದಿಯು ಹೊಯ್ಸಳರ ಕಾಲದಲ್ಲಿ ನಿಮಾಣವಾಗಿರಬಹುದೆಂದು ಹೇಳಬಹುದಾಗಿದೆ. ಈ

ಬಸದಿಯು ಗರ್ಭಗೃಹ, ಸುಖನಾಸಿ ಮತ್ತು ನವರಂಗವನ್ನು ಹೊಂದಿದ್ದು, ಗರ್ಭಗೃಹ ಮತ್ತು ಸುಖನಾಸಿಯನ್ನು ಹೊರತುಪಡಿಸಿ ಉಳಿದ ಭಾಗಗಳನ್ನು ಇತ್ತೀಚಿನ ಕಾಲದಲ್ಲಿ ನಿರ್ಮಿಸಲಾಗಿದೆ. (ಚಿ.ಸಂ. 233)

**ಗರ್ಭಗೃಹ ಮತ್ತು ಸುಖನಾಸಿ**: ಇದು 6X6 ಅಡಿ ವಿಸ್ತೀರ್ಣವನ್ನು ಹೊಂದಿದ್ದು ಇದರ ಮಧ್ಯಭಾಗದಲ್ಲಿ ಎರಡು ಅಡಿ ಸಿಂಹ ಪೀಠದ ಮೇಲೆ ಅಮೃತಶಿಲೆಯಿಂದ ರೂಪಿಸಿದ 1½ ಅಡಿ ಎತ್ತರದ ಶಾಂತಿನಾಥನ ಶಿಲ್ಪವಿದ್ದು, ಇದು ಯೋಗಮುದ್ರೆಯಲ್ಲಿ ಪದ್ಮಾಸನದಲ್ಲಿದೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದ್ದು ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳ ಕೆತ್ತನೆ ಇರುವುದಿಲ್ಲ. (ಚಿ.ಸಂ. 234) ಗರ್ಭಗೃಹದ ನಂತರ ಸುಖನಾಸಿಯಿದ್ದು, ಇದು ಸರಳಪದ್ಮದ ರಚನೆಯಿರುವ ವಿತಾನವನ್ನು ಹೊಂದಿದೆ. ಸುಖನಾಸಿಯ ದ್ವಾರಬಂಧವು ಸರಳವಾಗಿದ್ದು ಇದರ ಲಲಾಟಬಿಂಬದಲ್ಲಿ ಇಬ್ಬರು ಚಾಮರಧಾರಿಣಿಯರ ನಡುವೆ ಪದ್ಮಾಸನದಲ್ಲಿ ಕುಳಿತಿರುವ ಜಿನಶಿಲ್ಪವಿದೆ.

**ನವರಂಗ**: ಇದು 15X15 ಅಡಿ ಉದ್ದ ಅಗಲವನ್ನು ಹೊಂದಿದ್ದು, ಇಟ್ಟಿಗೆ ಮತ್ತು ಸಿಮೆಂಟಿನಿಂದ ಇತ್ತೀಚಿನ ಕಾಲದಲ್ಲಿ ನಿರ್ಮಾಣವಾಗಿದೆ. ಪ್ರಾರಂಭದಲ್ಲಿ ಗರ್ಭಗೃಹದಲ್ಲಿ ಇದ್ದಂತಹ ಜಿನಶಿಲ್ಪವನ್ನು ಇಂದು ನವರಂಗದ ಬಲಭಾಗದಲ್ಲಿ ಇಟ್ಟಿದ್ದಾರೆ. (ಚಿ.ಸಂ. 235) ಈ ಶಿಲ್ಪವು ಸಮಭಂಗಿಯಲ್ಲಿ ನಿಂತಿದ್ದು ಸುಂದರವಾದ ಪ್ರಭಾವಳಿಯನ್ನು ಹೊಂದಿದೆ.

**ಅಧಿಷ್ಠಾನ ಮತ್ತು ಭಿತ್ತಿ**: ಈ ಬಸದಿಯು ಗರ್ಭಗುಡಿ ಮತ್ತು ಸುಖನಾಸಿ ಭಾಗದಲ್ಲಿ ಮಾತ್ರ ಅಧಿಷ್ಠಾನವನ್ನು ಹೊಂದಿದ್ದು ಇದರ ಮೇಲಿನ ಭಿತ್ತಿಯು ಮೂಲ ಸ್ವರೂಪದ್ದಾಗಿದೆ. ಆದರೆ ನವರಂಗದ ಭಿತ್ತಿ, ಕೈಪಿಡಿ ಗೋಡೆ ಮತ್ತು ಗರ್ಭಗೃಹದ ಮೇಲಿನ ಶಿಖರ ಎಲ್ಲವೂ ಇತ್ತೀಚಿನ ನಿರ್ಮಾಣವಾಗಿವೆ. ಈ ಬಸದಿಯ ಮೂಲ ಅವಶೇಷಗಳು ಪ್ರಾಕಾರದ ಆಗ್ನೇಯ ದಿಕ್ಕಿನಲ್ಲಿ ಬಿದ್ದಿವೆ.

**ಪಾರ್ಶ್ವನಾಥ ಬಸದಿ**: ಬಸದಿಯು ಹೆರಗು ಗ್ರಾಮದ ಮಧ್ಯಭಾಗದಲ್ಲಿ ಒಂದು ಎತ್ತರವಾದ ಪ್ರದೇಶದ ಮೇಲೆ ಶಿಥಿಲಾವಸ್ಥೆಯಲ್ಲಿ ಕಂಡು ಬರುತ್ತದೆ. (ಚಿ.ಸಂ. 236) ಇದನ್ನು ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1155ರಲ್ಲಿ ಮಹಾಪ್ರಧಾನ ಮತ್ತು ಹಿರಿಯ ಹಡವಳ ಚಾವಿಮಯ್ಯನ ಪತ್ನಿ ಜಕ್ಕವ್ವೆಯು ನಿರ್ಮಿಸಿದಳೆಂದು ಇಲ್ಲಿನ ಶಾಸನದಿಂದ ತಿಳಿದು ಬರುತ್ತದೆ.[168] ಈ ಬಸದಿಯು ಪ್ರಾರಂಭದಲ್ಲಿ ತ್ರಿಕೂಟಾಚಲವಾಗಿತ್ತೆಂದು ತಿಳಿದು ಬರುತ್ತದೆ.[169] ಆದರೆ ಪ್ರಸ್ತುತ ಅಂತರಾಳ, ನವರಂಗದ ಸ್ತಂಭಗಳು ಮತ್ತು ಭಿತ್ತಿಯಲ್ಲಿ ಕಂಡು ಬರುವ ವರ್ಧಮಾನ

ಸ್ತಂಭಗಳನ್ನು ಮಾತ್ರ ಹೊಂದಿದೆ. (ಚಿ.ಸಂ.237) ಈ ಸ್ತಂಭಗಳು ಪೀಠ, ಚತುರಶ್ರವಾದ ದಿಂಡು, ಘಂಟಾಕಾರದ ಶಲಾಕ, ಕಂಠ, ಮಂಡಿ ಫಲಕ ಮತ್ತು ಮುಷ್ಠಿಬಂಧ ಪೋತಿಕೆಯನ್ನು ಹೊಂದಿವೆ. ನವರಂಗದ ಭುವನೇಶ್ವರಿಗಳು ಆಕರ್ಷಕವಾದ ಕೆತ್ತನೆಯನ್ನು ಹೊಂದಿದ್ದು, ಕೆಲವು ಭುವನೇಶ್ವರಿಗಳ ಛಾವಣಿಯು ಕುಸಿದಿದೆ. ನವರಂಗದ ಮಧ್ಯದ ಅಂಕಣದ ಭುವನೇಶ್ವರಿಯ ಮಧ್ಯಭಾಗದ ಕಲ್ಲು ಕುಸಿದಿದ್ದರೂ ಸಹ ಇದರ ದಿಂಡುಗಳಲ್ಲಿನ ಅಲಂಕಾರವು ಅತ್ಯಾಕರ್ಷಕವಾಗಿದೆ. (ಚಿ.ಸಂ.239) ಈ ಬಸದಿಯ ಪ್ರಧಾನ ಗರ್ಭಗುಡಿಯು ಸಂಪೂರ್ಣವಾಗಿ ಕಣ್ಮರೆಯಾಗಿದ್ದು, ಇದರ ದ್ವಾರಬಂಧವು ಮಾತ್ರ ಇಂದು ಕಂಡು ಬರುತ್ತದೆ. ದ್ವಾರಬಂಧದ ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿ ಕುಳಿತ ಜಿನಶಿಲ್ಪವಿದೆ. ಬಸದಿಯ ಅವಶೇಷಗಳು ಸುತ್ತಲೂ ಅಸ್ತವ್ಯಸ್ತವಾಗಿ ಬಿದ್ದಿದ್ದು, ಕೆಲವು ಅವಶೇಷಗಳನ್ನು ಬೇರೆ ದೇವಾಲಯಗಳಲ್ಲಿ ನಿರ್ಮಾಣದಲ್ಲಿ ಬಳಸಿರುವ ಸಾಧ್ಯತೆಗಳು ಹೆಚ್ಚಿವೆ. ಇದಕ್ಕೆ ಸಾಕ್ಷಿಯಾಗಿ ಹೇಳವುದಾದರೆ ಇದೇ ಗ್ರಾಮದ ಕಮಟೇಶ್ವರ ದೇವಾಲಯದ ನವರಂಗದ ದ್ವಾರಬಂಧದ ಲಲಾಟಬಿಂಬದಲ್ಲಿ ಜಿನಮೂರ್ತಿಯ ಶಿಲ್ಪವು ಕಂಡು ಬರುತ್ತದೆ. ಆದ್ದರಿಂದ ಈ ದ್ವಾರಬಂಧವನ್ನು ಈ ಪಾರ್ಶ್ವನಾಥ ಬಸದಿಯಿಂದ ತೆಗೆದುಕೊಂಡು ಬಂದು ಕಮಟೇಶ್ವರ ದೇವಾಲಯಕ್ಕೆ ಅಳವಡಿಸಿರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ಈ ಬಸದಿಯ ಸುತ್ತಲಿನ ಪರಿಸ್ಥಿತಿಯನ್ನು ವಿಶ್ಲೇಷಿಸುವುದಾದರೆ, ಬಸದಿಯ ಗರ್ಭಗುಡಿ ಇದ್ದ ಜಾಗದಲ್ಲೇ ಇಂದು ಚರಂಡಿ ಮತ್ತು ಒಂದು ಮನೆಯ ಗೋಡೆಯನ್ನು ನಿರ್ಮಿಸಿದ್ದಾರೆ. ಬಸದಿಯ ಬಲಭಾಗದಲ್ಲಿ ಕಸವನ್ನು ಸಂಗ್ರಹಿಸುವ ತಿಪ್ಪೆ ಗುಂಡಿಗಳಿವೆ. ಒಟ್ಟಾರೆಯಾಗಿ ಹೇಳುವುದಾದರೆ ಅತ್ಯಂತ ಸುಂದರ ಕಲಾತ್ಮಕ ಅಂಶಗಳನ್ನು ಹೊಂದಿರುವ ಈ ಬಸದಿಯು ನಿರ್ಲಕ್ಷ್ಯಕ್ಕೆ ಒಳಗಾಗಿದೆ ಎಂದು ಅಭಿಪ್ರಾಯಿಸಬಹುದು.

**ಮರ್ಕುಲಿ**

ಮರ್ಕುಲಿ ಗ್ರಾಮವು ಹಾಸನ ತಾಲೂಕಿನ ಶಾಂತಿಗ್ರಾಮ ಹೋಬಳಿಯ ಒಂದು ಗ್ರಾಮವಾಗಿದ್ದು, ಹಾಸನ ನಗರದಿಂದ ಆಗ್ನೇಯ ದಿಕ್ಕಿಗೆ ಸುಮಾರು 16 ಕಿ.ಮೀ ಅಂತರದಲ್ಲಿ ಕಂಡುಬರುತ್ತದೆ. ಈ ಗ್ರಾಮದಲ್ಲಿ ಇತ್ತೀಚಿನ ಕಾಲದಲ್ಲಿ ನಿರ್ಮಾಣವಾದ ರಂಗನಾಥ ದೇವಾಲಯ ಮತ್ತು ಹೊಯ್ಸಳರ ಕಾಲದ ಆದಿನಾಥ ಬಸದಿಗಳು ಕಂಡುಬಂದಿದ್ದು, ಈ

ಬಸದಿಯ ಮುಂದೆ ನಿಲ್ಲಿಸಿರುವ ಶಾಸನದಲ್ಲಿ ಈ ಗ್ರಾಮವನ್ನು 'ಮರಿಕಾಲಿ' ಎಂಬ ಹೆಸರಿನಿಂದ ಕರೆದಿದ್ದು, ನಂತರದ ಕಾಲಘಟ್ಟದಲ್ಲಿ ಈ ಮರಿಕಾಲಿ ಎಂಬ ಹೆಸರು 'ಮರ್ಕುಲಿ' ಎಂಬ ಹೆಸರಿನಿಂದ ಕರೆಯಲ್ಪಟ್ಟಿರಬಹುದು.

**ಆದಿನಾಥ ಬಸದಿ–ಮರ್ಕುಲಿ**

ಆದಿನಾಥ ಬಸದಿಯು ಗ್ರಾಮದ ಆಗ್ನೇಯ ದಿಕ್ಕಿನಲ್ಲಿ ಎತ್ತರವಾದ ಪ್ರದೇಶದ ಮೇಲೆ ಉತ್ತರಾಭಿಮುಖವಾಗಿ ನಿರ್ಮಾಣವಾಗಿದ್ದು, (ಚಿ.ಸಂ. 240) ಸುತ್ತಲೂ ಎತ್ತರವಾದ ತಡೆಗೋಡೆಯನ್ನು ಹೊಂದಿರುವ ಪ್ರಾಕಾರದೊಳಗೆ ತ್ರಿಕೂಟಾಚಲವಾಗಿ ನಿಂತಿದೆ. ಈ ಬಸದಿಯನ್ನು 2ನೇ ಬಲ್ಲಾಳನ (ವೀರಬಲ್ಲಾಳ) ಮಂತ್ರಿ (ಸಂಧಿವಿಗ್ರಹಿ) ಬೂಚಿಮಯ್ಯನು ಕ್ರಿ.ಶ.1173ರಲ್ಲಿ ವೀರಬಲ್ಲಾಳನ ಪಟ್ಟಾಭಿಷೇಕದ ದಿನದಂದೇ ಸ್ಥಾಪಿಸಿದನೆಂದು ಬಸದಿಯ ಮುಂದೆ ನಿಲ್ಲಿಸಿರುವ ಶಾಸನದಿಂದ ತಿಳಿದುಬರುತ್ತದೆ.[170] ಈ ಶಾಸನದಲ್ಲಿ ಬೂಚಿಮಯ್ಯನು ಸೀಗೆನಾಡಿನ ಮರಿಕಾಲಿ (ಮರ್ಕುಲಿ) ಗ್ರಾಮವನ್ನು ಈ ಬಸದಿಗಾಗಿ ದಾನ ಕೊಟ್ಟ ವಿಚಾರದ ಉಲ್ಲೇಖವಿದೆ.

ಉತ್ತರಾಭಿಮುಖವಾದ ಈ ಬಸದಿಯು ತ್ರಿಕೂಟಾಚಲವಾಗಿದ್ದು, ಮೂರು ಗರ್ಭಗುಡಿಗಳು ಮೂರು ಸುಖನಾಸಿ, ನವರಂಗ ಮತ್ತು ಮುಖ ಮಂಟಪದ ಭಾಗಗಳಿದ್ದು, ಬಸದಿಯ ಮುಂದೆ ನಂತರದ ಕಾಲಘಟ್ಟಗಳಲ್ಲಿ ಸೇರ್ಪಡೆಯಾದ ಮತ್ತೆರೆಡು ಗುಡಿಗಳಿವೆ.

**ದಕ್ಷಿಣದ ಗರ್ಭಗುಡಿ ಮತ್ತು ಸುಖನಾಸಿ** : ಉತ್ತರಾಭಿಮುಖವಾಗಿರುವ ಈ ಗರ್ಭಗುಡಿಯು 7 ಅಡಿ ಅಗಲ, 8 ಅಡಿ ಉದ್ದವನ್ನು ಹೊಂದಿದ್ದು, ಮಧ್ಯ ಭಾಗದಲ್ಲಿ 1.5 ಅಡಿ ಎತ್ತರದ ಪೀಠದ ಮೇಲೆ ಯೋಗ ಮುದ್ರೆಯಲ್ಲಿ ಕುಳಿತಿರುವ 3 ಅಡಿ ಎತ್ತರದ ಆದಿನಾಥ ವಿಗ್ರಹವಿದೆ. (ಚಿ.ಸಂ. 241) ಈ ವಿಗ್ರಹದ ಹಿಂದೆ ಸುರುಳಿ ಕೆತ್ತನೆಗಳು ಮತ್ತು ಕೀರ್ತಿಮುಖವನ್ನು ಒಳಗೊಂಡ ಸುಮಾರು 5 ಅಡಿ ಎತ್ತರದ ಆಕರ್ಷಕವಾದ ಪ್ರಭಾವಳಿಯಿದೆ. ಗರ್ಭಗುಡಿಯು 3 ಹಂತಗಳನ್ನು ಹೊಂದಿರುವ ನಾಭಿಚ್ಛಂದ ವಿತಾನವನ್ನು ಹೊಂದಿದ್ದು, ಮಧ್ಯದಲ್ಲಿ ಸರಳ ಪದ್ಮದ ಕೆತ್ತನೆಯಿರುವ ಶಿಲಾಫಲಕವಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದ್ದು ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

ದಕ್ಷಿಣ ದಿಕ್ಕಿನ ಸುಖನಾಸಿಯು 7.5X7 5ಅಡಿ ವಿಸ್ತೀರ್ಣವನ್ನು ಹೊಂದಿದ್ದು ಎಡಭಾಗದಲ್ಲಿ ಚಕ್ರೇಶ್ವರಿ ಮತ್ತು ಬಲಭಾಗದಲ್ಲಿ ಗೋಮುಖ ಯಕ್ಷ ಶಿಲ್ಪಗಳಿವೆ.[171] ಕುಳಿತ ಭಂಗಿಯಲ್ಲಿರುವ ಯಕ್ಷನ ಶಿಲ್ಪವು ಚತುರ್ಭುಜನಾಗಿದ್ದು ಬಲ ಹಿಂಭಾಗದ ಕೈಯಲ್ಲಿ ಅಂಕುಶ,

ಎಡ ಹಿಂಭಾಗದ ಕೈಯಲ್ಲಿ ಅಕ್ಷಮಾಲಾ, ಎಡ ಮುಂಭಾಗದ ಕೈಯಲ್ಲಿ ಫಲ ಮತ್ತು ಬಲ ಮುಂಭಾಗದ ಕೈ ವರದ ಹಸ್ತವನ್ನು ಹೊಂದಿದೆ. (ಚಿ.ಸಂ. 242) ಈ ಶಿಲ್ಪವು ಕೀರ್ತಿಮುಖ ಹಾಗೂ ಸುರುಳಿ ಕೆತ್ತನೆಗಳನ್ನು ಒಳಗೊಂಡ ಆಕರ್ಷಕ ಪ್ರಭಾವಳಿಯನ್ನು ಹೊಂದಿದೆ. ಇದರ ಪಕ್ಕದಲ್ಲೇ ಚಕ್ರೇಶ್ವರಿ ಶಿಲ್ಪವು 12 ಕೈಗಳನ್ನು ಹೊಂದಿದ್ದು ಆಕರ್ಷಕವಾಗಿದೆ. (ಚಿ.ಸಂ. 243) ಈ ಶಿಲ್ಪದ ಬಲಭಾಗದ 6 ಕೈಗಳಲ್ಲಿ 4 ಕೈಗಳು ಚಕ್ರ, ಒಂದು ಕೈ ವಜ್ರ, ಮತ್ತೊಂದು ಕೈ ವರದ ಹಸ್ತವಾಗಿದೆ. ಇದೇ ಶಿಲ್ಪದ ಎಡ ಭಾಗದ 6 ಕೈಗಳಲ್ಲಿ 4 ಕೈಗಳು ಚಕ್ರ, ಒಂದು ಕೈ ವಜ್ರ ಹಾಗೂ ಇನ್ನೊಂದು ಕೈಯಲ್ಲಿ ಕಮಲದ ಪುಷ್ಪವಿದೆ. ಈ ಶಿಲ್ಪದ ಹಿಂಬದಿಯಲ್ಲೂ ಸಹ ಸುರುಳಿ ಕೆತ್ತನೆ ಮತ್ತು ಕೀರ್ತಿ ಮುಖವಿರುವ ಆಕರ್ಷಕವಾದ ಪ್ರಭಾವಳಿಯಿದೆ. ಸುಖನಾಸಿಯು 3 ಹಂತಗಳನ್ನು ಹೊಂದಿರುವ ನಾಭಿಚ್ಛಂದ ವಿತಾನವನ್ನು ಹೊಂದಿದೆ. ಸುಖಾನಾಸಿಯ ಬಾಗಿಲುವಾಡವು ಸರಳವಾಗಿದ್ದು ದ್ವಾರದ ಎರಡೂ ಪಾರ್ಶ್ವದಲ್ಲಿ ಜಾಲಾಂಧ್ರಗಳಿವೆ.

**ಪೂರ್ವದ ಗರ್ಭಗುಡಿ ಮತ್ತು ಸುಖನಾಸಿ:** ಪಶ್ಚಿಮಾಭಿಮುಖವಾಗಿರುವ ಈ ಗರ್ಭಗುಡಿಯು 7 ಅಡಿ ಅಗಲ, 8 ಅಡಿ ಉದ್ದವನ್ನು ಹೊಂದಿದ್ದು, ಇದರ ಮಧ್ಯಭಾಗದಲ್ಲಿ ಸುಮಾರು 1.5 ಅಡಿ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತ 4 ಅಡಿ ಎತ್ತರದ ಬಾಹುಬಲಿ ವಿಗ್ರಹವಿದೆ. (ಚಿ.ಸಂ. 244) ಈ ವಿಗ್ರಹದ ಎರಡು ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತ ಎರಡು ಶಿಲ್ಪಗಳಿದ್ದು, ಈ ವಿಗ್ರಹದ ಹಿಂಬದಿಯಲ್ಲಿ 5 ಅಡಿ ಎತ್ತರದ ಆಕರ್ಷಕ ಸುರುಳಿ ಕೆತ್ತನೆ ಮತ್ತು ಕೀರ್ತಿಮುಖವಿರುವ ಪ್ರಭಾವಳಿಯಿದೆ. ಈ ಗರ್ಭಗುಡಿಯ ವಿತಾನವು ಸರಳ ಪದ್ಮದ ರಚನೆಯಿರುವ ನಾಭಿಚ್ಛಂದ ಮಾದರಿಯದ್ದಾಗಿದೆ. ಪೂರ್ವ ದಿಕ್ಕಿನ ಈ ಗರ್ಭಗುಡಿಯ ಮುಂದೆ ಯಾವುದೇ ಶಿಲ್ಪಗಳಿಲ್ಲದ ತೆರೆದ ಅಂತರಾಳವಿದ್ದು ಇದು 7.5X7.5 ಅಡಿ ವಿಸ್ತೀರ್ಣವನ್ನು ಹೊಂದಿದೆ.

**ಪಶ್ಚಿಮದ ಗರ್ಭಗುಡಿಯ ಮತ್ತು ಸುಖನಾಸಿ :** ಪೂರ್ವಾಭಿಮುಖವಾಗಿರುವ ಈ ಗರ್ಭಗುಡಿಯು 7 ಅಡಿ ಅಗಲ, 8 ಅಡಿ ಉದ್ದವನ್ನು ಹೊಂದಿದ್ದು ಇದರ ಮಧ್ಯಬಾಗದಲ್ಲಿ ಸುಮಾರು 1.5 ಅಡಿ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತ 4 ಅಡಿ ಎತ್ತರದ ಪಾರ್ಶ್ವನಾಥ ವಿಗ್ರಹವಿದೆ. ಈ ವಿಗ್ರಹದ ತಲೆಯ ಹಿಂಬದಿಯಲ್ಲಿ 7 ಹಾವಿನ ಹೆಡೆಗಳನ್ನು ಹೊಂದಿರುವ ಸರ್ಪವನ್ನು ಕೆತ್ತಲಾಗಿದ್ದು, (ಚಿ.ಸಂ.245)ಇದಕ್ಕೆ ಹೊಂದಿಕೊಂಡಂತೆ ಆಕರ್ಷಕ ಕೆತ್ತನೆಯನ್ನು ಹೊಂದಿರುವ ಪ್ರಭಾವಳಿಯಿದೆ. ವಿಗ್ರಹದ ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತ ಎರಡು ಶಿಲ್ಪಗಳಿವೆ. ಸರಳ ಪದ್ಮದ ಭುವನೇಶ್ವರಿಯನ್ನು ಹೊಂದಿರುವ ಈ ಗರ್ಭಗೃಹದ ಬಾಗಿಲುವಾಡ ಸರಳವಾಗಿದ್ದು, ಲಲಾಟ ಬಿಂಬದಲ್ಲಿ ಜಿನ ಶಿಲ್ಪವಿದೆ. ಪಶ್ಚಿಮ ದಿಕ್ಕಿನ ಈ ಗರ್ಭಗುಡಿಯ ಮುಂದೆ ತೆರೆದ ಅಂತರಾಳವಿದ್ದು ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ**: ಈ ಬಸದಿಯ ಮೂರು ಗರ್ಭಗುಡಿಯ ಸುಖನಾಸಿಗಳಿಗೆ ಹೊಂದಿಕೊಂಡಂತೆ ಒಂದು ನವರಂಗವಿದ್ದು, 17X17 ಅಡಿ ವಿಸ್ತೀರ್ಣವನ್ನು ಹೊಂದಿದೆ. ಈ ನವರಂಗದಲ್ಲಿ ನಾಲ್ಕು ಹೊಯ್ಸಳ ಶೈಲಿಯ ಶ್ರೀಕಾರ ಸ್ತಂಭಗಳಿವೆ. (ಚಿ.ಸಂ. 246) ಈ ಸ್ತಂಭಗಳು ಉಪಪೀಠ, ಪೀಠ, ಘಂಟಾಕಾರದ ಹಿಂಡು, ಮಂಡಿ ಫಲಕ ಮತ್ತು ಬೋದಿಗೆಯನ್ನು ಹೊಂದಿವೆ. ನವರಂಗವು ೯ ಅಂಕಣಗಳನ್ನು ಹೊಂದಿದ್ದು, ೯ ಭುವನೇಶ್ವರಿಗಳನ್ನು ಹೊಂದಿದೆ. ಮಧ್ಯದ ಭುವನೇಶ್ವರಿಯನ್ನು ಹೊರತು ಪಡಿಸಿ ಉಳಿದ ೮ ಭುವನೇಶ್ವರಿಗಳು ೩ ಹಂತಗಳನ್ನು ಹೊಂದಿದ್ದು, ನಾಭಿಚ್ಛಂದ ಮಾದರಿಯ ಸರಳ ಪದ್ಮದ ಶಿಲಾ ಫಲಕಗಳನ್ನು ಹೊಂದಿವೆ. ಮಧ್ಯದ ಅಂಕಣದ ಭುವನೇಶ್ವರಿಯಲ್ಲಿ, ೯ ಪದ್ಮಗಳನ್ನು ಕೆತ್ತಲಾಗಿದ್ದು ಸಮತಟ್ಟಾದ ಪದ್ಮ ಶಿಲಾಫಲಕವನ್ನು ಹೊಂದಿದೆ. ಈ ರೀತಿಯಾದ ವಿತಾನವನ್ನು ಬೆಳವಾಡಿಯ ವೀರ ನಾರಾಯಣ ದೇವಾಲಯದಲ್ಲಿ ಕಾಣಬಹುದಾಗಿದೆ. ನವರಂಗದಲ್ಲಿ ಯಾವುದೇ ಕೋಷ್ಟಗಳು ಮತ್ತು ಶಿಲ್ಪಗಳು ಕಂಡುಬರುವುದಿಲ್ಲ.

**ಮುಖಮಂಟಪ**: ಮುಖಮಂಟಪವು ೯ ಅಡಿ ಉದ್ದ, 7 ಅಡಿ ಅಗಲವನ್ನು ಹೊಂದಿದ್ದು, ಎರಡು ಶ್ರೀಕಾರ ಸ್ತಂಭಗಳನ್ನು ಹೊಂದಿದೆ. ಇದರ ಭುವನೇಶ್ವರಿಯೂ ಸಹ ೩ ಹಂತಗಳನ್ನು ಹೊಂದಿರುವ ಸರಳ ಪದ್ಮದ ಶಿಲಾಫಲಕದ ರಚನೆಯನ್ನು ಹೊಂದಿದೆ.

**ಭಿತ್ತಿ**: ಈ ಬಸದಿಯು 4 ಅಡಿ ಎತ್ತರದ ಅಧಿಷ್ಟಾನದ ಮೇಲೆ ನಿರ್ಮಾಣವಾಗಿದ್ದು, ಭಿತ್ತಿಯಲ್ಲಿ ಯಾವುದೇ ಭಿತ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಈ ಬಸದಿಯ ಭಿತ್ತಿಯ ಕೆಲವು ಭಾಗಗಳಲ್ಲಿ ಮಾತ್ರ ಅರೆಗಂಬಗಳ ನಿರ್ಮಾಣವನ್ನು ಕಾಣಬಹುದಾಗಿದೆ. (ಚಿ.ಸಂ. 247) ಈ ಬಸದಿಗೆ ಇತ್ತೀಚಿನ ಸಿಮೆಂಟ್ ಮತ್ತು ಗಾರೆಯನ್ನು ಬಳಸಿ ಕೈಪಿಡಿ ಗೋಡೆಯನ್ನು ನಿರ್ಮಿಸಲಾಗಿದೆ. ಅಲಂಕಾರಿಕ ದೃಷ್ಟಿಯಲ್ಲಿ ಈ ಬಸದಿಯ ಅದಿಷ್ಠಾನ, ಭಿತ್ತಿ ಮತ್ತು ಕೈಪಿಡಿ ಗೋಡೆ ತೀರಾ ಸರಳವಾಗಿದೆ. ಈ ಬಸದಿಯ ಮೂರು ಗರ್ಭಗುಡಿಗಳಿಗೂ ಯಾವುದೇ ಶಿಖರಗಳು ಕಂಡುಬರುವುದಿಲ್ಲ.

**ಆದಿನಾಥ ಬಸದಿಯ ಮುಂದಿನ ಎಡ ಭಾಗದ ಗುಡಿ**: ಆದಿನಾಥ ಬಸದಿಯ ಮುಂದೆ, ನಂತರದ ಕಾಲಘಟ್ಟದಲ್ಲಿ ಎರಡು ಗುಡಿಗಳು ಸೇರ್ಪಡೆಗೊಂಡಿದ್ದು, ಇವು ಕ್ರಮವಾಗಿ ಗರ್ಭಗುಡಿ ಮತ್ತು ನವರಂಗದ ಭಾಗಗಳನ್ನು ಹೊಂದಿವೆ. ಇದರಲ್ಲಿ ಎಡಭಾಗದ ಗುಡಿಯು ಪೂರ್ವಾಭಿ ಮುಖವಾಗಿದ್ದು, ಗರ್ಭಗುಡಿ ಮತ್ತು ನವರಂಗ ಭಾಗಗಳನ್ನು ಹೊಂದಿದೆ. ಗರ್ಭಗುಡಿಯು 7 ಅಡಿ ಅಗಲ ಮತ್ತು ೮ ಅಡಿ ಉದ್ದವನ್ನು ಹೊಂದಿದ್ದು, ಮಧ್ಯಭಾಗದಲ್ಲಿ ಸುಮಾರು 1.5 ಅಡಿ ಪೀಠದ ಮೇಲೆ 4 ಅಡಿ ಎತ್ತರದ ಪಾರ್ಶ್ವನಾಥ ವಿಗ್ರಹವಿದೆ. (ಚಿ.ಸಂ. 248) ಈ ವಿಗ್ರಹದ

ಶಿರದ ಹಿಂಭಾಗದಲ್ಲಿ 7 ಹೆಡೆಗಳನ್ನು ಹೊಂದಿರುವ ಸರ್ಪವನ್ನು ಕೆತ್ತಲಾಗಿದೆ. ಈ ವಿಗ್ರಹಕ್ಕೆ ಸುರುಳಿ ಕೆತ್ತನೆ ಇರುವ ಮತ್ತು ಕೀರ್ತಿ ಮುಖವನ್ನು ಹೊಂದಿರುವ ಆಕರ್ಷಕವಾದ ಪ್ರಭಾವಳಿಯನ್ನು ಸಹ ನಿರ್ಮಿಸಲಾಗಿದ್ದು ಈ ಗುಡಿಗೆ ಸುಖನಾಸಿ ಕಂಡುಬರುವುದಿಲ್ಲ. ನವರಂಗವು 20 ಅಡಿ ಉದ್ದ, 19 ಅಡಿ ಅಗಲವನ್ನು ಹೊಂದಿದ್ದು 4 ಸ್ತಂಭಗಳು ಕಂಡುಬರುತ್ತವೆ. ಈ ಸ್ತಂಭಗಳು 4 ಕೋನದ ಪೀಠ, 8 ಕೋನ, 16 ಕೋನ, ವೃತ್ತಾಕಾರದ ದಿಂಡು ಮತ್ತು ಬೋದಿಗೆಯನ್ನು ಹೊಂದಿವೆ. ಈ ಗುಡಿಗೆ ಮುಖಮಂಟಪ ಕಂಡುಬರುವುದಿಲ್ಲ.

**ಬಲಭಾಗದ ಗುಡಿ**: ಈ ಗುಡಿಯು ಸಹ ಗರ್ಭಗುಡಿ ಮತ್ತು ನವರಂಗದ ಭಾಗಗಳನ್ನು ಹೊಂದಿದ್ದು, ಸುಖನಾಸಿ ಮತ್ತು ಮುಖಮಂಟಪ ಕಂಡುಬರುವುದಿಲ್ಲ. ಪಶ್ಚಿಮಾಭಿಮುಖ ವಾಗಿರುವ ಈ ಬಸದಿಯ ಗರ್ಭಗುಡಿಯು 8 ಅಡಿ ಉದ್ದ, 7 ಅಡಿ ಅಗಲ ವಿಸ್ತೀರ್ಣವನ್ನು ಹೊಂದಿದ್ದು, ಇದರ ಮಧ್ಯಭಾಗಲ್ಲಿ 1.5 ಅಡಿ ಅಲಂಕಾರಿಕವಾದ ಪೀಠದ ಮೇಲೆ ಸಮ ಭಂಗಿಯಲ್ಲಿ ನಿಂತ ಸುಮಾರು 4 ಅಡಿ ಎತ್ತರದ ಬಾಹುಬಲಿ ವಿಗ್ರಹವಿದೆ. ಈ ವಿಗ್ರಹದ ಎರಡೂ ಪಾರ್ಶ್ವದಲ್ಲಿ ದ್ವಿಭಂಗಿಯಲ್ಲಿ ನಿಂತ ಎರಡು ಶಿಲ್ಪಗಳಿದ್ದು ಆಕರ್ಷಕವಾಗಿವೆ. ಈ ವಿಗ್ರಹಕ್ಕೆ ಕುಸುರಿ ಕೆತ್ತನೆ ಇರುವ ಸುರುಳಿಗಳು ಕೀರ್ತಿ ಮುಖವಿರುವ ಸುಮಾರು 6 ಅಡಿ ಎತ್ತರದ ಸುಂದರವಾದ ಪ್ರಭಾವಳಿಯನ್ನು ನಿರ್ಮಿಸಲಾಗಿದೆ. (ಚಿ.ಸಂ.249) ಈ ಗರ್ಭಗುಡಿಯ ಮುಂಭಾಗದಲ್ಲಿ ನವರಂಗವಿದ್ದು, ಇದು 20 ಅಡಿ ಉದ್ದ, 19 ಅಡಿ ಅಗಲವನ್ನು ಹೊಂದಿದ್ದು, 4 ಸ್ತಂಭಗಳನ್ನು ಹೊಂದಿದೆ. ಈ ಸ್ತಂಭಗಳು ಚೌಕಾಕಾರದ ಪೀಠ, 8 ಕೋನ, 16 ಕೋನ, ವೃತ್ತಾಕಾರದ ದಿಂಡು ಮತ್ತು ಬೋದಿಗೆಯನ್ನು ಹೊಂದಿವೆ. ಆದಿನಾಥ ಬಸದಿಯ ಮುಂದಿರುವ ಈ ಎರಡೂ ಗುಡಿಗಳು ತೀರಾ ಸರಳವಾಗಿದ್ದು, ಗ್ರಾನೈಟ್ ಕಲ್ಲು ಚಪ್ಪಡಿಗಳನ್ನು ಛಾವಣಿಗೆ ಹಾಸಲಾಗಿದೆ.

**ದ್ವಾರಮಂಟಪ**: ಆದಿನಾಥ ಬಸದಿಯ ತಡೆಗೋಡೆಗೆ ಹೊಂದಿಕೊಂಡಂತೆ ಗ್ರಾನೈಟ್ ಕಲ್ಲಿನಿಂದ ನಿರ್ಮಿಸಿರುವ 8 ಚಿತ್ರಖಂಡ ಸ್ತಂಭಗಳ ದ್ವಾರ ಮಂಟಪವಿದೆ. ಈ ದ್ವಾರಮಂಟಪದ ಮೇಲ್ಭಾಗದಲ್ಲಿ ಮೂರು ಕೋಷ್ಟಕಗಳಿದ್ದು, ಇವುಗಳ ಒಳಗೆ ಜೈನ ಪರಂಪರೆಯನ್ನು ಬಿಂಬಿಸುವ ಶಿಲ್ಪಗಳಿವೆ. ಈ ಆದಿನಾಥ ಬಸದಿಯೊಳಗೆ ಪ್ರವೇಶಿಸಲು ದ್ವಾರ ಮಂಟಪದ ಕೆಳಗೆ ಸೋಪಾನಗಳನ್ನು ಸಹ ನಿರ್ಮಿಸಲಾಗಿದೆ. (ಚಿ.ಸಂ. 250) ಒಟ್ಟಿನಲ್ಲಿ ಹೊಯ್ಸಳರ ಕಲೆ ಮತ್ತು ವಾಸ್ತು ಶಿಲ್ಪ ಹಾಗೂ ಜೈನ ಪರಂಪರೆಯ ಅಧ್ಯಯನದ ದೃಷ್ಟಿಯಿಂದ ಮರ್ಕುಲಿಯ ಆದಿನಾಥ ಬಸದಿಯು ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ ಎಂದು ಹೇಳಬಹುದಾಗಿದೆ.

## ಅಡಿ ಟಿಪ್ಪಣಿಗಳು

1. ಅಪರ್ಣ, ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ, ಪು.ಸಂ. 1
2. ಮನೋಜ್, ಜಿ., ದೇವಾಲಯ ವಾಸ್ತು ವಿಜ್ಞಾನ, ಪು.ಸಂ. 10
3. ಆಚಾರ್ಯ, ಪಿಕೆ., ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಪು.ಸಂ. 617
4. ಅಪರ್ಣ, ಕೂ.ಸ., ಪೂರ್ವೋಕ್ತ, ಪು.ಸಂ.43
5. ಆಚಾರ್ಯ, ಪಿಕೆ., ಪೂರ್ವೋಕ್ತ, ಪು.ಸಂ.588-590
6. ದಿವಾಕರ, ಆರ್.ಆರ್., ಕರ್ನಾಟಕದ ಪರಂಪರೆ, ಸಂ. 1, ಪು.ಸಂ. 170
7. ಮೈಸೂರು ನಾಗರಾಜ ಶರ್ಮಾ, ಹೊಯ್ಸಳ ಶಿಲ್ಪದಲ್ಲಿ ಶಿವ, ಪು.ಸಂ.17
8. ಅಲ್ಯೆಹಿನ್ ಡ್ಯಾನಿಯಲ್, ಹಿಂದೂ ಪಾಲಥೀಯಿಸಂ, ಪು.ಸಂ. 188, 189
9. ಸುರೇಶ, ಬಿ.ಸಿ., ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಪು.ಸಂ.64
10. ಮೈಸೂರು ನಾಗರಾಜ ಶರ್ಮಾ, ಪೂರ್ವೋಕ್ತ, ಪು.ಸಂ. 221
11. ಅದೇ, ಪು.ಸಂ.331
12. ಎ.ಕ.ಸಂ. 8, ಹಾಸನ 177, ಪು.ಸಂ.413
13. ಎ.ಕ.ಸಂ. 8, ಹಾಸನ 167, ಪು.ಸಂ.401–404
14. ಎಂ.ಎ.ಆರ್., 1917, ಪು.ಸಂ. 09
15. ಅದೇ
16. ಎ.ಕ.ಸಂ. 8, ಹಾಸನ 167, ಪು.ಸಂ.401–404
17. ಎ.ಕ.ಸಂ. 8, ಹಾಸನ 166, ಪು.ಸಂ.399–40
18. ಎ.ಕ.ಸಂ. 8, ಹಾಸನ 66, ಪು.ಸಂ.377–280
19. ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಬರೆಯಲಾಗಿದೆ
20. ಎ.ಕ.ಸಂ.8, ಹಾಸನ 66, ಪು.ಸಂ.277–280
21. ಎ.ಕ.ಸಂ. 8, ಹಾಸನ 142, ಪು.ಸಂ.361–366
22. ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಬರೆಯಲಾಗಿದೆ
23. ಎಂ.ಎ.ಆರ್., 1920, ಪು.ಸಂ.3
24. ಅದೇ, 1924, ಪು.ಸಂ.5
25. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ. 651

26. ಎ.ಕ.ಸಂ. 8, ಹಾಸನ 149, ಪು.ಸಂ.380

27. ಎಂ.ಎ.ಆರ್., 1942, ಪು.ಸಂ.26

28. ಎ.ಕ.ಸಂ. 8, ಪೀಠಿಕೆ, ಪು.ಸಂ.4

29. ಎ.ಕ.ಸಂ. 8, ಹಾಸನ 129, ಪು.ಸಂ.347-351

30. ಉದಯರವಿ, ಹಾಸನ ಜಿಲ್ಲಾ ವೈಶಿಷ್ಟ್ಯ, ಪು.ಸಂ. 09

31. ಎಂ.ಎ.ಆರ್., 1933, ಪು.ಸಂ.52

32. ಷೆಟ್ಟರ್, ಎಸ್., ಹೊಯ್ಸಳ ಟೆಂಪಲ್ಸ್, ಪು.ಸಂ. 185

33. ಎಂ.ಎ.ಆರ್., 1933, ಪು.ಸಂ.52

34. ಅದೇ

35. ಷೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.232

36. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.159

37. ಎ.ಕ.ಸಂ. 8, ಹಾಸನ 133 ಪು.ಸಂ.52

38. ಗೆರಾರ್ಡ್ ಫೊಕೆಮಾ, ಹೊಯ್ಸಳ ಆರ್ಕಿಟೆಕ್ಚರ್, ಸಂ. 1, ಪು.ಸಂ. 183

39. ಎಂ.ಎ.ಆರ್., 1920, ಪು.ಸಂ.05

40. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.183

41. ಎ.ಕ.ಸಂ. 8, ಹಾಸನ 131, ಪು.ಸಂ.351-352

42. ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಬರೆಯಲಾಗಿದೆ

43. ಅದೇ

44. ಎ.ಕ.ಸಂ. 08, ಹಾಸನ 196, ಪು.ಸಂ.422

45. ಎ.ಕ.ಸಂ. 08, ಹಾಸನ 197,198,199,200, ಪು.ಸಂ.422-424

46. ಷೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ. 195

47. ಎಂ.ಎ.ಆರ್., 1936, ಪು.ಸಂ.13

48. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ. 126

49. ಎ.ಕ.ಸಂ. 8, ಹಾಸನ 116, ಪು.ಸಂ.331-335

50. ಎ.ಕ.ಸಂ. 8, ಹಾಸನ 128, ಪು.ಸಂ.343-347

51. ಷೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.185

52. ಎಂ.ಎ.ಆರ್., 1933, ಪು.ಸಂ.50

53. ಅದೇ, 1920, ಪು.ಸಂ.04

54. ಅದೇ

55. ಅದೇ, 1933, ಪು.ಸಂ.50

56. ಅದೇ, 1920, ಪು.ಸಂ.04

57. ಅದೇ, 1933, ಪು.ಸಂ.50

58. ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಬರೆಯಲಾಗಿದೆ

59. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.179

60. ಎಂ.ಎ.ಆರ್., 1933, ಪು.ಸಂ.49

61. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.179

62. ಎಂ.ಎ.ಆರ್., 1933, ಪು.ಸಂ.49

63. ಅದೇ, 1920, ಪು.ಸಂ.05

64. ಅದೇ, 1933, ಪು.ಸಂ.51

65. ಹಾಸನ ಜಿಲ್ಲಾ ಗೆಜೆಟಿಯರ್, ಪು.ಸಂ.651

66. ಎ.ಕ.ಸಂ. 8, ಹಾಸನ 176, ಪು.ಸಂ.412

67. ಹಾಸನ ಜಿಲ್ಲಾ ಗೆಜೆಟಿಯರ್, ಪು.ಸಂ.651

68. ಎಂ.ಎ.ಆರ್., 1933, ಪು.ಸಂ.41

69. ಅದೇ, 1924, ಪು.ಸಂ.6

70. ಅದೇ, 1933, ಪು.ಸಂ.41

71. ಮೈಸೂರು ಸ್ಟೇಟ್ ಗೆಜೆಟಿಯರ್, ಪು.ಸಂ. 231-232

72. ಎಂ.ಎ.ಆರ್., 1933, ಪು.ಸಂ.37

73. ಶ್ರೀಕಂಠಶಾಸ್ತ್ರಿ, ಎಸ್., ಹೊಯ್ಸಳ ವಾಸ್ತುಶಿಲ್ಪ, ಪು.ಸಂ.126

74. ಅದೇ

75. ಎಂ.ಎ.ಆರ್., 1933, ಪು.ಸಂ.40

76. ಅದೇ

77. ಶ್ರೀಕಂಠಶಾಸ್ತ್ರಿ, ಎಸ್., ಪೂರ್ವೋಕ್ತ, ಪು.ಸಂ.126

78. ಎಂ.ಎ.ಆರ್., 1933, ಪು.ಸಂ.40

79. ಅದೇ, 1939, ಪು.ಸಂ.82

80. ಅದೇ, 1917, ಪು.ಸಂ.10

81. ಹಾಸನ ಜಿಲ್ಲಾ ಗೆಜೆಟಿಯರ್, ಪು.ಸಂ.640

82. ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಬರೆಯಲಾಗಿದೆ

83. ಎಂ.ಎ.ಆರ್., 1939, ಪು.ಸಂ.82

84. ಎ.ಕ.ಸಂ. 08, ಹಾಸನ 54, ಪು.ಸಂ.271-272

85. ಅದೇ, ಹಾಸನ 71, ಪು.ಸಂ. 283-284

86. ಅದೇ, ಹಾಸನ 68, ಪು.ಸಂ.281-282

87. ಅದೇ, ಹಾಸನ 74, ಪು.ಸಂ.285

88. ಷೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.232

89. ಅನಂತರಾಜು, ಹಾಸನ ಜಿಲ್ಲೆಯ ದೇವಾಲಯ ದರ್ಶನ, ಪು.ಸಂ.41

90. ಎಂ.ಎ.ಆರ್., 1936, ಪು.ಸಂ.14

91. ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಬರೆಯಲಾಗಿದೆ

92. ರಾಮಚಂದ್ರರಾವ್, ಎಸ್.ಕೆ., ಮೂರ್ತಿಶಿಲ್ಪ-ನೆಲೆ-ಹಿನ್ನೆಲೆ, ಪು.ಸ.130-131

93. ಅದೇ, ಪು.ಸಂ.131

94. ಶಂಕರನಾರಾಯಣ ಭಟ್ಟ, ಕೆ., ಹಿಂದೂ ಧರ್ಮದ ಪರಿಚಯ, ಪು.ಸಂ.360

95. ಎ.ಕ.ಸಂ. 08, ಹಾಸನ 24 ರಿಂದ 43, ಪು.ಸಂ.257-268

96. ಎ.ಕ.ಸಂ. 08, ಹಾಸನ 36, ಪು.ಸಂ.263-264

97. ನರಸಿಂಹಾಚಾರ್, ಆರ್., ದಿ ಲಕ್ಷ್ಮೀದೇವಿ ಅಟ್ ದೊಡ್ಡಗದ್ದವಳ್ಳಿ, ಮೊನೊಗ್ರಾಫ್, ಪು.ಸಂ.1

98. ಎ.ಕ.ಸಂ. 8, ಹಾಸನ 36, ಪು.ಸಂ.263-264

99. ಎಂ.ಎ.ಆರ್., 1933, ಪು.ಸಂ.95

100. ನರಸಿಂಹಾಚಾರ್, ಆರ್., ಪೂರ್ವೋಕ್ತ, ಪು.ಸಂ.04

101. ಎಂ.ಎ.ಆರ್., 1917, ಪು.ಸಂ.8

102. ಹಾಸನ ಜಿಲ್ಲಾ ಗೆಜೆಟಿಯರ್, ಪು.ಸಂ.94

103. ಎಂ.ಎ.ಆರ್., 1933, ಪು.ಸಂ.96

104. ಎ.ಕ.ಸಂ. 08, ಹಾಸನ 29, 30, 32, 33, 34, 35, ಪು.ಸಂ.259-263

105. ಎಂ.ಎ.ಆರ್., 1933, ಪು.ಸಂ.95

106. ಹಾಸನ ಜಿಲ್ಲಾ ಗೆಜೆಟಿಯರ್, ಪು.ಸಂ.94

107. ಮನೋಜ್, ಜಿ., ಪೂರ್ವೋಕ್ತ, ಪು.ಸಂ.53

108. ಷೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.224

109. ಎಂ.ಎ.ಆರ್., 1917, ಪು.ಸಂ.9

110. ಅದೇ

111. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.124

112. ಎಂ.ಎ.ಆರ್., 1933, ಪು.ಸಂ.94

113. ಅದೇ, ಪು.ಸಂ.96-97

114. ನರಸಿಂಹಾಚಾರ್, ಅರ್., ಪೂರ್ವೋಕ್ತ, ಪು.ಸಂ.2

115. ಎಂ.ಎ.ಆರ್., 1942, ಪು.ಸಂ.30

116. ಎ.ಕ.ಸಂ. 8, ಹಾಸನ 95, ಪು.ಸಂ.306-309

117. ಅದೇ

118. ಎಂ.ಎ.ಆರ್., 1942, ಪು.ಸಂ.34-35

119. ಅದೇ, ಪು.ಸಂ. 34

120. ಮನೋಜ್, ಜಿ., ಪೂರ್ವೋಕ್ತ, ಪು.ಸಂ.53

121. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.154

122. ಎ.ಕ.ಸಂ. 8, ಹಾಸನ 90, ಪು.ಸಂ.303-304

123. ಎ.ಕ.ಸಂ. 8, ಹಾಸನ 92, ಪು.ಸಂ.304-305

124. ಅನಂತರಾಜು, ಪೂರ್ವೋಕ್ತ, ಪು.ಸಂ.22

125. ಷೆಟ್ಟರ್, ಎಸ್., ಪೂರ್ವೋಕ್ತ, ಪು.ಸಂ.232

126. ಎಂ.ಎ.ಆರ್., 1942, ಪು.ಸಂ.29

127. ಅನಂತರಾಜು, ಪೂರ್ವೋಕ್ತ, ಪು.ಸಂ.23

128. ಎ.ಕ.ಸಂ. 8, ಹಾಸನ 160, ಪು.ಸಂ.390-393

129. ಎ.ಕ.ಸಂ. 8, ಹಾಸನ 158, ಪು.ಸಂ.386-398

130. ಎ.ಕ.ಸಂ. 8, ಹಾಸನ 161, ಪು.ಸಂ.393-398

131. ಎ.ಕ.ಸಂ. 8, ಹಾಸನ 162, ಪು.ಸಂ.398

132. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.640

133. ಎಂ.ಎ.ಆರ್., 1917, ಪು.ಸಂ.9

134. ಅದೇ

135. ಎ.ಕ.ಸಂ. 8, ಹಾಸನ 144, ಪು.ಸಂ.367-371

136. ಅದೇ, ಹಾಸನ 145, ಪು.ಸಂ.371-376

137. ಎಂ.ಎ.ಆರ್., 1924, ಪು.ಸಂ.5

138. ಮನೋಜ್, ಜಿ., ಪೂರ್ವೋಕ್ತ, ಪು.ಸಂ.53

139. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.150

140. ಹಾಸನ ಜಿಲ್ಲಾ ಗೆಜೆಟಿಯರ್, 1971, ಪು.ಸಂ.645

141. ಎಂ.ಎ.ಆರ್., 1933, ಪು.ಸಂ.44

142. ಶ್ರೀಕಂಠಶಾಸ್ತ್ರಿ, ಎಸ್., ಪೂರ್ವೋಕ್ತ, ಪು.ಸಂ.127-128

143. ಎಂ.ಎ.ಆರ್., 1924, ಪು.ಸಂ.7

144. ಅದೇ

145. ಅದೇ, ಪು.ಸಂ.06

146. ಎ.ಕ.ಸಂ. 8, ಹಾಸನ 108, 109, ಪು.ಸಂ.317-318

147. ಅದೇ, ಹಾಸನ 112, ಪು.ಸಂ.319-323

148. ಅದೇ, ಹಾಸನ 108, 109, ಪು.ಸಂ.317-318

149. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.153

150. ಎಂ.ಎ.ಆರ್., 1926, ಪು.ಸಂ.4

151. ಎಂ.ಎ.ಆರ್., 1942, ಪು.ಸಂ.24

152. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.152

153. ಎ.ಕ.ಸಂ. 8, ಹಾಸನ 108, ಪು.ಸಂ.317-318

154. ಅದೇ, ಹಾಸನ 156, ಪು.ಸಂ.385

155. ಗೆರಾರ್ಡ್ ಫೊಕೆಮಾ, ಪೂರ್ವೋಕ್ತ, ಪು.ಸಂ.148

156. ಅದೇ

157. ಎಂ.ಎ.ಆರ್., 1942, ಪು.ಸಂ.25

158. ಅದೇ, 1925, ಪು.ಸಂ.2

159. ಎ.ಕ.ಸಂ. 8, ಹಾಸನ 68-74, ಪು.ಸಂ.381-385

160. ಅದೇ, ಹಾಸನ 75-77, ಪು.ಸಂ.285-288

161. ಅದೇ, ಹಾಸನ 76, ಪು.ಸಂ.286-287

162. ಅದೇ, ಹಾಸನ 75, ಪು.ಸಂ.285-286

163. ಕನ್ನಡ ವಿಶ್ವಕೋಶ, ಸಂ. 8, ಪು.ಸಂ.342

164. ಪರ್ಸಿಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್, ಪು.ಸಂ.134

165. ನಾಗೇಶ್, ಎಚ್.ವಿ., ಬರಹ ಬಾಗಿನ, ಪು.ಸಂ.409

166. ಗೋಪಾಲ್, ಆರ್., ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.ಸಂ.310-311

167. ಎಂ.ಎ.ಆರ್., 1917, ಪು.ಸಂ.10

168. ಎ.ಕ.ಸಂ. 8, ಹಾಸನ 146, ಪು.ಸಂ.376-378

169. ಎಂ.ಎ.ಆರ್., 1942, ಪು.ಸಂ.26

170. ಎ.ಕ.ಸಂ. 8, ಹಾಸನ 174, ಪು.ಸಂ.408-411

171. ಎಂ.ಎ.ಆರ್.,1925, ಪು.ಸಂ.2

# ಅಧ್ಯಾಯ–ಐದು

## ಶಾಸನೋಕ್ತ ವೀರಗಲ್ಲುಗಳು

ಇತಿಹಾಸವು ಒಂದು ನಾಸಿನ ನೈಜ ಘಟನೆಗಳನ್ನು ಕಾಲಾನುಕ್ರಮಣಿಕೆಯಲ್ಲಿ ವಸ್ತುನಿಷ್ಠವಾಗಿ ಅಧ್ಯಯನ ಮಾಡುವ ವಿಷಯವಾಗಿದೆ. ಆದರೆ ರಾಜರು ಕಾಲದಿಂದ ಕಾಲಕ್ಕೆ ಆಡಳಿತ ನಡೆಸಿರುವುದೇ ಇತಿಹಾಸವೆಂಬ ಭಾವನೆ ಪ್ರಚಲಿತವಾಗಿದ್ದು ಅದಕ್ಕೆ ಕಾರಣವೂ ಸಹ ಇದೆ. ನಮ್ಮ ನಾಡಿನ ಇತಿಹಾಸದ ಅಧ್ಯಯನಕ್ಕೆ ಪೂರಕವಾಗಿರುವ ಬಹುಪಾಲು ಗ್ರಂಥಗಳು ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುವಷ್ಟು ಇತರೆ ವಿಷಯಗಳಾದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳ ಮೇಲೆ ಬೆಳಕು ಚೆಲ್ಲಿರುವುದು ಬಹು ವಿರಳ, ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ, ಅಲ್ಲಿ ಬದುಕಿದ ಜನ. ಈ ಜನತೆ ಬಾಳಿ ಬದುಕಿದ ರೀತಿ, ಅನುಸರಿಸಿದ ಧರ್ಮ, ಬೆಳೆಸಿದ ಕಲೆ, ಅವರ ಜೀವನ ಸಮಸ್ಯೆಗಳು, ಅವರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಮತ್ತು ಜನತೆಯ ಇತಿಹಾಸ.[1] ಈ ಇತಿಹಾಸವನ್ನು ಅರಿಯಲು ಮತ್ತು ರಚಿಸಲು ಆಧಾರಗಳು ಬಹುಮುಖ್ಯ. ಈ ಆಧಾರಗಳನ್ನು ನಾವು ಸಾಹಿತ್ಯಾಧಾರಗಳು ಮತ್ತು ಪ್ರಾಕ್ತನಾಧಾರಗಳು ಎಂದು ವಿಭಾಗಿಸಿಕೊಂಡಿದ್ದು ಪ್ರಾಕ್ತನಾಧಾರಗಳಲ್ಲಿ ಭೂಉತ್ಖನನ, ಶಾಸನಗಳು, ನಾಣ್ಯಗಳು ಮತ್ತು ಸ್ಮಾರಕಗಳು ಎಂಬ ವಿಧಗಳಿವೆ. ಇವುಗಳಲ್ಲಿ ಶಾಸನಗಳು ಇತಿಹಾಸದ ಅಧ್ಯಯನದಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುವ ಪ್ರಾಥಮಿಕ ಆಕರಗಳಾಗಿದ್ದು, ಈ ಶಾಸನಗಳ ಒಂದು ಭಾಗವಾದ ವೀರಗಲ್ಲು, ಸ್ಮಾರಕ ಶಿಲ್ಪಗಳೂ ಸಹ ಶಾಸನದ ಸ್ಥಾನಮಾನವನ್ನು ಪಡೆಯುದ ಮೂಲಕ ಪ್ರಾಮುಖ್ಯತೆ ಪಡೆದಿವೆ. ನಿಧನನಾದ ವ್ಯಕ್ತಿಯನ್ನು ಸಮಾಧಿ ಅಥವಾ ಸಂಸ್ಕಾರ ಮಾಡಿದ ನಿರ್ಧಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವರ ಸ್ಮರಣಾರ್ಥವಾಗಿಯೋ, ಕೆಲವಾರು ಸಂಕೇತಗಳನ್ನೋ, ಗುರುತುಗಳನ್ನೋ ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ದೇಶಗಳಲ್ಲಿನ ಧರ್ಮ, ನಂಬಿಕೆ, ಸಾಂಆಜಿಕ ಪ್ರತಿಷ್ಠೆಗಳನ್ನು ಅನುಸರಿಸಿಯೇ ಬೆಳೆದಿದೆ. ಪ್ರಪಂಚದಾದ್ಯಂತ ಇಂತಹ ಸ್ಥಳಗಳ ಮೇಳೆ ತಮ್ಮದೇ ಆದಂತಹ ಸ್ಮಾರಕಗಳನ್ನು ಕಟ್ಟಿರುವುದನ್ನು ಕಾಣಬಹುದು.[2]

ಜೀವನ ಹಂಗನ್ನು ತೊರೆದು ಗ್ರಾಮವನ್ನು ಕಳ್ಳರಿಂದ ರಕ್ಷಿಸಿ, ಗೋವು ಕಳ್ಳರ ಜೊತೆ ಹೋರಾಡಿ, ಅಬಲೆಯರ ಮೇಲೆರಗುವ ಕಾಮುಕರ ವಿರುದ್ಧ ಹೋರಾಡಿ ಹಾಗೂ ತಮ್ಮ ಅರಸರ ಪರವಾಗಿ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಹಾಕಿಸಿದ ಕಲ್ಲುಗಳನ್ನು

ವೀರಗಲ್ಲುಗಳು ಎನ್ನಬಹುದು.[3] ಹೋರಾಟದಲ್ಲಿ ಮಡಿದ ವ್ಯಕ್ತಿಯ ಜ್ಞಾಪಕಾರ್ಥಕವಾಗಿ ನಿಲ್ಲಿಸಿರುವ ಕಲ್ಲುಗಳೇ ವೀರಗಲ್ಲು.[4] ಈ ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಮಾಡಿರುವ ಕಲ್ಲುಗಳೇ ವೀರಗಲ್ಲುಗಳು.[5] ಅವರು ಮಾಡಿದ ಹೋರಾಟ ಇಂದಿನ ನಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲು ಸಮಾಜದ ಒಳಿತಿಗಾಗಿ ಜೀವದ ಹಂಗನ್ನು ತೊರೆದ ಅವರ ಧೀಮಂತಿಕೆಯ್ನನು ಊಹಿಸಲಸಾಧ್ಯವಾದುದು ಅವರ ಹೋರಾಟವು ಸಾಮಾಜಿಕ ನಿಷ್ಠೆ, ಸ್ವಾಮಿ ಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ.[6]

"ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ

ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತ್ಯಾ ಮರಣೇ ರಣೇ"[7]

ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು, ಸತ್ತರೆ ಸ್ವರ್ಗದಲ್ಲಿ ಸುರಾಂಗನೆಯರು ದೊರಕುವರು ಎಂಬ ನಂಬಿಕೆ ಇತ್ತು. ಈ ನಂಬಿಕೆಯ ಪ್ರಕಾರ ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದಲ್ಲಿ ದೇವಕನ್ನೆಯರು ಕಾದುಕೊಂಡಿರುತ್ತಿದ್ದರಷ್ಟೆ ಅಲ್ಲದೇ ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯು ನಡೆಯುತ್ತಿತ್ತು. ಅವನನ್ನು ದೇವಾಂಗನೆಯರು ಸ್ವರ್ಗಕ್ಕೋ, ಶಿವನೋಲಗಕ್ಕೋ ಕೊಂಡೊಯ್ಯುತ್ತಾರೆ ಎಂದು ಜನರು ನಂಬಿದ್ದರು. ಈ ಹೇಳಿಕೆ ಪುಷ್ಠಿ ಎಂಬಂತೆ ವೀರಗಲ್ಲುಗಳ ಮಧ್ಯಭಾಗದ ಪಟ್ಟಿಕೆಯಲ್ಲಿ ಸುರಾಂಗನೆಯರು ವೀರನನ್ನು ಪುಷ್ಪಕ ವಿಮಾನದ ಮೂಲಕವೋ ಅಥವಾ ಆಕಾಶಚಾರಿ ಮಾರ್ಗದ ಮೂಲಕವೋ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಚಿತ್ರಿಸಿರುವುದನ್ನು ನೋಡಬಹುದು. ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣ ಬಿಡುವುದು ಎರಡಕ್ಕೂ ಸಮಾನ ಗೌರವವಿದೆ. ಸೋತು ಹಿಂದಕ್ಕೆ ಬರುವುದು ಸಾವಿಗಿಂತ ಕಡೆಯಾದುದು ಎಂಬ ನಂಬಿಕೆ ಸಮಾಜದಲ್ಲಿತ್ತು. ಮೃತ್ಯುವು ಕ್ಷಣಿಕ ದುಃಖವನ್ನು ತಂದರೆ, ಮಾನಭಂಗವೋ ದಿನ ದಿನವೂ ದುಃಖವನ್ನು ತರುತ್ತದೆ.[8] ಆದರೆ ಯುದ್ಧದಲ್ಲಿ ಪ್ರಾಣತ್ಯಾಗವನ್ನು ಮಾಡಿದ ವೀರರ ಹೆಸರು ಈ ಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲಿಯೂ ಪ್ರಶಂಸೆಗೊಳಗಾಗುತ್ತಿತ್ತು. ಆದುದರಿಂದಲೇ ವೀರನನ್ನು ಕುರಿತ ಕಥೆಗಳು ಹುಟ್ಟಿಕೊಳ್ಳುತ್ತಿದ್ದವು. ಈ ಕಾರಣಗಳಿಂದಲೇ ಪ್ರಪಂಚದಾದ್ಯಂತ ವೀರ ಕಾವ್ಯಗಳೆಂಬ ಶಿಷ್ಟ ಮತ್ತು ಜನಪದ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡಿರುವುದು.

ಸಾಯಬಹುದು ಸಾವಿಗೇತಕಣಿಕೆ ಈ।ಕಾಯವಿಹುದೆ ಹಲಕಾಲ

ಸಾಯದರಿಲ್ಲಿಳೆಯೊಳಗಿಂದು ಬಂದಿದೆ।ಸಾಯಬಾರದ ಸಾವೆನಗೆ

ಹುಟ್ಟಿದರಿಗೆ ಸಾವು ತಪ್ಪದು ಮೊಮ್ಮನ।ಕಟ್ಟಲೆ ಇದಕಂಜಲೇಕೆ

ಕಟ್ಟಿಕೊಂಡಪಕೀರ್ತಿಯು ಸಾಯಬಾರದು।ಕಟ್ಟಾಳಸ ಮುನುಜರು[9]

ಎನ್ನುವ ಕುಮಾರರಾಮನ ಈ ಮಾತುಗಳ ಅರ್ಥ ಸಾವು ಎಂಬುದು ಮನುಷ್ಯನಾದವನಿಗೆ ಒಂದಲ್ಲ ಒಂದು ದಿನ ಬಂದೇ ಬರುತ್ತದೆ. ಸಾಯುವುದು ಅಥವಾ ಹುಟ್ಟುವುದು ವೀಧಿಯ ನಿಯವ. ಆದರೆ ಸಾಯುವಾಗ ಅಪಕೀರ್ತಿಯಿಂದಾಗಲೀ, ಹೇಡಿತನದಿಂದಾಗಲೀ ಸಾಯುವುದು ವೀರನ ಲಕ್ಷಣವಲ್ಲ. ಆದ್ದರಿಂದ ವೀರನಾದವನು ಯುದ್ಧರಂಗದಲ್ಲಿ ಸಾಯುವುದರಲ್ಲಿ ಸಾರ್ಥಕತೆ ಇದೆ ಎಂಬುದಾಗಿದೆ. ಈ ರೀತಿಯ ಮಾತುಗಳೇ ಅಂದಿನ ವೀರರನ್ನು ಉತ್ತೇಜನಗೊಳಿಸಿ ರಣರಂಗದಲ್ಲಿ ಮುನ್ನುಗ್ಗಿ ಹೋರಾಡಲು ಇಲ್ಲವೇ ಸೋತು ರಣರಂಗದಲ್ಲಿ ಮಡಿಯಲು ಪ್ರೇರೇಪಿಸುತ್ತಿದ್ದವು.

'ತುರುಗೋಳೊಳ್ ಪೆಣ್ಬುಯ್ಯಲೊಳ್

ಎರೆವೆಸದೊಳ್ನಂಟ ನೆಡರೊಳೂರ ರೆವಿನೊಳಂ

ತರೆಸಂದು ಗಂಡುತನಮನೆ ನೆರಿಪದವಂ

ಗಂಡನಲ್ಲನೆಂತುಂ ಷಂಡಂ'[10]

ಎಂಬ ರನ್ನನ ಗಧಾಯುದ್ಧ ಅಥವಾ ಸಾಹಸ ಭೀಮ ವಿಜಯ ಎಂಬ ಕಾವ್ಯದಲ್ಲಿ ಬರುವ ಈ ಮಾತುಗಳ ಅರ್ಥ ತುರುಗಾಳಗದಲ್ಲಿ ಪೆಣ್ಬುಯ್ಯಲ್‌ನಲ್ಲಿ, ಸ್ವಾಮಿ ಕಾರ್ಯದಲ್ಲಿ, ನೆಂಟನಿಗೆ ತೊಂದರೆ ಬಂದಾಗ, ಊರು ನಾಶವಾಗುವಾಗ, ಯಾರುದೃಢ ನಿರ್ಧಾರ ಮಾಡಿ ತನ್ನ ಗಂಡುತನವನ್ನು ಮೆರೆಯವುದಿಲ್ಲವೋ ವನು ಗಂಡಸಲ್ಲ, ನಪುಂಸಕ ಎಂಬ ಭಾವನೆ ಅಂದಿನ ಕಾಲದ ಸಮಾಜದಲ್ಲಿತ್ತು ಎಂಬುದಾಗಿದೆ. ತುರುಗಳು, ಸ್ತ್ರೀಯರು, ಊರುಗಳನ್ನು ಶತ್ರುಗಳಿಂದ ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತೆಂದು ಮೇಲಿನ ಮಾತುಗಳ ತಾತ್ಪರ್ಯವಾಗಿದೆ. ಆದ್ದರಿಂದ ವೀರನಾದವನು ಸಮಾಜದ ಈ ರೀತಿಯ ಅವಮಾನದ ಮಾತುಗಳನ್ನು ಎದುರಿಸುವುದಕ್ಕಿಂತ ರಣರಂಗದಲ್ಲಿ ಹೋರಾಡಿ ಮಡಿಯುವುದೇ ಲೇಸೆಂದು ಭಾವಿಸುತ್ತಿದ್ದರು.

ವೀರಗಲ್ಲುಗಳು ಸಾಮಾನ್ಯವಾಗಿ ಶಿಲ್ಪದ ಮೂರು ಹಂತಗಳನ್ನು ಒಳಗೊಂಡಿರುತ್ತವೆ. ಕೆಳಗಿನ ಹಂತದಲ್ಲಿ ವೀರನು ಶತ್ರು ಪಕ್ಷದವರೊಡನೆ ಹೋರಾಟ ಮಾಡುತ್ತಿರುವ ಶಿಲ್ಪವಿರುತ್ತದೆ. ಮಧ್ಯದ ಹಂತದಲ್ಲಿ ಅಪ್ಸರೆಯರು ವೀರನನ್ನು ಕೈಲಾಸಕಕೆ ಅಥವಾ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಚಿತ್ರಿಸಲಾಗಿರುತ್ತದೆ. ಮೇಲಿನ ಹಂತದಲ್ಲಿ ಅವನು ಶಿವನ ಸಾನಿಧ್ಯದಲ್ಲಿರುವುದನ್ನು ಶಿಲ್ಪಸಿರಲಾಗಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ವೀರಗಲ್ಲಿನ ಮೇಲ್ಭಾಗದಲ್ಲಿ

ಒಂದು ಕಡೆ ಸೂರ್ಯ ಮತ್ತೊಂದು ಕಡೆ ಚಂದ್ರರನ್ನು ಕೆತ್ತಿರುತ್ತಾರೆ. ಇಲ್ಲಿ ಶಿಲ್ಪಿ ತನ್ನ ಸಮಕಾಲೀನದಲ್ಲಿ ಕಣ್ಣಾರೆ ಕಂಡ ನೈಜ ಘಟನೆಗಳ ಹಿನ್ನೆಲೆಯನ್ನು ಕಲ್ಲಿನ ಮೇಲೆ ಮೂಡಿಸಿರುತ್ತಾನೆ.

ಇಂತಹ ವೀರಗಲ್ಲುಗಳು ಕರ್ನಾಟಕದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ದೊರೆಯುತ್ತವೆ. ಇವುಗಳ ಶಿಲ್ಪಗಳನ್ನು ಶಾಸನಸಹಿತ ಮತ್ತು ಶಾಸನರಹಿತ ಶಿಲ್ಪವೆಂದು ಎರಡು ಭಾಗಗಳಾಗಿ ಮಾಡಬಹುದು. ಶಾಸನಗಳು ಇರಲಿ ಅಥವಾ ಇಲ್ಲದಿರಲಿ ಸಾಮಾನ್ಯವಾಗಿ ಆ ವೀರಗಲ್ಲಿನ ಉದ್ದೇಶ ಒಂದೇ ಆಗಿರುತ್ತದೆ. ಈ ವೀರಗಲ್ಲುಗಳ ವಿಷಯ ಮತ್ತು ಅವುಗಳ ಮೇಲಿರುವ ಶಿಲ್ಪದ ಆಧಾರದಿಂದ ಅಧ್ಯಯನದ ದೃಷ್ಟಿಯಿಂದ ಹಲವು ಭಾಗಗಳನ್ನಾಗಿ ಮಾಡಬಹುದು. ವೀರಗಲ್ಲುಗಳು ಸಮಾಜದ ಒಳಿತಿಗಾಗಿ ಮಾಡಿದ ತ್ಯಾಗದ ಸಂಕೇತಗಳು. ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರನ್ನು ದೈವಾಂಶ ಸಂಭೂತರೆಂದು ತಿಳಿದು ಇವುಗಳ ಪೂಜೆಗ ದಾನದತ್ತಿಗಳನ್ನು ಬಿಡುವ ಸಂಪ್ರದಾಯ ಬೆಳೆದು ಬಂತು. ಮಡಿದ ವೀರನಿಗೆ ಅಂತ್ಯಸಂಸ್ಕಾರಗಳನ್ನು ಮಾಡುತ್ತಿದ್ದರು. ಮಡಿದ ವ್ಯಕ್ತಿಗೆ ಮಕ್ಕಳು ಇಲ್ಲದಿದ್ದಾಗ ಮಡಿದ ವ್ಯಕ್ತಿಯ ನೇರ ಸಂಬಂಧಿಕರು ವೀರಗಲ್ಲನ್ನು ಮಾಡಿಸಿ ದಾನವಿತ್ತು ಪೂಜೆ ಮಾಡುತ್ತಿದ್ದರು. ವೀರಮರಣವನ್ನು ಪಡೆಯುವುದು ವೀರನಿಗೆ ಮಾತ್ರವಲ್ಲ ಎಲ್ಲಾ ಸಂಬಂಧಿಕರಿಗೂ ಆತನ ತಾಯಿಗೂ ಮತ್ತು ಮಡದಿಗೂ ಇದು ಹೆಮ್ಮೆಯ ವಿಷಯವಾಗಿತ್ತು. ತಮ್ಮನ್ನು 'ವೀರ ಜನನಿ'ಯರೆಂದು ಜನರು ಕರೆದಾಗ ಅವರು ಹೆಮ್ಮೆಪಟ್ಟುಕೊಂಡರೆ ಕೆಲವು ಕೆಲವು ತಾಯಂದಿರು ಶೋಕಾರ್ಥವಾಗಿ ಪ್ರಾಣವನ್ನು ತ್ಯಜಿಸುತ್ತಿದ್ದರೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಪತಿಯ ಸಾವನ್ನು ಕೇಳಿ ಹಲವಾರು ಸ್ತ್ರೀಯರು ಸಹಗಮನ ಮಾಡುತ್ತಿದ್ದರು. ರಾಷ್ಟ್ರಕೂಟರ ಕಾಲದ ಶಾಸನವೊಂದರಲ್ಲಿ ಯುದ್ಧದಲ್ಲಿ ಮಡಿದ ಇಬ್ಬರು ಶೂರರ ಸ್ಮಾರಕವಾಗಿ ನೆಟ್ಟ ವೀರಗಲ್ಲನ್ನು ನೊಳಂಬರು ಸುಟ್ಟರು ಎಂಬ ವಿಷಯ ಬರುತ್ತದೆ.  ಆದರೆ ಊರಿನ ಜನರು ಸೇರಿ ಆ ವೀರಗಲ್ಲನ್ನು ಪುನಃ ಪ್ರತಿಷ್ಠಾಪಿಸುತ್ತಾರೆ.[11] ಇದರಿಂದ ಒಂದು ವಿಷಯವು ಸ್ಪಷ್ಟವಾಗುತ್ತದೆ. ವೀರನ ಸಾವನ್ನು ಹೇಳುವ ವೀರಗಲ್ಲು ಅವನ ಹೆಸರನ್ನು ಶಾಶ್ವತವಾಗಿ ಮಾಡುತ್ತಿತ್ತಲ್ಲದೇ ಅವನ ಕಡೆಯವರಿಗೆ ಧೈರ್ಯ, ಶಕ್ತಿ, ಉತ್ಸಾಹವನ್ನು ತುಂಬುತ್ತಿತ್ತು. ಆದ್ದರಿಂದ ಸ್ವಇಚ್ಛೆಯಿಂದ ವೀರನ ಬಗ್ಗೆ ಇರುವ ವಿಶ್ವಾಸಕ್ಕೆ, ಕೃತಜ್ಞತೆಗೆ ಗ್ರಾಮಸ್ಥರು ಮತ್ತು ಸಾರ್ವಜನಿಕರೂ ಸಹ ವೀರಗಲ್ಲನ್ನು ಹಾಕಿಸುತ್ತಿದ್ದರು.

ವೀರರ ಸಾವಿಗೆ ಕಾರಣವಾದ ಅಂಶಗಳು ಮತ್ತು ವೀರಕೃತ್ಯಗಳನ್ನು ಗಮನದಲ್ಲಿಟ್ಟು ಕೊಂಡು ವೀರಗಲ್ಲುಗಳನ್ನು 10 ವಿಧಗಳಾಗಿ ವಿಂಗಡಿಸಬಹುದು.

1. ತುರುಗೋಳ್/ಗೋಗ್ರಹಣದ ವೀರಗಲ್ಲುಗಳು
2. ಪೆಣ್ಬುಯಲ್ ಹೋರಾಟದ ವೀರಗಲ್ಲುಗಳು
3. ಊರಳಿವಿನ ಹೋರಾಟದ ವೀರಗಲ್ಲುಗಳು
4. ಗಡಿಕಾಳಗದ ವೀರಗಲ್ಲುಗಳು
5. ಕೋಟೆಕಾಳಗದ ವೀರಗಲ್ಲುಗಳು
6. ಕಳ್ಳರೊಂದಿಗಿನ ಹೋರಾಟದ ವೀರಗಲ್ಲುಗಳು
7. ಯದ್ಧದ ವೀರಗಲ್ಲುಗಳು
8. ಆತ್ಮಬಲಿಯ ವೀರಗಲ್ಲುಗಳು
9. ಬೇಟೆಯ ವೀರಗಲ್ಲುಗಳು
10. ನೀರಿನಲ್ಲಿ ಅಥವಾ ನೌಕಾಯುದ್ಧದಲ್ಲಿ ಮಡಿದವರ ವೀರಗಲ್ಲುಗಳು[12]

ಹೀಗೆ ವೀರರ ವೀರಕೃತ್ಯಗಳ ಆಧಾರದ ಮೇಲೆ ವೀರಗಲ್ಲುಗಳಲ್ಲಿ ಹಲವಾರು ವಿಧಗಳಿದ್ದು ಪ್ರಸ್ತುತ ಅಧ್ಯಾಯದಲ್ಲಿ ಈ ವೀರಗಲ್ಲುಗಳ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸುವುದರ ಜೊತೆಗೆ ಹಾಸನ ತಾಲೂಕಿನಲ್ಲಿ ಕಂಡು ಬರುವ ಹೊಯ್ಸಳರ ಕಾಲದ ಶಾಸನೋಕ್ತ ವೀರಗಲ್ಲುಗಳ ರಾಜಕೀಯ, ಸಾಮಾಜಿಕ, ಆರ್ಥಿಕ ಅಂಶಗಳು. ಇವುಗಳನ್ನು ಬರೆದಂತಹ ಓಜ ಮತ್ತು ವೀರಗಲ್ಲುಗಳನ್ನು ಹಾಕಿಸಿದವರು ಇನ್ನೂ ಮುಂತಾದ ವಿಚಾರಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

**1. ತುರುಗೋಳ್/ಗೋಗ್ರಹಣದ ವೀರಗಲ್ಲುಗಳು:** ಗೋವುಗಳಿಗೆ ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯಲ್ಲಿ ಪವಿತ್ರವಾದ ಸ್ಥಾನವನ್ನು ನೀಡಲಾಗಿದ್ದು ಇಂದಿಗೂ ಆಕಳನ್ನು ಗೋಮಾತೆ ಎಂದು ಪೂಜಿಸುತ್ತಾರೆ. ವೇದಗಳು, ಪುರಾಣಗಳು, ಧರ್ಮಗ್ರಂಥಗಳು ಮತ್ತು ಅನೇಕ ಸಾಹಿತ್ಯ ಕೃತಿಗಳು ಗೋವಿನ ಮಹಿಮೆಯನ್ನು ತಿಳಿಸುತ್ತವೆ. ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ಪುರುಷಾರ್ಥಗಳು ಆಕಳಿಂದ ಸಿದ್ಧಿಯಾಗುತ್ತವೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.[13] ಗೋವುಗಳಿಲ್ಲದ ಭಾರತೀಯ ಗ್ರಾಮೀಣ ಸಮಾಜವನ್ನು ನಾವು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಪ್ರಾಚಚೀನ ಕಾಲದಲ್ಲಿ ಆಕಳುಗಳೇ ಸಂಪತ್ತಿನ ಮಾನದಂಡವಾಗಿದ್ದು, ಇವು ಮಾನವನ ಕೃಷಿ, ಸಾಗಾಣಿಕೆ ಮತ್ತು ಮುಖ್ಯ ಆಹಾರಗಳಲ್ಲಿ ಒಂದಾದ ಹಾಲಿಗೆ ಅತ್ಯಾವಶ್ಯಕವಾಗಿದ್ದವು. ಭಾರತೀಯ ಸಂಸ್ಕೃತಿಯಲ್ಲಿ ಪೂಜನೀಯ ಮತ್ತು ಐಶ್ವರ್ಯವೆಂದೇ ಭಾವಿಸಿದ್ದ ಈ ಗಓವುಗಳನ್ನು ಕದಿಯುವುದು ಕಳ್ಳಗೆ ಬಹುಪ್ರಿಯವಾಗಿತ್ತು.[14] ಕಳ್ಳತನವನ್ನು ಉದ್ದೇಶ ವಾಗಿಟ್ಟುಕೊಂಡು ಗೋವುಗಳನ್ನು ಕದಿಯಲು ಬಂದಾಗ ಇವುಗಳನ್ನು ಕಾಯುತ್ತಿದ್ದ

ಗೋವಳರು ಮತ್ತು ಇತರರು ಹುಯ್ಯಲನೆಬ್ಬಿಸದಾಗ (ತುರುಗಳಿಗೆ ಹುಯ್ಯಲು ಎಂಬ ಹೆಸರೂ ಇದೆ) ಊರಿನ ಜನರು ಅವುಗಳನ್ನು ರಕಷಿಸಲು ಮುಂದಾಗುತ್ತಿದ್ದರು. ಇಂತಹ ಸಂದರ್ಭದಲ್ಲಿ ಹೋರಾಡಿ ಮಡದಿವರ ನೆನಪಿನಾರ್ಥವಾಗಿ ನಿಲ್ಲಿಸಿದ ಸ್ಮಾರಕ ಶಿಲ್ಪಗಳೇ ತುರುಗೋಳ್ ವೀರಗಲ್ಲುಗಳು. ತುರುಗಾಳಗವು ಮುಖ್ಯವಾಗಿ ಸ್ವರಕ್ಷಣಾ ಯುದ್ಧ. ಆದ್ದರಿಂದ ಇಂತಹ ಹೋರಾಟದಲ್ಲಿ ತುರುಗಳನ್ನು ಹಿಂದಿರುಗಿಸುವಲ್ಲಿ ಹೋರಾಡುವ ವೀರರ ಬಗ್ಗೆ ಗೌರವ ಭಾವನೆ ಇತ್ತು.[15] ಹಾಗೆಯೇ ತುರುಗೋಳ್ ಕದನದಲ್ಲಿ ಶೌರ್ಯವನ್ನು ಮೆರೆಯದವನನ್ನು ಹೇಡಿಯೆಂದು ಜನರು ಭಾವಿಸುತ್ತಿದ್ದರು. ಅಲ್ಲದೇ ಗೋವು ಪೂಜನೀಯವಾದದ್ದು ಮತ್ತು ಅದನ್ನು ಕಳೆದುಕೊಳ್ಳಲಾಗದ ಆಸ್ತಿಯಾಗಿದ್ದು, ಅದನ್ನು ಕಳೆದುಕೊಳ್ಳುವುದು ಊರಿನ, ವ್ಯಕ್ತಿಯ ಮಾನ ಮತ್ತು ಅವಮಾನದ ಪ್ರಶ್ನೆಯೂ ಸಹ ಆಗಿತ್ತು. ಇಂತಹ ಪ್ರಾಮುಖ್ಯೆ ಪಡೆದ ಗೋವುಗಳನ್ನು ರಕ್ಷಿಸಲು ಹೋರಾಡಿ ಮಡಿದ ವೀರರ ನೆನಪಾರ್ಥವಾಗಿ ನಿಲ್ಲಿಸಿದ ತುರುಗೋಳ್ ವೀರಗಲ್ಲುಗಳು ಹಾಸನ ತಾಲೂಕಿನಲ್ಲಿ ಹೊಯ್ಸಳರ ಆಳ್ವಿಕೆಯಲ್ಲೂ ಕಂಡು ಬರುತ್ತವೆ. ಕ್ರಿ.ಶ.1117ರ ಕಾಲಮಾನದ ವೀರಗಲ್ಲು ಶಾಸನವು[16] ಬುವಗಾವುಂಡನ ಮಗ ಬಮ್ಮಗೊಂಡನು ಅರಸೀಕೆರೆಯಲ್ಲಿ ನಡೆದ ತುರುಗಾಳಗದಲ್ಲಿ ಮಡಿದಾಗ ಸುರಕನ್ನೆಯರು ಸುರಲೋಕಕ್ಕೆ ಕೊಂಡೊಯ್ದರು ಎಂಬ ಅಂಶವನ್ನು ಉಲ್ಲೇಖಿಸುತ್ತವೆ. ಪ್ರಸ್ತುತ ಈ ವೀರಗಲ್ಲು ಶಾಸನವನ್ನು ಹಾಸನ ನಗರದ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಇರಿಸಲಾಗಿದೆ. (ಚಿ.ಸಂ.251) ಬೈಲಹಳ್ಳಿ ಗ್ರಾಮವ ವೀರಗಲ್ಲು ಶಾಸನವು[17] ಭಾಗಶಃ ಭೂಮಿಯಲ್ಲಿ ಮುಚ್ಚಿಹೋಗಿದ್ದು ಇದರ ಮೇಲ್ಭಾಗದ ಪಟ್ಟಿಕೆ ಮತ್ತು ಇದರ ಕೆಳಗೆ ನಾಲ್ಕು ಸಾಲಿನ ಶಾಸನ ಮಾತ್ರ ಕಂಡು ಬರುತ್ತದೆ. (ಚಿ.ಸಂ.252) ಈ ಶಾಸನದ ಪಠ್ಯವು ತುರುಗಾಳಗದಲ್ಲಿ ಯುದೆಬಾವೆ ಕುಟಾರಿಯ ವಿರುದ್ಧ ಕೂಚನು ಮರಣ ಹೊಂದಿದ ಅಂಶವನ್ನು ತಿಳಿಸುತ್ತವೆ. ಕ್ರಿ.ಶ.1173ರ ಗೌಡಗೆರೆಯ ವೀರಗಲ್ಲು ಶಾಸನವು[18] (ಚಿ.ಸಂ. 253) ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಗೌಡಗೆರೆಯ ತುರುಗಳನ್ನು ಅಪಹರಿಸಲು ಬಂದಾಗ ವೀರಣ ಮತ್ತು ಬಂಕ ಎಂಬುವರು ಹೋರಾಡಿ ಮಡಿದಾಗ ಮಾರಗಾವುಂಡನ ಮಗ ಮುದ್ದಯನು ಈ ವೀರಗಲ್ಲನ್ನು ನಿಲ್ಲಸಿದನೆಂಬ ಮಾಹಿತಿಯನ್ನು ನೀಡುತ್ತದೆ. ಉಗನೆ ಗ್ರಾಮದ ವೀರಗಲ್ಲು ಶಾಸನವು[19](ಚಿ.ಸಂ.254) ಬೈಲಹಳ್ಳಿಯ ತುರುಗಳನ್ನು ರಕ್ಷಿಸಿ ಬಸಗೌಡ, ಮಾರಗೌಡ, ಮಸಣಗವುಡ, ಮಾದಗಾಮುಂಡರು ವೀರಮರಣವನ್ನಪ್ಪಿದ ಮಾಹಿತಿಯನ್ನು ನೀಡುತ್ತದೆ. ಕ್ರಿ.ಶ.1147ರ ನಿಟ್ಟೂರಿನ ವೀರಗಲ್ಲು ಶಾಸನವು[20] ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಲೋಕಮಾಣಿಸೆಟ್ಟಿಯ ಮೊಮ್ಮಗ, ಮಲೆಯಗಾವುಂಡನ ಮಗನಾದ ವರೆಯನು ನಿಟ್ಟೂರಿನ ಪೂರ್ವದಿಕ್ಕಿನ ಕೆರೆಯಲ್ಲಿ ತುರುಗಳನ್ನು ರಕ್ಷಿಸಲು ಹೋರಾಡಿ ಸ್ವರ್ಗಸ್ತನಾದನು ಎಂಬ ಮಾಹಿತಿಯನ್ನು ನೀಡುತ್ತದೆ. ಪ್ರಸ್ತುತ ಈ ವೀರಗಲ್ಲು ಶಾಸನವು ಹಾಸನ ನಗರದ

ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ನಿಲ್ಲಿಸಲಾಗಿದೆ. (ಚಿ.ಸಂ.255) ಕೋಡಿಹಳ್ಳಿ ಗ್ರಾಮದ ವೀರಗಲ್ಲು ಶಾಸನವು[21] (ಚಿ.ಸಂ.256) ತ್ರಿಭುವನಮಲ್ಲ ಮಲಪರೊಳ್‌ಗಂಡ ವಿಷ್ಣುವರ್ಧನ ಬಿಟ್ಟಿದೇವನು ಗಂಗವಾಡಿ 96,000 ಪ್ರದೇಶವನ್ನು ಆಳ್ವಿಕೆ ಮಾಡುತ್ತಿರುವಾಗ ನಡೆದ ತುರುಗಾಳಗದಲ್ಲಿ ಸೋಮಣ ಎಂಬಾತನು ಶಿವಲೋಕ ಪ್ರಾಪ್ತನಾದನು ಎಂಬ ಮಾಹಿತಿ ನೀಡುತ್ತದೆ. ಅಮ್ಮಗೌಡನಹಳ್ಳಿ ಗ್ರಾಮದ ವೀರಗಲ್ಲು ಶಾಸನವು[22] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಅಮ್ಮಗೋಡಿಯ ಮಗನು ದುದ್ಧದಲ್ಲಿ ತುರುಗಳನ್ನು ಅಪಹರಿಸಲು ಹೋಗಿ ಮರಣ ಹೊಂದಿದ ಅಂಶವನ್ನು ತಿಳಿಸುತ್ತದೆ. (ಚಿ.ಸಂ.257) ಆದರೆ ಈ ವೀರಗಲ್ಲು ಶಾಸನ ಎರಡನೇ ಬಲ್ಲಾಳನ ಕಾಲಕ್ಕೆ ಸೇರಿದ್ದೋ ಅಥವಾ ಮೂರನೇ ಬಲ್ಲಾಳನ ಕಾಲದ್ದೋ ಎಂಬುದು ಅಸ್ಪಷ್ಟ. ಏಕೆಂದರೆ ಈ ವೀರಗಲ್ಲು ಶಾಸನದಲ್ಲಿ ವೀರಬಲ್ಲಾಳನ ಆಳ್ವಿಕೆ ಎಂದು ನಮೂದಿಸಿರುವುದರಿಂದ ಇದನ್ನು ಯರ ಕಾಲಘಟ್ಟಕ್ಕೆ ಅನ್ವಯಿಸಬೇಕೆಂಬುದರದಲ್ಲಿ ಗೊಂದಲಗಳಿವೆ.

**2. ಪೆಣ್ಬುಯಲ್ ಹೋರಾಟದ ವೀರಗಲ್ಲುಗಳು**: ಪೆಣ್ಬುಯಲ್ ಎಂದರೆ ಹೆಣ್ಣಿನ ಅಸಹಾಯಕ ಆರ್ತಧ್ವನಿ ಅಥವಾ ಕೂಗು ಎಂಬರ್ಥವಿದೆ. ನೆರೆ ರಾಜ್ಯದವರು ಅಥವಾ ಕಳ್ಳರು ತುರುಗಳನ್ನು ಕದಿಯಲು ಬಂದಾ ಸ್ತ್ರೀಯರನ್ನು ಅಪಹರಿಸುತ್ತಿದ್ದರು ಹಾಗೂ ಅವರ ಮಾನಭಂಗಕ್ಕೆ ಯತ್ನಿಸುತ್ತಿದ್ದರು. 'ಅಥವಾ ಸೀರೆ ಸೆಳೆಯುವುದರ ಮೂಲಕ ಯುದ್ಧವನ್ನು ಸಾರುತ್ತಿದ್ದರು'. ಇಂತಹ ವೇಳೆಯಲ್ಲಿ ಸ್ತ್ರೀಯರ ಉಯ್ಯಲನ್ನು (ಕೂಗನ್ನು) ಕೇಳಿ ಅವರನ್ನು ರಕ್ಷಿಸಲು ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲುಗಳೇ ಪೆಣ್ಬುಯಲ್ ವೀರಗಲ್ಲುಗಳು.[23] ಪೆಣ್ಬುಯಲ್‌ಗಳು ಯಾವಾಗ ಆಗುತ್ತಿದ್ದವು ಎಂಬುದನ್ನು ಹೇಳುವುದು ಕಷ್ಟ. ಯುದ್ಧಾನಂತರ ಅರಸರ ಊರುಗಳನ್ನು ಗೆದ್ದವರು ಆಕ್ರಮಿಸಿದಾಗ ನಡೆದಿರಬಹುದು ಅಥವಾ ಹೆಣ್ಣುಮಕ್ಕಳು ಒಂಟಿಯಾಗಿದ್ದಾಗ ನಡೆದಿರಬಹುದು. ಒಮ್ಮೊಮ್ಮೆ ಕೇವಲ ಸ್ತ್ರೀಯರನ್ನು ಅವಮಾನಗೊಳಿಸುವ ಉದ್ದೇಶದಿಂದಲೂ ದಾಳಿಕಾರರು ಬರುತ್ತಿದ್ದರು.[24,25] ಆದರೆ ಈ ರೀತಿಯ ಹುಯ್ಯಲುಗಳ ಪ್ರಸ್ತಾಪ ವೀರಗಲ್ಲುಗಳ್ಲಲಿ ಅಪರೂಪವಾದುದಗಿದ್ದು ಹಾಸನ ತಾಲೂಕಿನ ಕಿತ್ತನಕೆಗೆ ಗ್ರಮದಲ್ಲಿ ಪೆಣ್ಬುಯಲ್ ವೀರಗಲ್ಲೊಂದು ಕಂಡು ಬರುತ್ತದೆ. ಕ್ರಿ.ಶ.1196ರ ಈ ವೀರಗಲ್ಲು ಶಾಸನವು[26] ಹೊಯ್ಸಳ ವೀರಬಲ್ಲಾಳನು ಕಲ್ಯಾಣಪರ್ಯಂತವಾಗಿ ರಾಜ್ಯವಾಳುತ್ತಿರುವಾಗ ಹರುವನಹಳ್ಳಿಯ ದಾರಿಯಲ್ಲಿ ಹೆಂಗಸರ ಮಾನಭಂಗದ ಪ್ರಯತ್ನವಗುತ್ತಿರುವಾಗ ಚಟ್ಟಗೌಂಡರ ಒಆಳಯ್ಯನ ಮಗ ಸೋಮೆಯನೂ ಅವನ ಸಂಗಡದಲ್ಲಿದ್ದ ಬೆಚ್ಚಯ್ಯ ಎಂಬುವವನೂ ಹೋರಾಡಿ ಹೆಣ್ಣುಮಕ್ಕಳ ಮಾನವನ್ನು ಕಾಪಾಡಿ ಹಿಂದಕ್ಕೆ ಕಳುಹಿಸಿ, ಅವರನ್ನು ಅಪಹರಿಸಲು ಬಂದ ಕಳ್ಳರನ್ನು ಕೊಂದು ಹೋರಾಡುವಾಗ ಮಡಿಯುತ್ತಾರೆ.[27] ಇವರ ನೆನಪಿನಾರ್ಥವಾಗಿ ಸೋಮಯನ ಹಿರಿಯಣ್ಣ ಕಲ್ಲೆಯನು, ಈತನ

ತಮ್ಮ ಬೆನಚೆಯನು ಮತ್ತು ಕಟ್ಟದಹಳ್ಳಿಯ ಮಾದಿಗೌಡ ಈ ಮೂವರು ಸೇರಿ ಚಟ್ಟಗೌಡರ ಕೆರೆಯ ಕೆಳಗೆ ವೀರಗಲ್ಲನ್ನು ನಿಲ್ಲಿಸಿದರೆಂದು ಶಾಸನ ಪಠ್ಯದಿಮದ ತಿಳದು ಬರುತ್ತದೆ. ಹಾಗೂ ಈ ವೀರಗಲ್ಲಿನ ನೈವೇದ್ಯ ಮತ್ತು ಹೂಪತ್ರೆಗೆ ಗದ್ದೆಯನ್ನು ದಾನ ನೀಡಿದ ಉಲ್ಲೇಖ ಇದೇ ಗ್ರಾಮದ ಮತ್ತೊಂದು ವೀರಗಲ್ಲು ಶಾಸನವು[28] "ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾಕ್ಷಣ ವಿರ್ಧವಂಸಿನೀ ಕಾಯೇ ಕಾ ಚಿಂತ್ಯಾ ಮರಣೇ ರಣೇ" ಅಂದರೆ ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು, ಸತ್ತರೆ ಸ್ವರ್ಗದಲ್ಲಿ ಸುರಾಂಗನೆಯರು ದೊರಕುವರು ಎಂಬ ಮಾಹಿತಿಯನ್ನು ತಿಳಿಸುತ್ತದೆ.

3. **ಊರಳಿವಿನ ಹೋರಾಟದ ವೀರಗಲ್ಲುಗಳು:** ಕಳ್ಳರು ತುರುಗಳನ್ನು ಕದ್ದು, ಸ್ತ್ರೀಯರನ್ನು ಮಾನಭಂಗಗೊಳಿಸಿ, ಊರನ್ನು ನಾಶಪಡಿಸುತ್ತಿದ್ದುದರಿಂದ ಇದನ್ನು 'ಊರಳಿವು' ಅಥವಾ ಊರಿನ ನಾಶ ಎಂದು ಕರೆಯಲಾಗಿದೆ.[29] ಈ ಕಳ್ಳರು ಊರಿಗೆ ನುಗ್ಗಿ, ಸಂಪತ್ತನ್ನು ಅಪಹರಿಸಿ ಊರಿಗೆ ಬೆಂಕಿಯಿಡುತ್ತಿದ್ದರು. ಇಂತಹ ಸಂದರ್ಭದಲ್ಲಿ ಇದು ಊರಿಗೆ ಬಂದೊದಗಿದ ನಾಶದ ಪರಿಸ್ಥಿತಿ ಎಂದು ಪರಗಣಿಸಿ ಗ್ರಾಮದ ಜನರು, ಅಧಿಕಾರಿಗಳು ಮತ್ತು ವೀರರು ಊರಿನ ರಕ್ಷಣೆಗಾಗಿ ಮುಂದಾಗುತ್ತಿದ್ದರು. ಈ ಹೋರಾಟದಲ್ಲಿ ಮಡಿದ ವೀರರ ಸ್ಮರಣಾರ್ಥವಾಗಿ ನಿಲ್ಲಿಸಿದ ಸ್ಮಾರಕಗಳನ್ನೇ ಊರಳಿವಿನ ಹೋರಾಟದ ವೀರಗಲ್ಲುಗಳೆಂದು ಕರೆಯಲಾಗಿದೆ. ಆದರೆ ಭಾರತೀಯ ಯುದ್ಧ ತಂತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಕಳ್ಳರು ಮಾತ್ರವಲ್ಲದೇ ಯುದ್ಧದಲ್ಲಿ ಗೆದ್ದ ಅರಸನು ತಾನು ಆಕ್ರಮಣ ಮಾಡಿ ಗೆದ್ದ ಅರಸನ ರಾಜ್ಯವನ್ನು ಲೂಟಿ ಮಾಡುತ್ತಿದ್ದ, ಕೆಲವೊಮ್ಮೆ ಗ್ರಾಮಗಳನ್ನು ಸುಡುತ್ತಿದ್ದ ಅಂಶ ತಿಳಯುತ್ತದೆ. ಎರೆಯಂಗನು ಮಾಳವ ದೇಶದ ರಾಜಧಾನಿಯಾದ ಧಾರಾನಗರವನ್ನೂ, ಬಲ್ಲಾಳನು ಉಚ್ಚಂಗಿಯನ್ನು ಸುಟ್ಟ ವಿಷಯವನ್ನು ಇಲ್ಲಿ ಸ್ಮರಿಸಬಹುದು.[30] ಹೊಯ್ಸಳ ವಿಷ್ಣುವರ್ಧನನು ಘಟ್ಟದ ಪ್ರದೇಶದಲ್ಲಿ ದಾಳೀ ಮಾಡಿದಾಗ ಅಡಿಕೆ, ತೆಂಗು ಮತ್ತು ತೇಗದ ಮರಗಳನ್ನು ಸುಟ್ಟ ವಿಷಯ ಒಂದು ಕಡೆ ತಿಳಯುತ್ತದೆ.[31] ಹೀಗೆ ಕಳ್ಳರು ಮಾತ್ರವಲ್ಲದೇ ಶತ್ರುರಾಜರೂ ಸಹ ದಾಳಿ ಮಾಡಿದಾಗ ಊರು ನಾಶವಾಗುತ್ತಿದ್ದರಿಂದ ಈ ಕೃತ್ಯಗಳನ್ನು ಅಂದಿನ ಜನರು ಊರಳಿವು ಎಂಬುದಾಗಿ ಗುರುತಿಸಿದ್ದಿರಬಹುದು. ಈ ಊರಳಿವಿನ ಹೋರಾಡದ ವೀರಗಲ್ಲುಗಳನ್ನು ಶಿಲ್ಪದ ಆಧಾಋದ ಮೇಲೆ ಗುರುತಿಸುವುದು ಕಷ್ಟ ಸಾಧ್ಯ. ಆದ್ದರಿಂದ ಇವುಗಳನ್ನು ಶಾಸನದ ಪಠ್ಯದ ಮೂಲಕವೇ ಗುತುತಿಸಬೇಕಾಗುತ್ತದೆ.

4. **ಗಡಿಕಾಳಗದ ವೀರಗಲ್ಲುಗಳು:** ಒಂದು ರಾಜ್ಯದ ಅರಸನು ತನ್ನ ಆಡಳತದ ವಿಧಾನಕ್ಕನುಗುಣವಾಗಿ ರಾಜ್ಯವನ್ನು ಹಲವಾರು ಭಾಗಗಳನ್ನಾಗಿ ವಿಂಗಡಿಸುತ್ತಿದ್ದನು. ಇವುಗಳಲ್ಲಿ ಗ್ರಾಮಗಳೂ ಸಹ ಒಂದು ಭಾಗವಾಗಿದ್ದು ಸ್ವತಂತ್ರ ಘಟಕಗಳಾಗಿ ಕಾರ್ಯನಿರ್ವಹಿಸುತ್ತಿದ್ದವು.

ಪ್ರತೀ ಹಳ್ಳಿಗಳಿಗೂ ಒಂದು ಗಡಿಯಿದ್ದು, ಈ ಗಡಿಯನ್ನು ರಾಜ್ಯದ ಅಧಿಕಾರಿಗಳು ನಿರ್ಧರಿಸುತ್ತಿದ್ದರು.[32] ಆದರೆ ಕಾರಣಾಂತರಗಳಿಂದ ಒಂದು ಹಳ್ಳಿಯು ಇನ್ನೊಂದು ಹಳ್ಳಿಯ ಗಡಿಯನ್ನು ಒತ್ತುವರಿ ಮಾಡಿದಾಗ ಘರ್ಷಣೆಗಳು ನಡೆಯುತ್ತಿದ್ದು ಈ ಘರ್ಷಣೆಗಳಲ್ಲಿ ಕೆಲವರು ಮಡಿದಾಗ ಇವರ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲುಗಳನ್ನೇ ಗಡಿಕಾಳಗದ ವೀರಗಲ್ಲುಗಳೆಂದು ಕರೆಯಲಾಗಿದೆ. ಆಯಾ ಊರಿನ ಗಡಿಗಳಿಗೆ ಸ್ವಲ್ಪಮಟ್ಟಿಗೆ ಆಯಾ ಊರಿನ ಜನರೇ ಹೊಣೆಗಾರರಾಗುತ್ತಿದ್ದರು.[33] ಆದರೆ ಈ ಗಡಿಗಳ ವಿಷಯದಲ್ಲಿ ಶಾಂತಿಯುತ ಸಂಧಾನಗಳು ವಿಫಲವಾದಾಗ, ಇದರ ಪರಿಣಾಮವಾಗಿ ಹಳ್ಳಿಹಳ್ಳಿಗಳ ನಡುವೆ ಹೋರಾಟ ನಡೆದು ಅನೇಕರು ಮಡಿಯುತ್ತಿದ್ದರೆಂದು ತಿಳಿದು ಬರುತ್ತದೆ. ಈ ಗಡಿಕಾಳಗದ ಶಿಲ್ಪಗಳನ್ನು ತಕ್ಷಣ ಗುರುತಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಈ ಶಿಲ್ಪಗಳೂ ಸಹ ಯಾವುದೇ ವಿಶೇಷ ಲಕ್ಷಣಗಳನ್ನು ಹೊಂದಿರದೇ ಸಾಮಾನ್ಯವಾಗಿರುತ್ತವೆ. ಆದ್ದರಿಂದ ಈ ಗಡಿಕಾಳಗದ ವೀರಗಲ್ಲುಗಳನ್ನು ಶಾಸನ ಪಠ್ಯದಿಂದ ಮಾತ್ರ ಗುರುತಿಸಬಹುದಾಗಿದೆ.

ಹಾಸನ ತಾಲೂಕಿನ ಸಾಲಗಾಮೆ ಗ್ರಾಮದ 13-14ನೇ ಶತಮಾನದ ವೀರಗಲ್ಲು ಶಾಸನವು[34] ಸಾಲಗಾಮೆಯ ಗಡಿಕಾಳಗದಲ್ಲಿ ಗುಮ್ಮ ಎಂಬಾತನು ಮರಣ ಹೊಂದಿದಾಗ ಈ ಗ್ರಾಮದ ಗಡಿಯ ದಕ್ಷಿಣ ದಿಕ್ಕಿನ ಕಂಡುಗ ಹೊಲವನ್ನು ಮತ್ತು ಉತ್ತರ ದಿಕ್ಕಿನ ಕಂಭ ನೂರು ಗದ್ದೆಯನ್ನು ದಾನ ನೀಡಿದ ಅಂಶವನ್ನು ತಿಳಿಸುತ್ತದೆ. ಕ್ರಿ.ಶ.1174ರ ಹೊನ್ನಾವರ ಗ್ರಾಮದ ವೀರಗಲ್ಲು ಶಾಸನವು[35] ಹೊನ್ನಾವರ ಮತ್ತು ನಿರ್ಗುಂದದ ಗಡಿ ಕಾಳಗದಲ್ಲಿ ಭೀಮನ ಮಗ ಹೊನ್ನಗಾವುಂಡನು ಮರಣ ಹೊಂದಿದಾಗ ಹಿರಿಯ ಹಡಪದ ಹೆಗ್ಗಡೆ ಮಂಚಿಯಣ್ಣನ ಆಳ್ವಿಕೆಯಲ್ಲಿ ಮಸಣಗೌಡ ಮತು ಸಮಸ್ತ ಪ್ರಜೆಗಳು ಈ ವೀರಗಲ್ಲನ್ನು ನಿರ್ಮಿಸಿ ದಾನ ನೀಡಿದ ಅಂಶವನ್ನು ತಿಳಿಸುತ್ತದೆ. (ಚಿ.ಸಂ. 258) ಕೋರವಂಗಲ ಗ್ರಾಮದ ಕ್ರಿ.ಶ.12ನೇ ಶತಮಾನದ ವೀರಗಲ್ಲು ಶಾಸನವು [36] ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ದುದ್ದ ಮತ್ತು ಕೋರವಂಗಲದ ನಡುವಿನ ಗಡಿಕಾಳಗದಲ್ಲಿ ಬಿಟ್ಟಿಯೋಜನ ಮಕ್ಕಳಾದ ಬಮ್ಮೋಜ ಮತ್ತು ಮಸಣೋಜರು ಮರಣ ಹೊಂದಿದಾಗ ಮದನಾದಿಯಗ್ರಹಾರವಾದ ಶಾಂತಿಗ್ರಾಮದ ಮಹಾಜನರು ಮತ್ತು ಗೌಡರು ಪರೋಕ್ಷ ವಿನಯದ ರೂಪದಲ್ಲಿ ಈ ವೀರಗಲ್ಲನ್ನು ನಿಲ್ಲಿಸಿದ ಅಂಶವನ್ನು ಉಲ್ಲೇಖಿಸಿದೆ. (ಚಿ.ಸಂ. 259)

**5. ಕೋಟೆ ಕಾಳಗದ ವೀರಗಲ್ಲುಗಳು**: ಕೋಟೆ ಎಂಬುದು ಪ್ರಾಚೀನ ಕಾಲದಲ್ಲಿ ರಾಜಕೀಯ ವ್ಯವಸ್ಥೆಯ ಮತ್ತು ರಕ್ಷಣೆಯ ಭಾರವನ್ನು ಹೊತ್ತಿದ್ದಂತಹ ಒಂದು ಪ್ರಮುಖ ಘಟಕವಾಗಿತ್ತು. ಕೋಟೆಯ ಸಾಮರ್ಥ್ಯದ ಮೇಲೆ ಆಡಳಿತ ವ್ಯವಸ್ಥೆಯ ಅಳಿವು ಮತ್ತು ಉಳಿವು ನಿರ್ಧರಿತವಾಗುತ್ತಿತ್ತೆಂದು ತಿಳಿದು ಬರುತ್ತದೆ. ಭದ್ರವಾದ ಕೋಟೆಯಿಲ್ಲದ ರಜನು ಬಿರುಗಾಳಿಯ

ಮುಂದಿನ ಮೋಡದ ತುಂಡುಗಳಿಗೆ ಸಮಾನನೆಂದು ವಿದ್ವಾಂಸರು ಅಭಿಪ್ರಾಯಿಸುತ್ತಾರೆ.[37] ಪ್ರಚೀನ ರಾಜರುಗಳು, ಅನೇಕ ರಾಜ್ಯಗಳ ಮೇಲೆ ದಂಡೆತ್ತಿ ಹೋಗಿ ಕೋಟೆಗಳನ್ನು ವಶಪಡಿಸಿಕೊಳ್ಳುವುದರ ಜೊತೆಗೆ ಶತ್ರುರಾಜರುಗಳಿಂದ ತಮ್ಮ ಕೋಟೆಗಳನ್ನು ಉಳಿಸಿಕೊಳ್ಳಲು ಹಲವು ಯುದ್ಧಗಳನ್ನು ಸಂಘಟಿಸುತ್ತಿದ್ದರು. ಈ ಕೋಟೆಗಳ ರಕ್ಷಣೆ ಮತ್ತು ಆಕ್ರಮಣದಲ್ಲಿ ಹಲವಾರು ವೀರರು ಮಡಿಯುತ್ತಿದ್ದರು. ಹೀಗೆ ಕೋಟೆ ಕಾಳಗದಲ್ಲಿ ವೀರಮರಣವನ್ನು ಹೊಂದಿದ ವೀರರ ನೆನಪಾರ್ಥವಾಗಿ ನಿರ್ಮಿಸಿದ ವೀರಗಲ್ಲುಗಳನ್ನು ಕೋಟೆ ಕಾಳಗದ ವೀರಗಲ್ಲುಗಳೆಂದು ಕರೆಯಲಾಗಿದೆ. ಕುದುರೆಗುಂಡಿ ಗ್ರಾಮದ ಕ್ರಿ.ಶ.1140ರ ವೀರಗಲ್ಲು ಶಾಸನವು[38] ಹೊಯ್ಸಳ ವಿಷ್ಣುವರ್ಧನನು ಹನಗಲ್ಲಿನ ಕೋಟೆಯನ್ನು ವಶಪಡಿಸಿಕೊಂಡಗ ಈ ಕಾಳಗದಲ್ಲಿ ಬಾಳುಗಿಯ ಚಟ್ಟಯ್ಯ ಎಂಬಾತನು ಮರಣ ಹೊಂದಿದ ಅಂಶವನ್ನು ತಿಳಿಸುತ್ತದೆ. (ಚಿ.ಸಂ. 260)

**6. ಕಳ್ಳರೊಂದಿಗಿನ ಹೋರಾಟದ ವೀರಗಲ್ಲುಗಳು:** ಕಳ್ಳರೊಡೆನ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿಯೂ ವೀರಗಲ್ಲುಗಳನ್ನು ನಿರ್ಮಿಸುತ್ತಿದ್ದರೆಂದು ತಿಳಿದು ಬರುತ್ತದೆ. ಆದರೆ ಈ ವೀರಗಲ್ಲುಗಳನ್ನು ಶಿಲ್ಪದ ಆಧಾರದ ಮೇಲೆ ಗುರುತಿಸುವುದು ಕಷ್ಟ ಸಾಧ್ಯ. ಆದ್ದರಿಂದ ಈ ವಿಧದ ವೀರಗಲ್ಲುಗಳನ್ನು ಗುರುತಿಸಲು ನಮಗೆ ಶಾಸನ ಪಾಠದ ಸಹಾಯ ಅವಶ್ಯಕವಾಗಿರುತ್ತದೆ. ಕಳ್ಳರೊಂದಿಗಿನ ಹೋರಾಟದ ವೀರಗಲ್ಲುಗಳನ್ನು ನಾವು ದಾರಿಗಳ್ಳರೊಂದಿಗೆ ಹೋರಾಡಿದ ವೀರರ ಮತ್ತು ಊರಿನ ಮೇಲೆ ಕಳ್ಳತನಕ್ಕಾಗಿ ಬಂದ ಕಳ್ಳರೊಡನೆ ಹೋರಾಡಿ ಮಡಿದ ವೀರರ ವೀರಗಲ್ಲುಗಳು ಎಂದು ಎರಡು ವಿಧಗಳಾಗಿ ವಿಂಗಡಿಸಬಹುದು. ದಾರಿಗಳ್ಳರ ಹಾವಳಿಯು ಅನಾದಿಕಾಲದಿಂದಲೂ ಇದ್ದ ಒಂದು ಸಮಸ್ಯೆಯಾಗಿದ್ದು ವಿವಿಧ ಉದ್ದೇಶಗಳಿಗೆ ಸಂಚರಿಸುತ್ತಿದ್ದ ವರ್ತಕರು, ಸಾಧುಗಳು, ತೀರ್ಥಯಾತ್ರಿಗಳು, ಕುದುರೆ ವ್ಯಾಪಾರಿಗಳು, ಸಂಚಾರಿಗಳು ಇನ್ನೂ ಮುಂತಾದ ವರ್ಗದ ಜನರು ಈ ದಾರಿಗಳ್ಳರಿಂದ ತೊಂದರೆಗೆ ಒಳಗಾಗುತ್ತಿದ್ದರು.[39] ಹಾಗೂ ಕೆಲವು ಕಳ್ಳರು ಊರಿನ ಹೊರವಲಯಗಳಲ್ಲಿ ಮೇಯುತ್ತಿರುವ ತುರುಗಳನ್ನು ಅಪಹರಿಸಲು ಬರುತ್ತಿದ್ದರುಳಿಂತಹ ಕಳ್ಳರ ವಿರುದ್ಧ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ನಿರ್ಮಿಸಿದ್ದರೆಂಬುದು ವಿವಿಧ ಶಾಸನ ಪಾಠದಿಂದ ನಮಗೆ ತಿಳಿದು ಬರುತ್ತದೆ. ಹಾಸನ ತಾಲೂಕಿನ ಗೌಡಗೆರೆ ಗ್ರಾಮದ ಕ್ರಿ.ಶ.1258ರ ವೀರಗಲ್ಲು ಶಾಸನವು[40](ಚಿ.ಸಂ. 261) ಮೂರನೇ ನರಸಿಂಹನ ಆಳ್ವಿಕೆಯ ಕಾಲಘಟ್ಟದಲ್ಲಿ ಗೌಡಗೆರೆಯ ಮುದ್ದಗಾವುಂಡನ ಮಗ ಮೊಮ್ಮಗೌಡ ಗದುಬಳ್ಳಿಯಿಂದ ಬರುತ್ತಿರುವಾಗ ನಡೆದ ಕಾಳಗದಲ್ಲಿ ಮಡಿದ ವಿಚಾರವನ್ನು ಉಲ್ಲೇಖಿಸುತ್ತದೆ. ನಿಟ್ಟೂರು ಗ್ರಾಮದ ಕ್ರಿ.ಶ.1213ರ ವೀರಗಲ್ಲು ಶಾಸನವು[41] ಬೇಡರ ಜಕ್ಕ ಎಂಬಾತನು ಅಯದಾರಿಯಲ್ಲಿ ನಡೆದ

ಕಾಳಗದಲ್ಲಿ ಮರಣ ಹೊಂದಿದಾಗ ಈತನ ಮಕ್ಕಳಾದ ದೇವಣ ಮತ್ತು ಮಾರೆಯ ಇವರು ವೀರಗಲ್ಲನ್ನು ಪ್ರತಿಷ್ಠಾಪಿಸಿದರೆಂದು ತಿಳಸುತ್ತದೆ. (ಚಿ.ಸಂ. 262)

ಕುದುರೆಗುಂಡಿ ಗ್ರಾಮದ ವೀರಗಲ್ಲು ಶಾಸನದಿಂದ[42] ಭಂಡಿಮಿಟ್ಟೆಯ ಘಟ್ಟದಲ್ಲಿ ದರೋಡೆಕೋರರಿಂದ ಆಗುತ್ತಿದ್ದ ಸಮಸ್ಯೆಯನ್ನು ವಿಪ್ರರು ಕುದುರೆಗುಂಡಿಯ ಗೌಡರ ಬಳ ಹೇಳಕೊಂಡಾಗ, ಮಸಣೋಜನು ಈ ಭಂಡಿಮಿಟ್ಟೆಯ ಘಟ್ಟದಲ್ಲಿ ಕಳ್ಳರೊಂದಿಗೆ ಹೋರಾಡಿ ಮಡಿದಾಗ ಈತನ ಸಹೋದರ ಹೆಣ್ಣೋಜನು ಈ ವೀರಗಲ್ಲನ್ನು ನಿರ್ಮಿಸಿದನೆಂದ ಮಾಹಿತಿ ತಿಳದು ಬರುತ್ತದೆ. (ಚಿ.ಸಂ.263)

**7. ಯುದ್ಧದ ವೀರಗಲ್ಲುಗಳು:** ಯುದ್ಧ ಎಂಬುದು ಮನುಷ್ಯನ ಸ್ವಭಾವಕ್ಕೆ ಅಚಿಟಿ ಬಂದ ಹುಟ್ಟು ಗುಣ. ಈ ಯುದ್ಧಗಳು ಚಕ್ರವರ್ತಿಗಳ ಮತ್ತು ಅರಸರ ಮಹತ್ವಾಕಾಂಕ್ಷೆ ಮತ್ತು ಅಸೂಯೆ ಕಾರಣಗಳಂದ ನಡೆಯುತ್ತಿದ್ದವು. ಯುದ್ಧದಿಂದಲೇ ತನ್ನ ಏಳಗೆ ಮತ್ತು ಶತ್ರುಗಳ ನಾಶ ಎಂಬುದಾಗಿ ಭಾರತದಲ್ಲಿ ಆಳದ ಎಲ್ಲಾ ಅರಸರೂ ಭಾವಿಸಿದ್ದಂಎ ಕಂಡು ಬರುತ್ತದೆ. ಈ ಅಂಶ ಅವರು ಮಾಡಿದ ಯುದ್ಧಗಳಂದಲೂ ಮತ್ತು ಅವರು ಹೊಂದಿದ್ದ ಬಿರುದು, ಪ್ರಶಸ್ತಿಗಳಂದಲೂ ವ್ಯಕ್ತವಾಗುತ್ತದೆ. ಈ ಯುದ್ಧಗಳು ರಾಜಮನೆತನಗಳ ನಡುವೆ ಬೆಳೆದು ಬಂದ ಮತ್ಸರಿಂದ, ದಾಯಾದಿ ಅಥವಾ ತಂದೆ ಮಕ್ಕಳ ನಡುವಿನ ವೈಮನಸ್ಸಿನಿಂದ, ಅರಸನಿಗೂ ಮತ್ತು ಸಾಮಂತ ಅರಸನಿಗೂ ಉಂಟಾದ ವೈಯಕ್ತಿಕ ಘರ್ಷಣೆ ಮತ್ತು ಪರಸ್ಪರರಲ್ಲಿ ಉಂಟಾದ ತಪ್ಪುಗ್ರಹಿಕೆಗಳಂದ ಇನ್ನೂ ಮುಂತಾ ಹಲವು ಕಾರಣಗಳಂದ ನಡೆಯುತ್ತಿದ್ದವು.[43] ಈ ಯುದ್ಧಗಳು ಭೂಮಿ ಮತ್ತು ಸಂಪತ್ತನ್ನು ವಶಪಡಿಸಿಕೊಳ್ಳಲು ಇದ್ದಂತಹ ಪ್ರಮುಖ ಮಾರ್ಗವಾಗಿದ್ದು ಇದರಲ್ಲಿ ಸೈನ್ಯದ ಪಾತ್ರ ಬಹಳ ಪ್ರಮುಖವಾದುದು. "ಸೈನ್ಯಾತ್ ವಿನಾ ನೈವ ರಾಜ್ಯಂ ನಧನಂ ನ ಪರಾಕ್ರಮಃ" ಅಂದರೆ ಸೈನ್ಯವಿಲ್ಲದೇ ರಾಜ್ಯವಿಲ್ಲ, ಧನವಿಲ್ಲ, ಪರಾಕ್ರಮವಿಲ್ಲ[44] ಎಂದು ಹಿಂದಿನ ಕಾಲದ ಅರಸರು ನಂಬಿದ್ದರು. ರಾಜನೊಬ್ಬನು ತಯುದ್ಧಕ್ಕೆ ಸಿದ್ಧವಾದರೆ ಸಾಕು ಅವನ ಉಪ್ಪನ್ನುಂಡು ಬದುಕಿದ ಸೈನಿಕರೂ ಯುದ್ಧಕ್ಕೆ ಸಿದ್ಧರಾಗುತ್ತಿದ್ದರು. ಯುದ್ಧದಲ್ಲಿ ಹೋರಾಡಿ ರಾಜನ ಉಪಕಾರವನ್ನು ತೀರಿಸುವುದು ತಮ್ಮ ಕರ್ತವ್ಯವೆಂದು ಅವರು ಭಾವಿಸಿದ್ದರಿಂದ ಇದನ್ನು ಕಾವ್ಯ ಮತ್ತು ಶಾಸನಗಳಲ್ಲಿ ಜೋಳಪಾಳ ಎಂದು ಕರೆದಿದ್ದಾರೆ. 'ಯುದ್ಧದ ಸಮಯದಲ್ಲಿ ರಾಜನು ಮಾಡಿದ ಉಪಕಾರಗಳನ್ನು ಸ್ಮರಿಸಿಕೊಳ್ಳದೇ ಪ್ರಾಣಭಯದಿಂದ ಓಡಿ ಹೋಗುವವರನ್ನು ಶಾಸನಗಳು ಜೋಳಗಳ್ಳರೆಂದು ಕರೆದು ಹಾಸ್ಯ ಮಾಡುತ್ತವೆ.[45] ಚಕ್ರವರ್ತಿಗಳ ಮತ್ತು ರಾಜರ ಭೂಮಿ ಮತ್ತು ಸಂಪತ್ತಿನ ವ್ಯಾಮೋಹದಿಂದಾಗಿ ನಡೆಯುತ್ತಿದ್ದ ಈ ಯುದ್ಧಗಳಲ್ಲಿ ಅಸಂಖ್ಯಾತ ಸೈನಿಕರು ಸಾವನ್ನಪ್ಪುತ್ತಿದ್ದರು. ಹೀಗೆ ವೀರ ಮರಣವನ್ನು ಹೊಂದಿದ ಸೈನಿಕರ ಸ್ಮರಣಾರ್ಥವಾಗಿ ನಿರ್ಮಿಸಿದ ವೀರಗಲ್ಲುಗಳೇ ಯುದ್ಧದ ವೀರಗಲ್ಲುಗಳು. ಈ ವೀರಗಲ್ಲುಗಳಲ್ಲಿ

ಶಾಸನವಿರಬಹುದು ಅಥವಾ ಇಲ್ಲದಿರಬಹುದು. ಆದರೆ ಈ ವೀರಗಲ್ಲುಗಳ ಶಿಲ್ಪಗಳು ಮರಣ ಹೊಂದಿದ ವ್ಯಕ್ತಿಯ ಬಗ್ಗೆ ಮಾಹಿತಿಯನ್ನು ನೀಡಿರುವುದಂತು ಸತ್ಯ. ಯುದ್ಧಗಳಿಗೆ ಸಂಬಂಧಿಸಿದಂತೆ ನಮ್ಮ ನಾಡಿನ ಉದ್ದಗಲಕ್ಕೂ ಸಾವಿರಾರು ಸಂಖ್ಯೆಯ ವೀರಗಲ್ಲು ಶಾಸನಗಳು ಕಂಡು ಬರುತ್ತವೆ. ಅದೇ ರೀತಿಯಾಗಿ ಹಾಸನ ತಾಲೂಕಿನಲ್ಲೂ ಸಹ ಹೊಯ್ಸಳರ ಆಳ್ವಿಕೆಯನ್ನು ಪ್ರತಿನಿಧಿಸುವ ಹಲವು ವೀರಗಲ್ಲು ಶಾಸನಗಳು ಕಂಡು ಬಂದಿರುತ್ತವೆ. ಬೈಲಹಳ್ಳಿ ಗ್ರಾಮದ 13ನೇ ಶತಮಾನದ ವೀರಗಲ್ಲು ಶಾಸನವು[46] ಎರಡನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ದೇವನಮಳಲೆ ಬೆಳುತಾಳಕ ಕೊಯಳಲ್ಲಿ ನಡೆದ ಕಾಳಗದಲ್ಲಿ ಬೈಲಹಳ್ಳಿಯ ಅಯಿತಗೌಡನ ಮೊಮ್ಮಗ, ಕಾಚಕನ ಮಗ ಬಾಚಯನು ಮರಣ ಹೊಂದಿದ ಅಂಶವನ್ನು ಉಲ್ಲೇಖಿಸುತ್ತದೆ. ಇದರ ಪಕ್ಕದಲ್ಲೇ ಇರುವ ಮತ್ತೊಂದು ವೀರಗಲ್ಲು ಶಾಸನವು[47] (ಚಿ.ಸಂ. 264) ಮನುಮಹಾಮಂಡಳೇಶ್ವರ ಚೊಕ್ಕ ಬಿಟ್ಟಿದೇವನ ಕಾಳಗ ಮತ್ತು ದಂಡನಾಯಕ ಬೊಪ್ಪದೇವನ ಹೆಸರನ್ನು ಉಲ್ಲೇಖಿಸಿದ್ದು ಮುಂದಿನ ಶಾಸನ ಪಠ್ಯ ನಷ್ಟವಾಗಿದೆ. ದೊಡ್ಡವಳ್ಳಿಯಲ್ಲಿ ಕಂಡು ಬಂದಿರುವ ಕ್ರಿ.ಶ.1126-27ರ ವೀರಗಲ್ಲು ಶಾಸನವು[48] ಮನುಮಹಾಮಂಡಳೇಶ್ವರ ಬಿಟ್ಟಿದೇವ ಮತ್ತು ಚಿಕ್ಕಬಿಟ್ಟಿದೇವ ಎಂಬ ಹೆಸರುಗಳನ್ನು ಉಲ್ಲೇಖಿಸಿದ್ದು ಬೊಪ್ಪದೇವನ ಕಾಳಗದಲ್ಲಿ ಜಯರಾಹು ಎಂಬಾತನು ಮರಣ ಹೊಂದಿದ ಅಂಶವನ್ನು ತಿಳಿಸುತ್ತದೆ. (ಚಿ.ಸಂ. 265) ಈ ಶಾಸನದಲ್ಲಿ ಉಲ್ಲೇಖವಾಗಿರುವ ಚಿಕ್ಕಬಿಟ್ಟಿದೇವ ಎಂಬ ಹೆಸರಿಗೆ ಸಂಬಂಧಿಸಿದಂತೆ ನೋಡುವುದಾದರೆ ಈತನು (ಚಿಕ್ಕಬಿಟ್ಟಿದೇವ) ಮರಿಯಾನೆ ದಂಡನಾಯಕನ ಮೊಮ್ಮಗನಾಗಿದ್ದು, ಈತನನ್ನು ಅರಸ ವಿಷ್ಣುವರ್ಧನನು ಬಹಳ ಪ್ರೀತಿ ವಿಶ್ವಾಸದಿಂದ ಸ್ವಂತ ಮಗನಂತೆ ಆಧರಿಸುತ್ತಿದ್ದನೆಂದು ತಿಳಿದು ಬರುತ್ತದೆ.[49] ಉಗನೆ ಗ್ರಾಮದಲ್ಲಿ ಕಂಡು ಬಂದಿರುವ ವೀರಗಲ್ಲು ಶಾಸನವು[50] ಎರಡನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಬಯಲಹಳ್ಳಿಯ ಗಡಿಯಲ್ಲಿ ಮಾದಗೌಂಡ ಎಂಬಾತನು ಮರಣ ಹೊಂದಿದ ಅಂಶವನ್ನು ತಿಳಿಸುತ್ತದೆ. (ಚಿ.ಸಂ. 266)ಸಾಲಗಾಮೆ ಗ್ರಾಮದ ವೀರಗಲ್ಲು ಶಾಸನವು[51] ಹೊಯ್ಸಳರ ಬಿರುದುಗಳು ಮತ್ತು ಎರಡನೇ ನರಸಿಂಹನ ಆಳ್ವಿಕೆಯನ್ನು ಉಲ್ಲೇಖಿಸಿದ್ದು ಮುಂದಿನ ಶಾಸನ ಪಠ್ಯ ನಷ್ಟವಾಗಿದೆ. ಸೀಗೆ ಗ್ರಾಮದ ಕ್ರಿ.ಶ.12-13ನೇ ಶತಮಾನದ ವೀರಗಲ್ಲು ಶಾಸನವು[52] ವೀರನೊಬ್ಬನು ಮರಣ ಹೊಂದಿದ ವಿಚಾರವನ್ನು ತಿಳಿಸುತ್ತದೆಯಾದರೂ ಈತನ ಹೆಸರು ನಷ್ಟವಾಗಿದೆ. ಆದರೆ ಈತನ ನೆನಪಿನಾರ್ಥವಾಗಿ ಮಾಳಯ ಸೇನುಬೋವ ಮಾಕರಸ ಮತ್ತು ವೀರನ ಪತ್ನಿ ಮಾಕಬ್ಬೆಯು ವೀರಗಲ್ಲನ್ನು ನಿಲ್ಲಿಸಿದರೆಂದು ತಿಳಿಸುತ್ತದೆ. ಇದೇ ಗ್ರಾಮದ ಕ್ರಿ.ಶ.1243-44ರ ವೀರಗಲ್ಲು ಶಾಸನವು[53] ಪ್ರತಾಪ ಚಕ್ರವರ್ತಿ ಸೋಮೇಶ್ವರನ ಆಳ್ವಿಕೆಯನ್ನುಮಾತ್ರ ಉಲ್ಲೇಖಿಸಿದ್ದು, ಮುಂದಿನ ಪಠ್ಯ ನಷ್ಟವಾಗಿದೆ. ನಿಟ್ಟೂರು ಗ್ರಾಮದ ಕ್ರಿ.ಶ.1221ರ ಶಾಸನವು[54] ಎರಡನೇ

ನರಸಿಂಹನ ಆಳ್ವಕೆಯ ಕಾಲದಲ್ಲಿ ವಜ್ರದೇವನ ಮೇಲೆ ಮಾಧವ ದಣ್ಣಾಯಕನು ಕನರಿಯಲ್ಲಿ ಕಾಳಗ ನಡೆಸಿದಾಗ ನಿಟ್ಟೂರಿನ ಮಾಚಗೌಡನ ಮಗ ಬೊಮ್ಮೆಯನಯಕನು ಹೋರಾಡಿ ಮರಣ ಹೊಂದಿದ ಸಂಗತಿಯನ್ನು ಉಲ್ಲೇಖಿಸುತ್ತದೆ. (ಚಿ.ಸಂ. 267)

ಇದೇ ಗ್ರಾಮದ ಮತ್ತೊಂದು ವೀರಗಲ್ಲು ಶಾಸನವು[55] ಒಂದನೇ ನರಸಿಂಹನ ಆಳ್ವಕೆಯ ಕಾಲದಲ್ಲಿ ಚಾಳುಕ್ಯ ವಿಕ್ರಮ ಕಾಲದ 69ನೆಯ ಕ್ರೋಧನ ಸಂವತ್ಸರದಲ್ಲಿ ಚಿಕ್ಕಿಸೆಟ್ಟಿಯ ಮಗ ಹೋರಾಡಿ ಮಡಿದ ವಿಚಾರವನ್ನು ತಿಳಸುತ್ತದೆ. ಆದರೆ ಈ ವೀರಗಲ್ಲು ಶಾಸನದಲ್ಲಿ ವೀರನ ಹೆಸರು ಮೂಡಿ ಬಂದಿರುವುದಿಲ್ಲ. ಕುದುರೆಗುಂಡಿಯ ಗ್ರಾಮದ ವೀರಗಲ್ಲು ಶಾಸನವೊಂದು[56] ವೀರನರಸಿಂಹನು ದೋರಸಮುದ್ರದಿಂದ ಆಳ್ವಕೆ ನಡೆಸುತ್ತಿರುವಾಗ ವೀರನೊಬ್ಬನು ಕುದುರೆಗುಂಡಿಯಲ್ಲಿ ಮರಣ ಹೊಂದಿದ ವಿಷಯವನ್ನು ತಿಳಸುತ್ತದೆಯಾದರೂ ಶಾಸನವು ಅಸ್ಪಷ್ಟವಾಗಿದೆ. (ಚಿ.ಸಂ. 268) ಜೊತೆಗೆ ಈ ಶಾಸನದಲ್ಲಿ ವೀರನರಸಿಂಹನ ಆಳ್ವಕೆಯಲ್ಲಿ ಎಂದು ಉಲ್ಲೇಖಿಸಿರುವುದರಿಂದ ಹೊಯ್ಸಳರಲ್ಲಿ ಮೂರು ಜನ ನರಸಿಂಹರು ಆಳ್ವಕೆ ನಡೆಸಿರುತ್ತಾರೆ. ಆದ್ದರಿಂದ ಈ ಶಾಸನವನ್ನು ಯರ ಕಾಲಾವಧಿಗೆ ಅನ್ವಯಿಸಬೇಕೆಂಬುದರಲ್ಲಿ ತೊಡಕುಗಳವೆ. ಹೊನ್ನಾವರ ಗ್ರಾಮದ ವೀರಗಲ್ಲು ಶಾಸನವು[57] ಹೊಯ್ಸಳ ರಾಜನೊಬ್ಬನ ಆಳ್ವಕೆಯನ್ನು ಉಲ್ಲೇಖಿಸಿದ್ದು ದುರಾದೃಷ್ಟವಶಾತ್ ಈ ಶಾಸನ ಪಠ್ಯದ ಸಾಲುಗಳು ನಶೀಸಿ ಹೋಗಿವೆ. ಕಬ್ಬಿನಹಳ್ಳಿ ಗ್ರಾಮದ ಕ್ರಿ.ಶ.1173ರ ವೀರಗಲ್ಲು ಶಾಸನವು[58] ಒಂದನೇ ನರಸಿಂಹನ ಆಳ್ವಕೆಯ ಕಾಲದಲ್ಲಿ ಮನುಮಹಾಸಾಮಂತ ಕಬ್ಬಿನಕೆರೆಯ ಹಿರಿಯತಮನ ಮಗ ಮದೆಯನು ಅತಿಯಾಗೆ ಯಡಪ್ಪನ ಕಾಳಗದಲ್ಲಿ ಹೋರಾಡಿ ಸ್ವರ್ಗಸ್ತನಾದ ಬಗ್ಗೆ ಉಲ್ಲೇಖಿಸುತ್ತದೆ. ಇದೇ ಗ್ರಾಮದ ಮತ್ತೊಂದು ವೀರಗಲ್ಲು ಶಾಸನವು[59] ವಿಜಯ ಸಂವತ್ಸರದ ಕಲವನ್ನು ಉಲ್ಲೇಖಿಸಿರುವುದರ ಜೊತೆಗೆ ಹೊಯ್ಸಳರ ಬಿರುಗಳನ್ನು ಹೆಸರಿಸಿದ್ದು ಮುಂದಿನ ಶಾಸನ ಪಠ್ಯ ನಶಿಸಿ ಹೋಗಿರುತ್ತದೆ. ಇದೇ ಸ್ಥಳದಲ್ಲಿರುವ ಮತ್ತೊಂದು ವೀರಗಲ್ಲು ಶಾಸನವು[60] ಕ್ರಿ.ಶ.1119ರಲ್ಲಿ ಹೊಯ್ಸಳ ಬಿಟ್ಟಿದೇವನು ಆಳ್ವಕೆ ಮಾಡುತ್ತಿರುವಾಗ ಕಬ್ಬಿನಕೆರೆಯ ಮೇಲೆ ಕನ್ನಮಹಾರಾಜನು ದಾಳೀ ಮಾಡಿದಾಗ ಏಚಗಾವುಂಡನ ಅಳಯ ಮಂಜಗಾವುಂಡನು ಮರಣ ಹೊಂದುತ್ತಾನೆ. ನಂತರ ಕ್ರಿ.ಶ.1178ರಲ್ಲಿ ವೀರಬಲ್ಲಾಳನ ಆಳ್ವಕೆಯ ಕಾಲದಲ್ಲಿ ಮಲ್ಲಗಾವುಂಡ, ಮಾರಗಾವುಂಡ ಮತ್ತು ಏಚಣ ಈ ಮೂವರು ಸೇರಿ ವೀರಗಲ್ಲನ್ನು ನಿಲ್ಲಿಸಿದರೆಂದು ಶಾಸನ ಪಾಠದಿಂದ ತಿಳದು ಬರುತ್ತದೆ. ಕಬ್ಬಿನಹಳ್ಳಿ ಗ್ರಾಮದ ಮತ್ತೊಂದು ವೀರಗಲ್ಲು ಶಾಸನವು[61] ಮಸಣಯ್ಯ ಎಂಬಾತನು ಮರಣ ಹೊಂದಿದ ಅಂಶವನ್ನು ತಿಳಸಿದ್ದು, ಹೊಯ್ಸಳರ ಬಿರುದಾದ ಮಹಾಮಂಡಲೇಶ್ವರ, ತ್ರಿಭೂವನಮಲ್ಲ ವೀರ ಎಂದು ಹೆಸರಿಸಿದ್ದು ಮುಂದಿನ ಸಾಲಿನ ಪಠ್ಯ ನಷ್ಟವಾಗಿರುತ್ತದೆ. ನಾಲ್ಕನೇ ಸಾಲಿನಲ್ಲಿ ವಿಕ್ರಮಾದಿತ್ಯನ ಹೆಸರು ಮೂಡಿ ಬಂದಿರುವುದರಿಂದ, ಹೊಯ್ಸಳ ವಿಷ್ಣುವರ್ಧನನು

ಎದುರಿಸಿದ ಕಲ್ಯಾಣಿ ಚಾಳುಕ್ಯ ದೊರೆ ಆರನೇ ವಿಕ್ರಮಾದಿತ್ಯನೇ ಈ ಶಾಸನದಲ್ಲಿ ಹೆಸರಿಸಿರುವ ವಿಕ್ರಮಾದಿತ್ಯನಿರಬಹುದು. ಕ್ರಿ.ಶ.1276ರ ದುದ್ದ ಗ್ರಾಮದ ವೀರಗಲ್ಲು ಶಾಸನವು[62] ಮೂರನೇ ನರಸಿಂಹನ ಆಳ್ವಿಕೆಯ ಕಾಲಘಟ್ಟದಲ್ಲಿ ಸೇವುಣರಾಯನ ಪರವಾಗಿ ಬಂದಂತಹ ಸಾಳುವ ತಿಕ್ಕಮನ ವಿರುದ್ಧದ ಯುದ್ಧದಲ್ಲಿ ದುದ್ದದ ಹಿರಿಯ ಒಇಚೆಯನಯಕನ ಮಗ ಅಂಕಣನು ಮರಣ ಹೊಂದಿದಾಗ ಈತನ ಅಣ್ಣ ಸಿತಗರಗಂಡ ದೇಕಯನು ವೀರಗಲ್ಲನ್ನು ನಿಲ್ಲಿಸಿದನೆಂದು ಪ್ರಸ್ತಾಪಿಸುತ್ತದೆ. (ಚಿ.ಸಂ. 269) ಇದೇ ಸ್ಥಳದಲ್ಲಿರುವ ಮತ್ತೊಂದು ವೀರಗಲ್ಲು ಶಾಸನವು[63] ಮೂರನೇ ಬಲ್ಲಾಳನ ಆಳ್ವಿಕೆಯ ಕಾಲದ ಕ್ರಿ.ಶ.131ರಲ್ಲಿ ತುರುಕರು (ಮುಸ್ಲೀಮರು) ದೋರಸಮುದ್ರಕ್ಕೆ ದಾಳ ಮಾಡಿದಾಗ ದುದ್ದದ ನಡೆಗೋಟೆಯ ಮಾಚಯನಾಯಕನ ಮಗ ಬಯಿಚಯ ನಾಯಕನು ವೀರಾವೇಷದಿಂದ ಹೋರಾಡಿ ಮಡಿದಾಗ ಈತನ ಮಗ ಮಾಚಯನು ವೀರಗಲ್ಲನ್ನು ಮಾಡಿಸಿದನೆಂದು ಶಾಸನ ಪಠ್ಯದಿಂದ ತಿಳದು ಬರುತ್ತದೆ. ಈ ಶಾಸನವನ್ನು ಕೆತ್ತಿದಾಚಾರಿ ಇಟಕೆಯ ನಯಕನ ಮಗ ನಂಗೋಜ ಎಂಬುದು ಈ ಶಾಸನದ ಕೊನೆಯ ಸಾಳನಿಂದ ತಿಳದು ಬರುತ್ತದೆ. ದುದ್ದ ಗ್ರಾಮದ ಮತ್ತೊಂದು ವೀರಗಲ್ಲು ಶಾಸನವು64 ಮೂರನೇ ಬಲ್ಲಾಳನ ಆಳ್ವಕೆಯ ಕಲದಲ್ಲಿ ತುರುಕನು (ಮುಲ್ಲೀಮರು) ದೋರಸಮುದ್ರಕ್ಕೆ ದಾಳ ಮಾಡಿದಾಗ ದುದ್ದದ ಬಯಿಚಯನಾಯಕ ಮರಣ ಹೊಂದಿದ ವಿಚಾರವನ್ನು ತಿಳಸುತ್ತದೆ. (ಚಿ.ಸಂ. 270) ಹೊನ್ನಮ್ಮನಹಳ್ಳ ಗ್ರಾಮದ ಕ್ರಿ.ಶ.12ನೇ ಶತಮಾನಕ್ಕೆ ಹೋಲಿಕೆಯಾಗುವ ವೀರಗಲ್ಲನ್ನು ನಿರ್ಮಿಸಿದ ಉಲ್ಲೇಖ ಕಂಡು ಬರುತ್ತದೆ. ಮಲ್ಲಿಗೆವಾಳು ಗ್ರಾಮದ ಕ್ರಿ.ಶ.1234-35ರ ವೀರಗಲ್ಲು ಶಾಸನವು[67] ಎರಡನೇ ನರಸಿಂಹನ ಆಳ್ವಿಕೆಯ ಕಲದ ಜಯಸಂವತ್ಸರದಲ್ಲಿ ವೀರನೊಬ್ಬನ ಮರಣದ ಮಾಹಿತಿ ನೀಡುತ್ತದೆ. ಆದರೆ ಈ ವೀರಗಲ್ಲು ಶಾಸನದ ಮುಂದಿನ ಸಾಲುಗಳು ನಶಿಸಿ ಹೋಗಿವೆ. ಇದರ ಪಕ್ಕದಲ್ಲೇ ಇರುವ ಮತ್ತೊಂದು ವೀರಗಲ್ಲು ಶಾಸನವು[68] ಎರಡನೇ ಬಲ್ಲಾಳನ ಬಿರುದುಗಳು ಮತ್ತು ಈಗನ ಹಿರಿಯ ಅರಸಿ ಬೊಮ್ಮಲದೇವಿಯ ಹೆಸರನ್ನು ಉಲ್ಲೇಖಿಸಿದ್ದು, ಶಾಸನದ ಮುಂದಿನ ಪಠ್ಯ ಕಂಡು ಬಂದಿರುವುದಿಲ್ಲ. ಇದರ ಪಕ್ಕದಲ್ಲೇ ಇರುವ ಇನ್ನೊಂದು ಶಾಸನವು[69] ಅದುರ ಕಮಣ ಎಂಬ ವ್ಯಕ್ತಿಯನ್ನು ಹೆಸರಿಸಿದ್ದು ಮುಂದಿನ ಪಠ್ಯ ನಶಿಸಿಹೋಗಿರುತ್ತದೆ. ಮಲ್ಲಿಗೆವಾಳು ಗ್ರಾಮದ ಈ ಮೂರು ಶಾಸನಗಳು ಕೂಡ ಭಾಗಶಃ ಭೂಮಿಯಲ್ಲಿ ಮುಚ್ಚಿಹೋಗಿದ್ದು ಮೇಲ್ಭಾಗದ ಪಟ್ಟಿಕೆ ಮತ್ತು ಇದರ ಕೆಳಗಿನ ಶಾಸನ ಸಾಲುಗಳು ಮಾತ್ರ ಕಂಡು ಬರುತ್ತವೆ. ಹೀಗೆ ಹಾಸನ ತಾಲೂಕಿನಲ್ಲಿ ಕಂಡು ಬಂದಿರುವ ಹೊಯ್ಸಳರ ಕಾಲದ ವೀರಗಲ್ಲು ಶಾಸನಗಳಲ್ಲಿ ಇವರ ರಾಜಕೀಯ ಆಳ್ವಿಕೆಯನ್ನು ಪ್ರತಿಬಿಂಬಿಸುವ ಅತೀ ಹೆಚ್ಚು ವೀರಗಲ್ಲು ಶಾಸನಗಳು ಯುದ್ಧಗಳಗೆ

ಸಂಬಂಧಿಸಿವೆ ಎಂಬುದು ಇದುವರೆಗೂ ಗಮನಿಸಿದ ಅಮಶಗಳ ಆಧಾರದಿಂದ ತಿಳಿದು ಬರುತ್ತದೆ.

**೮. ಆತ್ಮಬಲಿಯ ವೀರಗಲ್ಲುಗಳು**: ಪ್ರಾಚೀನ ಕರ್ನಾಟಕದಲ್ಲಿ ವ್ಯಕ್ತಿಗಳು ತಮ್ಮ ಪ್ರಾಣವನ್ನು ತಾವೇ ತೆಗೆದುಕೊಳ್ಳುವ ಕೆಲವು ಪದ್ಧತಿಗಳಿದ್ದವು. ಇವುಗಳನ್ನು ಆತ್ಮಬಲಿದಾನ (ದೇಹತ್ಯಾಗ) ಎಂದು ಕರೆಯಲಾಗುತ್ತದೆ. ಆತ್ಮಬಲಿದಾನ ಮಾಡಿಕೊಳ್ಳುವವರು ಉತ್ಕಟವಾದ ಮೋಕ್ಷಾಪೇಕ್ಷೆಯನ್ನು, ಅಸೀಮವಾದ ಧೈರ್ಯ, ನಿಷ್ಠೆ ಮತ್ತು ಸ್ವಾಮಿಭಕ್ತಿಯನ್ನು ಉಳ್ಳವರಾಗಿರುತ್ತಿದ್ದರು. ಇವರು ಮನಸ್ಸಿನಿಂದ ಹಿಂಸಾ ಮನೋಭಾವವನ್ನೂ, ದ್ವೇಷ ಭಾವವನ್ನು ತೊಡೆದು ಹಾಕಿ ಸರ್ವ ಜೀವಿಗಳ ವಿಷಯದಲ್ಲಿಯೂ ಕ್ಷಮೆಯನ್ನು ತಾಳಿ, ಜೀವನದ ಅಶಾಶ್ವತೆಯನ್ನೂ, ಅರ್ಹಂತ ಮೊದಲಾದವರ ಸದ್ಗುಣಗಳನ್ನೂ, ಅವರು ಪಡೆದ ಸದ್ಗತಿಯನ್ನೂ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದರು.[70] ಆತ್ಮಬಲಿಯು ಭಾರತೀಯ ಸಮಾಜದಲ್ಲಿ ಹೆಚ್ಚು ಧಾರ್ಮಿಕ ಕಾರಣಗಳಿಗೋಸ್ಕರ ನಡೆಯುತ್ತಿದ್ದವೆಂದು ತಿಳಿದು ಬರುತ್ತದೆಯಾದರೂ, ಕೆಲವು ಸಂದರ್ಭಗಳಲ್ಲಿ ತನ್ನನ್ನು ಪೋಷಿಸಿದ ಒಡೆಯನಿಗೆ ಒಳಿತಾದರೆ ಅಥವಾ ಒಳಿತಾಗಲಿ ಎಂಬ ಭಾವನೆಯಿಂದ ಸ್ವಾಮಿನಿಷ್ಠೆಯನ್ನು ವ್ಯಕ್ತಪಡಿಸಿ ಆತ್ಮಬಲಿದಾನವನ್ನು ಮಾಡಿಕೊಳ್ಳುತ್ತಿದ್ದರು. ಹಾಸನ ತಾಲೂಕಿನ ದುದ್ದ ಗ್ರಾಮದ ಕ್ರಿ.ಶ.1173ರ ಶಾಸನವು[71] ವೀರ ನರಸಿಂಹನ ಆಳ್ವಿಕೆಯ ಕಾಲದಲ್ಲಿ ದುದ್ದ ಚಟ್ಟಯನಯಕನ ಮೊಮ್ಮಗ ಕೂಸಕಾಳಿಯನು ಸ್ವಾಮಿ ಕಾರ್ಯಕ್ಕಾಗಿ ಆತ್ಮಬಲಿಯನ್ನು ಮಾಡಿಕೊಂಡಾಗ ಈತನ ತಾಯಿ ಚಟ್ಟವ್ವೆಯು ಮಗನಿಗೋಸ್ಕರ ವೀರಗಲ್ಲನ್ನು ನಿರ್ಮಿಸಿದ ಮಾಹಿತಿಯನ್ನು ನೀಡುತ್ತದೆ. ತನ್ನ ಅರಸನಿಗೋಸ್ಕರ ಸದಾ ಎಂತಹ ತ್ಯಾಗಕ್ಕೂ ಸಿದ್ಧವಾಗಿರುತ್ತಿದ್ದ ಒಂದು ಸೈನ್ಯ ಪಡೆಯು ತನ್ನ ಅರಸ ಮಡಿದಾಗ ಸಾವಿರಕ್ಕೂ ಸಂಖ್ಯೆಯಲ್ಲಿ ಅತ್ಮಬಲಿದಾನ ಮಡಿಕೊಂಡ ಘಟನೆ ಇತಿಹಾಸದಲ್ಲಿ ದಾಖಲಾಗಿದೆ. ಹೊಯ್ಸಳ ಎರಡನೇ ಬಲ್ಲಾಳನಿಗೆ ಗರುಡರೆಂಬ ಸೈನ್ಯ ಪಡೆಯಿದ್ದು ಇದು ಅರಸನಿಗೋಸ್ಕರ ಸದಾ ಸ್ವಾಮಿನಿಷ್ಠೆಯನ್ನು ಹೊಂದಿರುವುದರ ಜೊತೆಗೆ ಎಂತಹ ತ್ಯಾಗಕ್ಕಾದರೂ ಸಿದ್ಧವಿರುತ್ತಿತ್ತು. ಈ ಗರುಡ ಪಡೆಯ ಮುಖ್ಯಸ್ಥ ವೀರಬಲ್ಲಾಳನ ನೆಚ್ಚಿನ ಮಂತ್ರಿ ಕುವರಲಕ್ಷ್ಮನಾಗಿದ್ದನು. ಎರಡನೇ ಬಲ್ಲಾಳನು ಕ್ರಿ.ಶ.1220ರಲ್ಲಿ ಮಡಿದಾಗ ಗರುಡ ಕುವರ ಲಕ್ಷ್ಮ ಈತನ ಪತ್ನಿ ಸುಗ್ಗಲಾದೇವಿ ಇನ್ನೂ ಮುಂತಾದ ಸಾವಿರ ಜನ ಗರುಡರು ಸಾಮೂಹಿಕವಾಗಿ ಆತ್ಮಬಲಿದಾನವನ್ನು ಮಾಡಿಕೊಂಡ ರೆಂಬುದು ಐತಿಹಾಸಿಕ ಆಧಾರಗಳಿಂದ ತಿಳಿದು ಬರುತ್ತದೆ.[72, 73]

**೯. ಬೇಟೆಯ ವೀರಗಲ್ಲುಗಳು**: ಪ್ರಾಚೀನ ಕಾಲದಿಂದಲೂ ಪ್ರಾಣಿ ಬೇಟೆಯಾಡುವ ಪದ್ಧತಿಯನ್ನು ಮಾನವನು ರೂಡಿಸಿಕೊಂಡು ಬಂದಿದ್ದಾನೆ. ಕೆವಲರು ಬೇಟೆಯಾಡುವುದನ್ನು ತಮ್ಮ ಜೀವನ ನಿರ್ವಹಣೆ ಅಥವಾ ಸ್ವರಕ್ಷಣೆ ಹಾಗೂ ಆಹಾರಕ್ಕಾಗಿ ರೂಢಿಸಿಕೊಂಡಿದ್ದರೆ, ಮತ್ತೆ ಕೆಲವರು

ವಿಹಾರಾರ್ಥವಾಗಿ ಮೋಜಿಗಾಗಿ ಬೇಟೆಯಾಡುತ್ತಿದ್ದರು.[74] ಕೆಲವು ಪ್ರಾಣಿಗಳು ಊರಿಗೆ ನುಗ್ಗಿ ಜನರಿಗೆ ಮತ್ತು ಜಾನುವಾರುಗಳಿಗೆ ತೊಂದರೆ ಕೊಡುವುದನ್ನು ತಡೆಯಲು ಆ ಗ್ರಾಮದ ವೀರರು ಅಂತಹ ಪ್ರಾಣಿಗಳನ್ನು ಬೇಟೆಯಾಡಿ ಕೊಂದು ಹಾಕಿದಾಗ ಅಥವಾ ಕೊಲ್ಲಲು ಹೋಗಿ ತಾವೇ ಮರಣವನ್ನಪ್ಪಿದಾಗ ಇವರ ಸ್ಮರಣಾರ್ಥವಾಗಿ ನಿರ್ಮಿಸಿದ ವೀರಗಲ್ಲುಗಳನ್ನು ಬೇಟೆಯ ವೀರಗಲ್ಲುಗಳು ಎಂದು ಕರೆಯಲಾಗಿದೆ. ಕರ್ನಾಟಕದ ವೀರಗಲ್ಲುಗಳನ್ನು ಪರಿಶೀಲಿಸಿದಾಗ ಮುಖ್ಯವಾಗಿ ಕಾಡು ಹಂದಿ ಮತ್ತು ಹುಲಿಯೊಡನೆ ಹೋರಾಡಿ ಮಡಿದ ವೀರರ ವೀರಗಲ್ಲುಗಳು ಕಂಡು ಬಂದಿದ್ದು ಇವು ಸ್ವರಕ್ಷಣೆಗಾಗಿ ಮಾಡಿದ ಬೇಟೆಗಳು.

**10. ನೀರಿನಲ್ಲಿ ಅಥವಾ ನೌಕಾಯುದ್ಧದಲ್ಲಿ ಮಡಿದವರ ವೀರಗಲ್ಲುಗಳು:** ಕರ್ನಾಟಕವನ್ನು ಆಳಿದ ರಾಜರಲ್ಲಿ ಬಾದಾಮಿ ಚಾಳುಕ್ಯರು ನೌಕಾಸೇನೆಯನ್ನು ಕಟ್ಟಿದ್ದರು. ಮಂಗಳೇಶ, ಎರಡನೆಯ ಪುಲಿಕೇಶಿ, ಎರಡನೆಯ ಕೀರ್ತಿವರ್ಮರು ತಮ್ಮ ನೌಕೆಗಳ ಸಹಾಯದಿಂದ ಅನೇಖ ದ್ವೀಪಗಳನ್ನು ಗೆದ್ದಂತೆ ಶಾಸನಗಳಿಂದ ತಿಳಿದು ಬಂದರೂ,[75] ಈ ನೌಕಾ ಯುದ್ಧಗಳಲ್ಲಿ ಮಡಿದವರ ನೆನಪಾರ್ಥವಾಗಿ ವೀರಗಲ್ಲುಗಳನ್ನು ನಿರ್ಮಿಸಿರುವುದು ಕನ್ನಡನಾಡಿನಲ್ಲಿ ಕಂಡು ಬಂದಿರುವುದಿಲ್ಲ. ಆದರೆ ಜನರನ್ನು ಒಂದು ದಡದಿಂದ ಮತ್ತೊಂದು ದಡಕ್ಕೆ ಸಾಗಿಸುವಲ್ಲಿ ತಮ್ಮ ಸಾಹಸವನ್ನು ತೋರಿಸಿ ನೀರಿನಲ್ಲಿ ಮಡಿದಿರಬಹುದಾದ ವೀರರ ಎರಡು ವೀರಗಲ್ಲುಗಳು ದೊರೆಯುತ್ತವೆ.[76] ಆದರೆ ಅವುಗಳ ಮೇಲೆ ಶಾಸನ ಇಲ್ಲವಾದ್ದರಿಂದ ಆ ಬಗ್ಗೆ ಖಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ. ಈ ವೀರಗಲ್ಲುಗಳು ಹಂಪೆಯಿಂದ ತುಂಗಭದ್ರಾ ನದಿಯನ್ನು ದಾಟಿ ಆನೆಗೊಂದಿಗೆ ಹೋಗುವ ದಾರಿಯಲ್ಲಿದ್ದು ಇವುಗಳಲ್ಲಿ ವೀರರು ತಮ್ಮ ಹುಟ್ಟುಗಳನ್ನು ಕೈಯಲ್ಲಿ ಹಿಡಿದಿರುವಂತೆ ಶಿಲ್ಪವನ್ನು ಕೆತ್ತಲಾಗಿದೆ. ಈ ರೀತಿಯ ವೀರಗಲ್ಲುಗಳು ಅಪರೂಪವೆಂದೇ ಹೇಳಬಹುದಾಗಿದೆ.

ಹಾಸನ ತಾಲೂಕು ಹೊಯ್ಸಳರ ಅರಸರ ನೇರ ಆಳ್ವಿಕೆಗೆ ಒಳಪಟ್ಟಿದ್ದು ಇವರ ರಾಜಧಾನಿಯಾದ ದೋರಸಮುದ್ರಕ್ಕೆ ಸನಿಹದಲ್ಲೇ ಇದ್ದುದರಿಂದ ಒಂದು ಪ್ರಮುಖ ರಾಜಕೀಯ ಕ್ಷೇತ್ರವಾಗಿತ್ತು. ಇಲ್ಲಿ ಗೋವುಗಳನ್ನು ರಕ್ಷಿಸಲು, ಮಹಿಳೆಯರ ಮಾನ ಕಾಪಾಡಲು, ಗಡಿಯನ್ನು ರಕ್ಷಿಸಲು, ಶತ್ರು ರಾಜರಿಂದ ರಾಜ್ಯವನ್ನು ರಕ್ಷಿಸಲು, ಕೋಟೆಗಳನ್ನು ವಶಪಡಿಸಿಕೊಳ್ಳಲು, ತನ್ನ ಅರಸನಿಗೆ ಸ್ವಾಮಿ ನಿಷ್ಠೆಯನ್ನು ತೋರ್ಪಡಿಸಲು ಇನ್ನೂ ಮುಂತಾದ ಕಾರಣಗಳಿಗೆ ಅನೇಕ ವೀರರು ತಮ್ಮ ಪ್ರಾಣವನ್ನು ಅರ್ಪಿಸಿರುವುದರಿಂದ ಇವರ ನೆನಪಾರ್ಥವಾಗಿ ಸಾಕಷ್ಟು ಸಂಖ್ಯೆಯ ವೀರಗಲ್ಲುಗಳನ್ನು ನಿರ್ಮಿಸಿರುವುದನ್ನು ನಾವು ಕಾಣಬಹುದು. ಈ ವೀರಗಲ್ಲುಗಳಿಂದ ಅಂದಿನ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ತಿಳಿಯಬಹುದಾಗಿದೆ. ಪ್ರಸ್ತುತ ಹಾಸನ ತಾಲೂಕಿನಲ್ಲಿ ಕಂಡು ಬಂದಿರುವ ವೀರಗಲ್ಲು,

ಸ್ಮಾರಕಗಳು ಕೆಲವು ಗ್ರಾಮಗಳಲ್ಲಿ ದೇವಾಲಯಗಳ ಪಕ್ಕದಲ್ಲಿ, ಗ್ರಾಮದ ಮಧ್ಯಭಾಗದಲ್ಲಿ ಸುಸ್ಥಿತಿಯಲ್ಲಿದ್ದರೆ, ಕೆಲವು ಗ್ರಾಮಗಳಲ್ಲಿ ಜನರ ಪ್ರಜ್ಞೆಗೆ ಬಾರದೇ ಅನಾಥವಾಗಿ ಬಿದ್ದಿರುವ ಮೂಲಕ ದುಸ್ಥಿತಿಯಲ್ಲಿವೆ. ಕೆಲವು ದೇವಾಲಯಗಳಲ್ಲಿ ಈ ವೀರಗಲ್ಲುಗಳನ್ನು ಥಾವಣಿಗೆ ಮತ್ತು ಗೋಡೆಗಳಿಗೆ ಅಳವಡಿಸಿದ್ದು ಅಕ್ಷರಗಳು ಕಾಣದಂತೆ ಸುಣ್ಣ ಬಣ್ಣವನ್ನು ಬಳಿದಿದ್ದಾರೆ. ಒಂದು ಸಂಸ್ಕೃತಿಯ ಉದಾತ್ತ ಅಂಶಗಳನ್ನು ಒಳಗೊಂಡಿರುವ ಈ ವೀರಗಲ್ಲು ಸ್ಮಾರಕ ಶಿಲ್ಪಗಳು ಮುಂದಿನ ಪೀಳಿಗೆಗೆ ಮತ್ತು ಅಧ್ಯಯನಾಸಕ್ತರಿಗೆ ಅವಶ್ಯಕವಾಗಿದ್ದು ಇವುಗಳ ಸಂರಕ್ಷಣೆಯ ಅಗತ್ಯತೆಯಿದೆ ಎನ್ನಬಹುದಾಗಿದೆ.

## ಅಡಿ ಟಿಪ್ಪಣಿಗಳು

1. ಚಿದಾನಂದಮೂರ್ತಿ, ಎಂ., ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ. 1
2. ಶೇಷಶಾಸ್ತ್ರಿ, ಆರ್., ಕರ್ನಾಟಕದ ವೀರಗಲ್ಲುಗಳು, ಪು.ಸಂ. 13
3. ಅದೇ, ಪು.ಸಂ. 5
4. ಆಚಾರ್ಯ, ಪಿಕೆ., ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಪು.ಸಂ. 561
5. ಪರಮಶಿವಮೂರ್ತಿ, ಡಿ.ವಿ., ಕನ್ನಡ ಶಾಸನಶಿಲ್ಪ, ಪು.ಸಂ.12
6. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.5
7. ಎ.ಕ.ಸಂ. 8, ಹಾಸನ 107, ಪು.ಸಂ. 317
8. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.277
9. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ. 36
10. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.275
11. ಅದೇ, ಪು.ಸಂ. 278
12. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.149
13. ಪರಮಶಿವಮೂರ್ತಿ, ಡಿ.ವಿ., ತುರುಗೊಳ್ ಸಂಕಥನ, ಪು.ಸಂ. 02
14. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.313
15. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ. 192
16. ಎ.ಕ.ಸಂ. 8, ಹಾಸನ 4, ಪು.ಸಂ.217
17. ಎ.ಕ.ಸಂ. 8, ಹಾಸನ 18, ಪು.ಸಂ.254
18. ಎ.ಕ.ಸಂ. 8, ಹಾಸನ 22, ಪು.ಸಂ.256
19. ಎ.ಕ.ಸಂ. 8, ಹಾಸನ 47, ಪು.ಸಂ.269
20. ಎ.ಕ.ಸಂ. 8, ಹಾಸನ 72, ಪು.ಸಂ.284
21. ಎ.ಕ.ಸಂ. 8, ಹಾಸನ 94, ಪು.ಸಂ.305-306
22. ಎ.ಕ.ಸಂ. 8, ಹಾಸನ 175, ಪು.ಸಂ.412
23. ಪರಮಶಿವಮೂರ್ತಿ, ಡಿ.ವಿ., ತುರುಗೊಳ್ ಸಂಕಥನ, ಪು.ಸಂ.34
24. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.158
25. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.315
26. ಎ.ಕ.ಸಂ. 8, ಹಾಸನ 105, ಪು.ಸಂ.313-314

27. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.159

28. ಎ.ಕ.ಸಂ. 8, ಹಾಸನ 107, ಪು.ಸಂ.317

29. ಪರಮಶಿವಮೂರ್ತಿ, ಡಿ.ವಿ., ತುರುಗೋಳ್ ಸಂಕಥನ, ಪು.ಸಂ.37

30. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.165

31. ವಿಲಿಯಂ ಕೊಹಿಲೋ, ದಿ ಹೊಯ್ಸಳ ವಂಶ, ಪು.ಸಂ. 259

32. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.317

33. ಪರಮಶಿವಮೂರ್ತಿ, ಡಿ.ವಿ., ತುರುಗೋಳ್ ಸಂಕಥನ, ಪು.ಸಂ.259

34. ಎ.ಕ.ಸಂ. 8, ಹಾಸನ 55, ಪು.ಸಂ.272

35. ಎ.ಕ.ಸಂ. 8, ಹಾಸನ 97, ಪು.ಸಂ.309-31

36. ಎ.ಕ.ಸಂ. 8, ಹಾಸನ 127, ಪು.ಸಂ.342

37. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.317

38. ಎ.ಕ.ಸಂ. 8, ಹಾಸನ 80, ಪು.ಸಂ.290

39. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.151

40. ಎ.ಕ.ಸಂ. 8, ಹಾಸನ 23, ಪು.ಸಂ.256-257

41. ಎ.ಕ.ಸಂ. 8, ಹಾಸನ 69, ಪು.ಸಂ.282

42. ಎ.ಕ.ಸಂ. 8, ಹಾಸನ 81, ಪು.ಸಂ.290-291

43. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.209

44. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.273-274

45. ಅದೇ, ಪು.ಸಂ. 274

46. ಎ.ಕ.ಸಂ. 8, ಹಾಸನ 17, ಪು.ಸಂ.253-254

47. ಎ.ಕ.ಸಂ. 8, ಹಾಸನ 19, ಪು.ಸಂ.254

48. ಎ.ಕ.ಸಂ. 8, ಹಾಸನ 39, ಪು.ಸಂ.265-266

49. ವಿಲಿಯಂ ಕೊಹಿಲೋ, ಪೂರ್ವೋಕ್ತ, ಪು.ಸಂ. 98-99

50. ಎ.ಕ.ಸಂ. 8, ಹಾಸನ 48, ಪು.ಸಂ.270

51. ಎ.ಕ.ಸಂ. 8, ಹಾಸನ 56, ಪು.ಸಂ.272

52. ಎ.ಕ.ಸಂ. 8, ಹಾಸನ 61, ಪು.ಸಂ.275

53. ಎ.ಕ.ಸಂ. 8, ಹಾಸನ 63, ಪು.ಸಂ.276

54. ಎ.ಕ.ಸಂ. 8, ಹಾಸನ 70, ಪು.ಸಂ.282-283

55. ಎ.ಕ.ಸಂ. 8, ಹಾಸನ 73, ಪು.ಸಂ.284-285

56. ಎ.ಕ.ಸಂ. 8, ಹಾಸನ 82, ಪು.ಸಂ.291-292

57. ಎ.ಕ.ಸಂ. 8, ಹಾಸನ 100, ಪು.ಸಂ.311

58. ಎ.ಕ.ಸಂ. 8, ಹಾಸನ 118, ಪು.ಸಂ.336

59. ಎ.ಕ.ಸಂ. 8, ಹಾಸನ 119, ಪು.ಸಂ.336-337

60. ಎ.ಕ.ಸಂ. 8, ಹಾಸನ 120, ಪು.ಸಂ.337

61. ಎ.ಕ.ಸಂ. 8, ಹಾಸನ 121, ಪು.ಸಂ.337-338

62. ಎ.ಕ.ಸಂ. 8, ಹಾಸನ 136, ಪು.ಸಂ.358

63. ಎ.ಕ.ಸಂ. 8, ಹಾಸನ 138, ಪು.ಸಂ.359

64. ಎ.ಕ.ಸಂ. 8, ಹಾಸನ 139, ಪು.ಸಂ.359-360

65. ಎ.ಕ.ಸಂ. 8, ಹಾಸನ 141, ಪು.ಸಂ.361

66. ಎ.ಕ.ಸಂ. 8, ಹಾಸನ 151, ಪು.ಸಂ.381-382

67. ಎ.ಕ.ಸಂ. 8, ಹಾಸನ 210, ಪು.ಸಂ.429-430

68. ಎ.ಕ.ಸಂ. 8, ಹಾಸನ 211, ಪು.ಸಂ.430

69. ಎ.ಕ.ಸಂ. 8, ಹಾಸನ 212, ಪು.ಸಂ.430

70. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.333

71. ಎ.ಕ.ಸಂ. 8, ಹಾಸನ 137, ಪು.ಸಂ.358-359

72. ವಿಲಿಯಂ ಕೊಹಿಲೋ, ಪೂರ್ವೋಕ್ತ, ಪು.ಸಂ.160-161

73. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.341

74. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.168-169

75. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು.ಸಂ.322

76. ಶೇಷಶಾಸ್ತ್ರಿ, ಆರ್., ಪೂರ್ವೋಕ್ತ, ಪು.ಸಂ.168

## ಅಧ್ಯಾಯ–ಆರು

## ಶಿಲ್ಪಗಳು

ದೇವಾಲಯದಲ್ಲಿರುವ ಮುಖ್ಯ ವಸ್ತುವಿಗೆ ದೇವತೆಗೆ ಎಂದು ಕರೆಯುವುದುಂಟು. ಈ ದೇವತೆಗಳನ್ನು ಒಂದು ರೂಪದಲ್ಲಿ ತಯಾರಿಸಿರುವ ದೇವತೆಗಳ ಬಿಂಬವನ್ನೇ ಶಿಲ್ಪ ಎನ್ನುತ್ತಾರೆ.[1] ದೇವಾಲಯಗಳು ಬೆಳೆದಂತೆ ಶಿಲ್ಪಗಳು ರೂಪುಗೊಂಡು ವಾಸ್ತುವಿನ ಶ್ರೀಮಂತಿಕೆಯನ್ನು ಹೆಚ್ಚಿಸಿದವು. ವಾಸ್ತುಶಿಲ್ಪವು ಬಹಳ ವರ್ಷಗಳ ಕಾಲ ಉಳಿಯಬೇಕು, ಆಕರ್ಷಣೀಯ ವಾಗಿರಬೇಕು, ಗಾಂಭೀರ್ಯತೆಯ ಜೊತೆಗೆ ಚೆಲುವು ಮೈಗೂಡಿಸಿ ಕೊಂಡಿರಬೇಕು ಎಂಬ ಇತ್ಯಾದಿ ಉದಾತ್ತ ಭಾವನೆಗಳಿಂದ ವಾಸ್ತು ಶಿಲ್ಪಗಳು ಹೆಚ್ಚಾಗಿ ದೇವಾಲಯಗಳ ವಾಸ್ತುವಿನ ಜೊತೆಗೆ ಶಿಲ್ಪಕ್ಕೆ ಹೆಚ್ಚು ಆದ್ಯತೆ ನೀಡಿ ಬೆಳೆಸಿದರು.

ಶಿಲ್ಪಶಾಸ್ತ್ರದಲ್ಲಿ ಶಿಲ್ಪಗಳನ್ನು ರಚಿಸುವ ಮೊದಲು ಶಿಲ್ಪಿಯು ಆ ದೇವರ ರೂಪವನ್ನು ಮನನ ಮಾಡಿಕೊಳ್ಳಲು ಆ ದೇವರ ಧ್ಯಾನ ಶ್ಲೋಕವನ್ನು ಜಪಿಸಿ, ಧ್ಯಾನದ ಮೂಲಕ ಮನಸ್ಸಿನಲ್ಲಿ ಮೂಡಿದ ಶಿಲ್ಪವನ್ನು ಭಾವಶಿಲ್ಪವಾಗಿ ಮರ ಅಥವಾ ಕಲ್ಲಿನಲ್ಲಿ ರೂಪಿಸುತ್ತಾನೆ. ಹೀಗೆ ನಿರ್ಮಿಸಿದ ಶಿಲ್ಪವನ್ನು ಸುಮುಹೂರ್ತದಲ್ಲಿ ದೇವಾಲಯದ ಗರ್ಭಗೃಹ ಅಥವಾ ಇತರೆ ಭಾಗಗಳಲ್ಲಿ ಪ್ರತಿಷ್ಠಾಪನೆ ಮಾಡಲಾಗುವುದು.

ಶಿಲ್ಪಗಳ ರಚನೆಗೆ ಶಿಲೆಯ ಆಯ್ಕೆಯಿಂದ ಹಿಡಿದು ಶಿಲ್ಪ ಪ್ರತಿಷ್ಠಾಪನೆಯವರೆಗೂ ಅನುಸರಿಸಲಾದ ನಿಯಮಗಳನ್ನು ಹಲವು ಶಾಸ್ತ್ರ ಗ್ರಂಥಗಳಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಮುಖ್ಯವಾಗಿ ಮಾನಸಾರ, ಮಯಮತ, ಅಪರಾಜಿತಪೃಚ್ಛ, ಸಮರಾಂಗಣ ಸೂತ್ರಧಾರ, 27 ಶೈವ, ವೈಖಾನಸ, ವೈಷ್ಣವ, ಶಾಕ್ತ, ಜೈನ, ಬೌದ್ಧ ಆಗಮಗಳು, ಪುರಾಣಗಳು ಮೊದಲಾದವು ಪ್ರಮುಖವಾಗಿವೆ.[2]

**ಶಿಲ್ಪಗಳ ಲಕ್ಷಣಗಳು:** ಶಿಲ್ಪಗಳ ಕೆತ್ತನೆಯ ರೂಪ ಹಾಗೂ ಲಕ್ಷಣಗಳನ್ನು ಆಧರಿಸಿ ಇವುಗಳನ್ನು ದುಂಡು ಶಿಲ್ಪ, ಉಬ್ಬು ಶಿಲ್ಪ ಹಾಗೂ ಚಿತ್ರಭಾಸವೆಂದು ವಿಂಗಡಿಸಬಹುದಾಗಿದೆ. ಬಿಂಬದ (ಶಿಲ್ಪದ) ಪ್ರತಿಯೊಂದು ಭಾಗವನ್ನು ಪೂರ್ಣವಾಗಿ ಕೆತ್ತಲ್ಪಟ್ಟರೆ ಅದನ್ನು ದುಂಡು ಶಿಲ್ಪವೆಂದೂ, ಮುಂಭಾಗ ಮಾತ್ರ ಕೆತ್ತಿದರೆ ಅದನ್ನು ಉಬ್ಬುಶಿಲ್ಪವೆಂದೂ, ಭಿತ್ತಿಯ ಫಲಕಗಳ ಮೇಲೆ ಬಿಡಿಸಿದ ಶಿಲ್ಪ ಚಿತ್ರವಾದರೆ ಅದನ್ನು ಚಿತ್ರಭಾಸವೆಂದೂ ಕರೆಯುವರು. ಹಾಗೆಯೇ ಶಿಲ್ಪದ ಆಕಾರವನ್ನು ಗಮನಿಸಿ ಮೂರ್ತಿಯನ್ನು ಅಡಿಯಿಂದ ಮುಡಿಯವರೆಗೆ ಕೆತ್ತಿರುವ ಬಿಂಬವು ವ್ಯಕ್ತಬಿಂಬ

ಎದೆಯವರೆಗೆ ಚಿತ್ರಿಸಿರುವ ಬಿಂಬವು ವ್ಯಕ್ತಾವ್ಯಕ್ತ ಬಿಂಬವೆಂದೂ, ಅಲ್ಲದೇ ಆಕಾರ ರಹಿತವಾದ ಪೂಜಾರ್ಹ ವಸ್ತುವು ಅವ್ಯಕ್ತ ಬಿಂಬವೆನಿಸುತ್ತದೆ.[3] ಶಿಲ್ಪಗಳಲ್ಲಿ ವ್ಯಕ್ತವಾಗಿರುವ ರೂಪ ಮತ್ತು ಭಾವಗಳಿಗೆ ಅನುಗುಣವಾಗಿ ಸೌಮ್ಯ, ಶಾಂತ ಮತ್ತು ಉಗ್ರ ಅಥವಾ ರೌದ್ರಮೂರ್ತಿಗಳೆಂದು ವಿಂಗಡಿಸಲಾಗಿದ್ದು, ಇವುಗಳು ಸಾಮಾನ್ಯವಾಗಿ ಸ್ಥಾನಕ, ಆಸೀನ ಮತ್ತು ಶಯನದ ರೀತಿಯಲ್ಲಿ ಕಂಡುಬರುತ್ತವೆ. ಜೊತೆಗೆ ಶಿಲ್ಪಗಳ ದೇಹದ ನಿಲುವನ್ನು ಆಧರಿಸಿ ಸಮಭಂಗಿಮ ದ್ವಿಭಂಗಿ ಮತ್ತು ತ್ರಿಭಂಗಿ ಶಿಲ್ಪಗಳೆಂಬ ವಿಧಗಳೂ ಉಂಟು.

**ಮುದ್ರೆಗಳು:** ಶಿಲ್ಪಗಳನ್ನು ಗುರುತಿಸುವಲ್ಲಿ ಮುದ್ರೆ ಪ್ರಮುಖವಾಗಿರುತ್ತದೆ. ಮುದ್ರೆ ಒಂದು ಭಾಷೆ, ಅದಕ್ಕೂ ಬೇರೆ ಭಾಷೆಗಳಂತೆ ಸಾಂಪ್ರದಾಯಿಕವಾದ ಸುವ್ಯವಸ್ಥಿತವಾದ ಸಾಂಕೇತಿಕ ಚೌಕಟ್ಟಿದೆ. ದಿಟವಾಗಿ ಮಾತನಾಡುವ ಭಾಷೆಗಿಂತಲೂ ಮುದ್ರೆಯ ಭಾಷೆ ಅಂದರೆ ಅಭಿನಯದ ಭಾಷೆ ಪ್ರಾಚೀನವಾದುದು. ಮನುಷ್ಯನಿಗೆ ಸಹಜವಾದುದು ನಾವು ಮಾತನಾಡುವ ಭಾಷೆಯಲ್ಲಿ ಬಹಳ ಮುಖ್ಯವಾಗಿರುತ್ತದೆ.[4] ನಾವು ಶಿಲ್ಪಗಳಲ್ಲಿ ಹಲವು ಮುದ್ರೆಗಳನ್ನು ಗುರುತಿಸಬಹುದಾಗಿದ್ದು, ಅವುಗಳನ್ನು ಅಭಯಮುದ್ರೆ, ಕಟಕಮುದ್ರೆ, ವರದ ಮುದ್ರೆ, ಸೂಚೀಮುದ್ರೆ, ವ್ಯಾಖ್ಯಾನ ಮುದ್ರೆ, ಕಟ್ಯಾವಲಂಬಿತ ಮುದ್ರೆ, ನಮಸ್ಕಾರ ಮುದ್ರೆ ಮತ್ತು ಧ್ಯಾನ ಮುದ್ರೆಗಳೆಂದು ಹೆಸರಿಸಬಹುದಾಗಿದೆ.

**ಆಯುಧಗಳು:** ಶಿಲ್ಪಗಳ ರಚನೆಯಲ್ಲಿ ಆಯುಧಗಳ ಅಳವಡಿಕೆಯು ಪ್ರಧಾನ ಅಂಶವಾಗಿದ್ದು, ಶಿಲ್ಪವು ಹೊಂದಿರುವ ಭುಜಗಳ ಆಧಾರದ ಮೇಲೆ ಅವುಗಳ ಕೈಗಳಲ್ಲಿ ಆಯುಧಗಳನ್ನು ಕೆತ್ತಲಾಗಿರುತ್ತದೆ. ತ್ರಿಶೂಲ, ಶೂಲ, ವಜ್ರ, ಅಂಕುಶ, ಪಾಶ, ಢಮರು, ದರ್ಪಣ, ಘಂಟಾ, ಅಕ್ಷಮಾಲಾ, ಖಟ್ವಾಂಗ, ಟಂಕ, ಪರಶು, ಶಂಖ, ಸ್ಥಿತಿಚಕ್ರ, ಪ್ರಯೋಗ ಚಕ್ರ, ಗದೆ ಇನ್ನೂ ಮುಂತಾದ ಆಯುಧಗಳ ನಿರ್ಮಾಣವು ಶಿಲ್ಪಗಳಲ್ಲಿ ಕಂಡುಬರುತ್ತದೆ.[5]

**ಆಭರಣಗಳು:** ಶಿಲ್ಪದ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಆಭರಣಗಳ ಅಲಂಕಾರವು ಪ್ರಮುಖ ಪಾತ್ರವಹಿಸುತ್ತದೆ. ಕಂಠೀಹಾರ, ಮುಕ್ತಾಹಾರ, ಉದರಬಂಧ, ಭುಜಕೀರ್ತಿ, ಕೇಯೂರ, ಹಸ್ತಕಟಕ, ಯಜ್ಞೋಪವೀತ, ಕುಂಡಲಗಳು, ಕಟಿಸೂತ್ರ, ಪಾದಕಟಕ, ಅಂಗುಲೀಯಕಗಳು. ವನಮಾಲೆ ಇನ್ನೂ ಮುಂತಾದ ಆಭರಣಗಳ ಕೆತ್ತನೆಯು ಶಿಲ್ಪಗಳಲ್ಲಿ ಕಂಡುಬರುತ್ತದೆ. ಈ ಆಭರಣಗಳು ಶಿಲ್ಪದ ಸೌಂದರ್ಯವನ್ನು ಹೆಚ್ಚಿಸುವುದರ ಜೊತೆಗೆ ಅದರ ಲಕ್ಷಣಗಳನ್ನು ಗುರುತಿಸಲು ಸಹಕಾರಿಯಾಗುತ್ತವೆ. ಶಿಲ್ಪಗಳ ಮೇಲಿನ ಕಿರೀಟಗಳು ಕೂಡ ಅಲಂಕರಣದ ಭಾಗವಾಗಿ ಕಂಡುಬರುತ್ತವೆ. ಇವುಗಳಲ್ಲಿ ಕಿರೀಟಮುಕುಟ, ಜಟಾಮುಕುಟ, ಕರಂಡಮುಕುಟ,

ಜಟಾಬಂಧ ಮತ್ತು ಜಟಾಭಾರ ಎಂಬ ಬಗೆಗಳಿವೆ. ದೇವತಾ ಮೂರ್ತಿಗಳಿಗೆ ಕಿರೀಟಮುಕುಟ, ಜಟಾ ಮತ್ತು ಕರಂಡ ಮುಕುಟಗಳನ್ನು ರಚಿಸಿರುತ್ತಾರೆ. ಚಿನ್ನದ ಹೂವುಗಳಿಂದಲೂ, ರತ್ನಪಟ್ಟಿಕೆಗಳಿಂದಲೂ ಕೂಡಿದ ಕಿರೀಟ ಮುಕುಟಗಳು ಹೆಚ್ಚಾಗಿ ವಿಷ್ಣು, ಚಾಮುಂಡೇಶ್ವರಿ ಮತ್ತು ರಾಜರುಗಳ ಶಿಲ್ಪಗಳಲ್ಲಿ ಕಂಡುಬರುತ್ತವೆ. ಜಟಾಮುಕುಟವು ವಿಶೇಷವಾಗಿ ಬ್ರಹ್ಮ, ಶಿವ ಮತ್ತು ಮನೋನ್ಮಣಿಯ ಶಿಲ್ಪಗಳಲ್ಲಿ ನಿರ್ಮಾಣವಾಗಿರುತ್ತದೆ. ಜಟೆಯನ್ನು ಕಟ್ಟಿರದೇ ತಲಗೆ ಅಡ್ಡಲಾಗಿ ಕಟ್ಟಿದ್ದರೆ ಜಟಾಭಾರವೆಂದು ಕರೆದಿದ್ದು, ಈ ರೀತಿಯ ಮುಕುಟವನ್ನು ದಕ್ಷಿಣಾಮೂರ್ತಿ ಭೈರವ ಮತ್ತು ಮುನಿ ಶಿಲ್ಪಗಳಲ್ಲಿ ಗುರುತಿಸಬಹುದು.[6]

ಈ ಮೇಲ್ಕಂಡಂತೆ ತಿಳಿಸಿದ ಲಕ್ಷಣಗಳನ್ನು ಹೊಂದಿರುವ ಶಿಲ್ಪಗಳು ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಶಿವಲಿಂಗ, ವಿಷ್ಣು, ಸೂರ್ಯ, ಗಣಪತಿ, ಸಪ್ತಮಾತೃಕೆಯರು, ಸರಸ್ವತಿ, ದುರ್ಗಾ, ಮಹಿಷಮರ್ಧಿನಿ, ಲಕ್ಷ್ಮೀನಾರಾಯಣ, ಯೋಗಾನರಸಿಂಹ, ಭೈರವ, ವೀರಭದ್ರ, ದಕ್ಷಿಣಾಮೂರ್ತಿ, ನಂದಿ, ಉಮಾಮಹೇಶ್ವರ, ಚಾಮುಂಡಿ, ಕೇಶವ, ಕಾರ್ತಿಕೇಯ ಇನ್ನೂ ಮುಂತಾದ ಶಿಲ್ಪಗಳು ಪ್ರಮುಖವಾಗಿವೆ. ಮೇಲ್ಕಂಡಂತೆ ಹೆಸರಿಸಿದ ಶಿಲ್ಪಗಳಲ್ಲಿ ಕೆಲವು ಗರ್ಭಗುಡಿಯಲ್ಲಿ ಕಂಡುಬರುವ ಮೂರ್ತಿ ಶಿಲ್ಪಗಳಾದರೆ ಇನ್ನು ಕೆಲವು ಬಿಡಿ ಶಿಲ್ಪಗಳು ಮತ್ತು ಭಿತ್ತಿ ಶಿಲ್ಪಗಳಾಗಿರುತ್ತವೆ. ಪ್ರಸ್ತುತ ಅಧ್ಯಾಯದಲ್ಲಿ ಹಾಸನ ತಾಲೂಕಿನ ಹೊಯ್ಸಳರ ದೇವಾಲಯಗಳಲ್ಲಿ ಕಂಡುಬರುವ ಪ್ರಮುಖ ಶಿಲ್ಪಗಳ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಿದ್ದೇನೆ.

**ಗಣಪತಿ:** ಶೈವಪಂಥವು ಬಹಳ ಪ್ರಾಚೀನವಾದುದಾಗಿದ್ದು, ಇದರಲ್ಲಿ ಗಣಪತಿಗೆ ವಿಶಿಷ್ಟ ಸ್ಥಾನವನ್ನು ನೀಡಲಾಗಿದೆ. ಬೇರೆಲ್ಲಾ ದೇವತೆಗಳನ್ನು ಪೂಜಿಸುವುದಕ್ಕಿಂತ ಮುಂಚೆ ಗಣಪತಿಗೆ ಪೂಜೆ ಸಲ್ಲಿಸುವುದು ನಮ್ಮ ಪರಂಪರೆಯಲ್ಲಿ ರೂಢಿಗತವಾಗಿ ಬಂದಿದೆ. ಕರ್ನಾಟಕದಲ್ಲಿ ವಿಘ್ನೇಶ್ವರನ ಗುಡಿಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇತ್ತೀಚೆಗೆ ಒಂದು ಸಣ್ಣ ಹಳ್ಳಿಯಾದರೂ ಒಂದು ಗಣಪತಿ ಗುಡಿ ಇದ್ದೇ ಇರುತ್ತದೆ. ಸಾಮಾನ್ಯವಾಗಿ ಗಣಪತಿ ವಿಗ್ರಹ ನಾಲ್ಕು ಪುಟ್ಟ ಕೈ, ಪುಟ್ಟ ಕಾಲುಗಳನ್ನು ಹೊಂದಿರುತ್ತದೆ. ಮಹಾಕಾಯ ಎಂಬ ಹೆಸರಿಗೆ ತಕ್ಕಂತೆ ದೊಡ್ಡ ಗುಡಾಣದಂತಹ ಹೊಟ್ಟೆಯಿರುತ್ತದೆ. ಸೊಂಡಿಲುಳ್ಳ ಆನೆಯ ಮುಖವೂ, ಆಗಲವಾದ ಕಿವಿಗಳು, ಯಜ್ಞೋಪವೀತ, ಉದರಬಂಧ, ಕೇಯೂರದ ಅಲಂಕರಣವನ್ನು ಹೊಂದಿರುತ್ತದೆ.[7] ಗಣೇಶನಿಗೆ ಪರ್ಯಾಯ ಪದವಾದ ವಿನಾಯಕ ಎಂಬುದು ಅಥರ್ವಶಿರಸ್ ಉಪನಿಷತ್ತಿನಲ್ಲಿಯೂ ಕಂಡುಬರುತ್ತದೆ. ಹಾಸನ ತಾಲೂಕಿನ ಹೊಯ್ಸಳರ ಶೈವ ಮತ್ತು ವೈಷ್ಣವ ದೇವಾಲಯಗಳಲ್ಲಿ ಗಣಪತಿ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ. ಗೊರೂರಿನ ತ್ರಿಕೂಟೇಶ್ವರ, ಕೈಲಾಸೇಶ್ವರ, ಕೋರವಂಗಲದ

ಬೂಚೇಶ್ವರ, ಮೊಸಳೆಯ ನಾಗೇಶ್ವರ ಮತ್ತು ಚನ್ನಕೇಶವ, ಶಾಂತಿ ಗ್ರಾಮದ ಧರ್ಮೇಶ್ವರ, ಯೆಲಗುಂದದ ಶಾಂತಮಲ್ಲೇಶ್ವರ ಇನ್ನೂ ಮುಂತಾದ ದೇವಾಲಯಗಳಲ್ಲಿ ಗಣಪತಿಯ ಶಿಲ್ಪವು ಕಂಡುಬರುತ್ತದೆ. ಕೋರವಂಗಲದ ಬೂಚೇಶ್ವರ ದೇವಾಲಯದ ಸೂರ್ಯ ಗುಡಿಯ ಪೂರ್ವ ಭಿತ್ತಿಯಲ್ಲಿ ನರ್ತನ ಗಣಪತಿಯ ಶಿಲ್ಪವು ಆಕರ್ಷಕವಾಗಿ ಕೆತ್ತಲ್ಪಟ್ಟಿರುತ್ತದೆ. (ಚಿ.ಸಂ.272)

**ಶಿವಲಿಂಗ:** ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಪ್ರಚಲಿತವಿರುವ ಶಿವನನ್ನು ಶೈವಧರ್ಮದಲ್ಲಿ ಈತನ ಪ್ರತೀಕವಾಗಿ ಲಿಂಗವನ್ನು ಪೂಜಿಸುತ್ತಾರೆ. ವ್ಯಾಕರಣದಲ್ಲಿ ಲಿಂಗವೆಂಬ ಶಬ್ದಕ್ಕೆ ಚಿಹ್ನೆ, ಸಂಕೇತ ಮತ್ತು ಲಾಂಛನವೆಂದು ಅರ್ಥವಿದೆ. ಲಿಂಗವನ್ನು ಪುರುಷ ಶಿಲೆಯಿಂದಲೂ ಪೀಠವನ್ನು (ಯೋನಿಪೀಠ) ಸ್ತ್ರೀ ಶಿಲೆಯಿಂದ ಮಾಡಬೇಕು.[8] ಲಿಂಗದಲ್ಲಿ ಚಲಲಿಂಗ ಮತ್ತು ಅಚಲಲಿಂಗ ಎಂಬ ಎರಡು ವಿಧಗಳಿವೆ.[9] ಪೀಠಗಳಲ್ಲೂ ವಿವಿಧ ಮಾದರಿಗಳಿದ್ದು, ಒಂದೊಂದು ಚೌಕಾಕಾರದ ಪೀಠದ ಮೇಲಿದ್ದರೆ ಮತ್ತೆ ಕೆಲವು ದುಂಡಗಿರುವ ಪಾಣಿಪೀಠದ ಮೇಲೆ ಇರುತ್ತವೆ. ಲಿಂಗಗಳಲ್ಲಿ ಪ್ರಾಚೀನತೆಯನ್ನು ಗುರುತಿಸುವುದು ಕಷ್ಟವಾದರೂ ಇತ್ತೀಚೆಗೆ ವಿದ್ವಾಂಸರು ಮಂಡಿಸಿರುವ ಸೂತ್ರವನ್ನು ಬಳಸಿ ಗುರುತಿಸಬಹುದಾಗಿದೆ. ಅ. ಸುಂದರ ಅವರ ಪ್ರಕಾರ ಬಾಣದಾಕಾರದ ಮಧ್ಯನಾಡಿ (ಬ್ರಹ್ಮಸೂತ್ರ) ಉಳ್ಳವು ಪ್ರಾಚೀನವಾದವುಗಳಾಗಿವೆ. ಹಾಸನ ತಾಲೂಕಿನ ನಿಟ್ಟೂರಿನ ಸೋಮೇಶ್ವರ, ಮೊಸಳೆಯ ನಾಗೇಶ್ವರ, ಮುದುಗೆರೆಯ ಎರಂಗೇಶ್ವರ, ಹೆರಗಿನ ಕಮಟೇಶ್ವರ ದೇವಾಲಯಗಳಲ್ಲಿ ಬ್ರಹ್ಮಸೂತ್ರವಿರುವ ಲಿಂಗಗಳನ್ನು ನೋಡ ಬಹುದಾಗಿದೆ. ಸಾಮಾನ್ಯ ಲಿಂಗಗಳನ್ನು ಗುಡ್ಡದ ತೆರಣ್ಯದ ಸೋಮೇಶ್ವರ. ಶಾಂತಿ ಗ್ರಾಮದ ಧರ್ಮೇಶ್ವರ, ಯೆಲೆಗುಂದದ ಶಾಂತಮಲ್ಲೇಶ್ವರ, ಕೋರವಂಗಲದ ಬೂಚೇಶ್ವರ, ಗೊರೂರಿನ ತ್ರಿಕೂಟೇಶ್ವರ ಮತ್ತು ಕೈಲಾಸೇಶ್ವರ ದೇವಾಲಯಗಳಲ್ಲಿ ನೋಡಬಹುದಾಗಿದೆ. (ಚಿ.ಸಂ.273)

**ನಂದಿ:** ಶಿವನ ವಾಹನವಾದ ನಂದಿಗೆ ಪುರಾಣಗಳಲ್ಲಿ ವೃಷಧ್ವಜ, ವೃಷಕೇತನ ಎಂಬ ಶಿವನ ಹೆಸರಿದೆ. ನಂದಿಯನ್ನು ಶಿವನೆಂದು ಆರಾಧಿಸುವುದುಂಟು. ಈ ನಂದಿಯನ್ನು ಪ್ರಾರಂಭಿಕ ದೇವಾಲಯಗಳಲ್ಲಿ ಸುಕನಾಸಿ ಅಥವಾ ಅಂತರಾಳದಲ್ಲಿ, ಮುಖಮಂಟಪದಲ್ಲಿ ಮೂಲ ದೇವರಿಗೆ ಎದುರಾಗಿ ಪ್ರತಿಷ್ಠಾಪಿಸಲಾಗುತ್ತಿತ್ತು. ನಂತರ ಹೊಯ್ಸಳ ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಪ್ರತ್ಯೇಕ ನಂದಿ ಮಂಟಪವನ್ನು ನಿರ್ಮಿಸುವ ಪದ್ಧತಿ ದಕ್ಷಿಣ ಭಾರತದಲ್ಲಿ ಕಾಣಬಹುದು. ಈ ನಂದಿಯನ್ನು ಯಾವಾಗಲೂ ಶಿವನಿಗೆ ಅಭಿಮುಖವಾಗಿ ಘಂಟಾಸಾರಗಳಿಂದ ಅಲಂಕೃತನಾಗಿ ಕುಳಿತಿರುವಂತೆ ರಚಿಸಲಾಗಿರುತ್ತದೆ. ಹಾಸನ ತಾಲೂಕಿನ ಶಾಂತಿ ಗ್ರಾಮದ ಧರ್ಮೇಶ್ವರ, ವೀರಭದ್ರ, ಕೋರವಂಗಲದ ಬೂಚೇಶ್ವರ, ಗೊರೂರಿನ ತ್ರಿಕೂಟೇಶ್ವರ ಮತ್ತು ಕೈಲಾಸೇಶ್ವರ, ಮೊಸಳೆಯ ನಾಗೇಶ್ವರ, ಯೆಲೆಗುಂದದ ಶಾಂತಮಲ್ಲೇಶ್ವರ,

ಹೆರಗಿನ ಕಮಟೇಶ್ವರ, ನಿಟ್ಟೂರಿನ ಸೋಮೇಶ್ವರ, ಸಾಲಗಾಮೆಯ ಅರ್ಕೇಶ್ವರ ಇನ್ನೂ ಮುಂತಾದ ದೇವಾಲಯಗಳಲ್ಲಿ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಿದ್ದಾರೆ. ಮುದುಗೆರೆಯ ಎರಂಗೇಶ್ವರ ದೇವಾಲಯದ ನಂದಿ ಶಿಲ್ಪವು ಅತ್ಯಂತ ಆಕರ್ಷಕವಾಗಿದ್ದು, ಇದು ವಿವಿಧ ಆಭರಣಗಳು ಮತ್ತು ಅಲಂಕಾರಗಳಿಂದ ಕೂಡಿದೆ. (ಚಿ.ಸಂ.274)

**ವಿಷ್ಣು:** ಈತನ ಶಿಲ್ಪಗಳು ಸಾಮಾನ್ಯವಾಗಿ ಸಮಭಂಗಿಯಲ್ಲಿದ್ದು, ಚತುರ್ಭುಜನಾಗಿರುತ್ತಾನೆ. ಬಲ ಕೆಳಕೈಯಲ್ಲಿ ಶಂಖ, ಬಲ ಮೇಲ್ಗೈಯಲ್ಲಿ ಚಕ್ರ, ಎಡ ಮೇಲ್ಗೈಯಲ್ಲಿ ಪದ್ಮ, ಎಡ ಕೆಳಕೈಯಲ್ಲಿ ಗದೆಯನ್ನು ಹಿಡಿದಿರುತ್ತಾನೆ.[10] ಮತ್ತೆ ಕೆಲ ಶಿಲ್ಪಗಳಲ್ಲಿ ಬಲಮುಂಗೈಯಲ್ಲಿ ಫಲ, ಹಿಂಗೈಯಲ್ಲಿ ಪ್ರಯಾಗ ಚಕ್ರ, ಎಡ ಹಿಂಬದಿಯ ಕೈಯಲ್ಲಿ ಶಂಖ, ಎಡ ಮುಂದಿನ ಕೈ ಕಟಿಹಸ್ತವನ್ನು ಹೊಂದಿದ್ದು, ಕಿರೀಟ ಕೊಳಗದಂತಿರುತ್ತದೆ. ಕರ್ಣಕುಂಡಲ, ಕೊರಳಲ್ಲಿ ಅಗಲವಾದ ದಪ್ಪ ಅಡ್ಡಿಗೆ, ಎಡ ಭುಜದಿಂದ ಹಾದು ಬಲ ತೋಳ ಮೇಲೆ ಇಳಿದಿರುವ ಯಜ್ಞೋಪವೀತ, ಮೊಣಕಾಲಿನವರೆಗೆ ಇಳಿಬಿದ್ದಿರುವ ವನಮಾಲೆ, ನಡುವನ್ನು ಬಿಗಿದು ಮುಂಭಾಗದಲ್ಲಿ ಗಂಟುಬಿದ್ದಿರುವ ನಡುಬಂಧ, ನಡುವಿನ ಎರಡೂ ಕಡೆಗಳಲ್ಲಿ ಇಳಿಬಿಟ್ಟಿರುವ ಬಟ್ಟೆಯನ್ನು ಸೇರಿಸುವಂತೆ ಮಧ್ಯೆ ಅರ್ಧಚಂದ್ರಾಕಾರದ ಇಳಿಬಟ್ಟೆ, ಕೈಗಳಲ್ಲಿ ದಪ್ಪ ಕಡಗಗಳನ್ನು ಕಾಣುತ್ತೇವೆ. ವಿಷ್ಣುವಿನ ಅವತಾರಗಳು, ಋಷಿಗಳು, ಮನುಗಳು, ದೇವರಗಳು, ಮನುವಿನ ಪುತ್ರರು, ಪ್ರಜಾಪತಿಗಳು, ಎಲ್ಲರೂ ಅವನ ಅಂಶ, ಹತ್ತು ಬಾರಿ ರಾಕ್ಷಸ ಸಂಹಾರಕ್ಕಾಗಿ ವಿಷ್ಣು ಅವತಾರ ಮಾಡಿ ಲೋಕರಕ್ಷಣೆ ಮಾಡಿದ್ದಾನೆ. ಇವನ ವಾಹನ ಗರುಡ, ಕ್ರಿ.ಶ.8-9ನೆಯ ಶತಮಾನದಿಂದ ವಿಷ್ಣುವಿನ 24 ರೂಪಗಳನ್ನು ತೋರಿಸುವ ಪದ್ಧತಿ ಅಲ್ಲಲ್ಲಿ ಕಂಡುಬಂದರೂ, 10ನೆಯ ಶತಮಾನದಿಂದ ಇದು ವ್ಯಾಪಕವಾಗಿ ಶಿಲ್ಪಗಳಲ್ಲಿ ಪ್ರಚಾರಕ್ಕೆ ಬಂದಿತು.[11] ಹಾಸನ ತಾಲೂಕಿನಲ್ಲಿ ಹೊಯ್ಸಳರ ಕಾಲದಲ್ಲಿ ವಿಷ್ಣುವಿನ ದೇವಾಲಯಗಳು ಅಂದರೆ ವಿಷ್ಣು ಎಂಬ ಹೆಸರಿನ ದೇವಾಲಯಗಳು ನಿರ್ಮಾಣವಾಗಿರುವುದಿಲ್ಲ. ಆದರೆ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು ಕೋರವಂಗಲದ ಬೂಚೇಶ್ವರ, ಹೊನ್ನಾವರದ ಕೇಶವ, ಮೊಸಳೆಯ ಚನ್ನಕೇಶವ ದೇವಾಲಯಗಳ ಭಿತ್ತಿ ಶಿಲ್ಪಗಳಲ್ಲಿ ಕಂಡುಬರುತ್ತವೆ.

**ಕೇಶವ:** ವೈಷ್ಣವ ಪರಂಪರೆಯಲ್ಲಿ ಪ್ರಮುಖನಾದ ಕೇಶವನು ಚತುರ್ಭುಜವನ್ನು ಹೊಂದಿದ್ದು, ಬಲ ಹಿಂಬದಿಯ ಕೈಯಲ್ಲಿ ಶಂಖ, ಎಡ ಹಿಂಬದಿಯ ಕೈಯಲ್ಲಿ ಚಕ್ರ, ಎಡ ಮುಂಬದಿಯ ಕೈಯಲ್ಲಿ ಗದಾ ಮತ್ತು ಬಲ ಮುಂಬದಿಯ ಕೈಯಲ್ಲಿ ಪದ್ಮವನ್ನು ಹಿಡಿದಿರುತ್ತಾನೆ. ಶಿಲ್ಪಗಳಲ್ಲಿ ಇವನ ಮುಖ ಭಾವವು ಕ್ಷಾತ್ರ ತೇಜಸ್ಸಿನಂತೆ ಹೊಳೆಯುವಂತೆ ಅತ್ಯಂತ ಸುಂದರವಾಗಿ ಕೆತ್ತಿರುವುದರಿಂದ ಇವನನ್ನು ಸೌಮ್ಯಕೇಶವ, ಚನ್ನಕೇಶವ, ಪ್ರಸನ್ನಕೇಶವ ಎಂಬ ಇತ್ಯಾದಿ

ಹೆಸರುಗಳಿಂದ ಕರೆಯಲಾಗುತ್ತದೆ. ಇವನಿಗಾಗಿ ಪ್ರತ್ಯೇಕ ದೇವಾಲಯಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಕೇಶವ ಶಿಲ್ಪ ಸಾಮಾನ್ಯವಾಗಿ ಸುಂದರವಾದ ಪ್ರಭಾವಳಿಯನ್ನು ಹೊಂದಿರುತ್ತವೆ. ಕೆಲವು ಪ್ರಭಾವಳಿಗಳಲ್ಲಿ ವಿಷ್ಣುವಿನ ದಶಾವತಾರವನ್ನು ತಿಳಿಸುವ ಅಂದರೆ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಶಿಲ್ಪಗಳನ್ನು ಕೆತ್ತಿರುತ್ತಾರೆ. ಈ ದಶಾವತಾರಗಳನ್ನು ವರ್ಣಿಸುವ ಕಥೆಗಳು ಭಾರತೀಯ ಪುರಾಣಗಳಲ್ಲಿ ವಿಶೇಷವಾಗಿ ಕಾಣಬರುತ್ತವೆ. ಇಂತಹ ಕೇಶವ ಶಿಲ್ಪಗಳು ಹೊನ್ನಾವರ, ಮೊಸಳೆ, ಹಿರಿಕಡಲೂರು, ಸಾಲಗಾಮೆ, ನಿಟ್ಟೂರು, ಅಂಬುಗ, ಕೌಶಿಕ ಮುಂತಾದ ಕಡೆ ಇರುವ ದೇವಾಲಯಗಳಲ್ಲಿ ಪ್ರತಿಷ್ಠಾಪಿತವಾಗಿವೆ. (ಚಿ.ಸಂ.275)

**ಸೂರ್ಯ:** ಶಿವ ಪಂಚಾಯತನದಲ್ಲಿ ಬರುವ ವಿಗ್ರಹಗಳಲ್ಲಿ ಸೂರ್ಯ ವಿಗ್ರಹವೂ ಒಂದು. ಇದು ಸಮಭಂಗಿಯಲ್ಲಿದ್ದು, ಕೈಗಳಲ್ಲಿ ತಾವರೆಯ ಮೊಗ್ಗುಗಳನ್ನು ಹಿಡಿದಿರುವಂತೆ ಕೆತ್ತಲಾಗಿರುತ್ತದೆ. ಸೂರ್ಯ ಶಿಲ್ಪವು ವಸ್ತ್ರಾಲಂಕಾರಗಳಲ್ಲಿ ಮತ್ತು ಆಭರಣಗಳ ಅಲಂಕಾರದಲ್ಲಿ ವಿಷ್ಣು ಶಿಲ್ಪದಂತೆ ಇರುತ್ತದೆ. ಸೂರ್ಯ ಬಿಂಬಗಳು ಶಿವಲಿಂಗಕ್ಕೆ ಎದುರಾಗಿರುವುದರಿಂದ ಪೂರ್ವಕ್ಕೆ ಬೆನ್ನು ಮಾಡಿ ಪಶ್ಚಿಮಕ್ಕೆ ಮುಖ ಮಾಡಿರುತ್ತಾನೆ. ಉದಾ:- ಹಾಸನ ತಾಲೂಕಿನ ಬೂಚೇಶ್ವರ ದೇವಾಲಯದಲ್ಲಿ ಈ ರೀತಿಯ ಲಕ್ಷಣವನ್ನು ಕಾಣಬಹುದು. ಈ ದೇವಾಲಯವು ದ್ವಿಕೂಟವಾಗಿದ್ದು, ಬೂಚೇಶ್ವರ ದೇವಾಲಯದ ಎದುರಿಗೆ ಸೂರ್ಯ ಗುಡಿಯು ಕಂಡುಬರುತ್ತದೆ.

ಸಪ್ತಾಶ್ವಗಳನ್ನು ಹೂಡಿದ ರಥ ಅದರಲ್ಲಿ ಸಾರಥಿ ಅರುಣ ಇರುವ ಪೀಠದ ಮೇಲೆ ದ್ವಿಬಾಹುವುಳ್ಳ ಸೂರ್ಯ ದಪ್ಪನಾದ ಮತ್ತು ದುಂಡಾದ ಎರಡು ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದು ನಿಂತಿರುತ್ತಾನೆ.[12] ಎರಡು ಕೈಗಳಿದ್ದರೆ ಮೊಗ್ಗನ್ನು ನಾಲ್ಕು ಕೈಗಳಿದ್ದರೆ ಅರಳಿದ ಕಮಲವನ್ನು ತೋರಿಸಬೇಕು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಸೂರ್ಯನ ಸುತ್ತಲೂ ಪ್ರಭಾವಳಿಯಿದ್ದು, ಪ್ರಭಾವಳಿಯ ಕೆಳಸ್ತರಗಳಲ್ಲಿ ಅರೆಗಂಬಗಳನ್ನು ಕೆತ್ತಿದ್ದು, ಈ ಕಂಬಗಳ ಮುಂದೆ ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವ ಉಷೆ, ಪ್ರತ್ಯುಷೆಯರಿರುತ್ತಾರೆ. ಶಿಲ್ಪಕ್ಕೆ ಮೆರುಗು ನೀಡುವಂತೆ ಅಲಂಕಾರಿಕ ಕಿರೀಟ, ಮಕರ ಕುಂಡಲಗಳು, ಮಣಿಸರಗಳು, ಯಜ್ಞೋಪವೀತ, ಉದರಬಂಧ, ಭುಜಕೀರ್ತಿ, ಸಿಂಹ ಮುಖದಿಂದ ಕೂಡಿದ ಮೇಖಲಾ ಹಾಗೂ ಮಾಲಾಂಕರಗಳಿಂದ ಮತ್ತು ನೆರಿಗೆಗಳಿಂದ ಕೂಡಿದ ಪಂಚೆ ಹಾಗೂ ಆಕರ್ಷಕವಾಗಿ ಕಲಾತ್ಮಕವಾದ ಗಂಟುಗಳನ್ನುಳ್ಳ ಕಟಿವಸ್ತ್ರ ಮತ್ತು ವಸ್ತ್ರದ ಗುಚ್ಛಗಳು ಶಿಲ್ಪದ ಸೌಂದರ್ಯವನ್ನು ಇಮ್ಮಡಿಗೊಳಿಸುತ್ತವೆ. ಗೊರೂರಿನ ಕೈಲಾಸೇಶ್ವರ, ಕೋರವಂಗಲದ ಬೂಚೇಶ್ವರ ದೇವಾಲಯದ ಭಿತ್ತಿಯಲ್ಲಿ ಸೂರ್ಯ ಶಿಲ್ಪಗಳು ಕಂಡುಬರುತ್ತವೆ. ಕೋರವಂಗಲದ ಸೂರ್ಯ

ಗುಡಿಯ ದಕ್ಷಿಣ ದಿಕ್ಕಿನ ಹೊರಭಿತ್ತಿಯಲ್ಲಿ ಅತ್ಯಂತ ಸುಂದರವಾದ ಸೂರ್ಯ ಶಿಲ್ಪವಿದ್ದು, ಸಪ್ತಾಶ್ವ ಪೀಠದ ಮೇಲೆ ಸೂರ್ಯನು ಸ್ಥಾನಕ ಮೂರ್ತಿಯಾಗಿದ್ದಾನೆ ಹಾಗೂ ಶಿಲ್ಪದ ಹಿಂಬದಿಯಲ್ಲಿ ಸರ್ಪದ ಕೆತ್ತನೆಯನ್ನು ಮಾಡಿರುವುದು ಗೋಚರಿಸುತ್ತದೆ. (ಚಿ.ಸಂ.276)

**ನರಸಿಂಹ:** ನರಸಿಂಹನಿಗೆ ಪ್ರತ್ಯೇಕವಾದ ದೇವಾಲಯಗಳ ನಿರ್ಮಾಣವು ಕಂಡುಬರುತ್ತದೆ. ಹೊಯ್ಸಳ ದೇವಾಲಯಗಳಲ್ಲಿ ನರಸಿಂಹನ ವಿವಿಧ ರೂಪಗಳನ್ನು ಭಿತ್ತಿಯಲ್ಲಿ ಮತ್ತು ಕೆಲವು ಕೋಷ್ಠಗಳಲ್ಲಿ ಕಂಡರಿಸಿರುತ್ತಾರೆ. ಕಾಲನ್ನು ಮಡಚಿ ಯೋಗ ಮುದ್ರೆಯಲ್ಲಿ ಕುಳಿತಿದ್ದು, ಮಂಡಿಯ ಕೆಳಭಾಗದ ಸುತ್ತಲೂ ಯೋಗಪಟ್ಟಿಯು ಬಂದಿದ್ದರೆ ಅದು ಯೋಗನರಸಿಂಹ, (ಚಿ.ಸಂ.277) ಲಕ್ಷ್ಮೀಯನ್ನು ಎಡತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದರೆ ಅದು ಲಕ್ಷ್ಮೀ ನರಸಿಂಹ, ಉಗ್ರರೂಪದಲ್ಲಿ ಹಿರಣ್ಯಕಶಿಪುವಿನ ಸಂಹಾರ ಮಾಡುತ್ತಿರುವವನು ಉಗ್ರನರಸಿಂಹ, ಎಡ ಮತ್ತು ಬಲ ಭಾಗದಲ್ಲಿ ಶ್ರೀದೇವಿ ಮತ್ತು ಭೂದೇವಿಯರಿದ್ದರೆ ಭೋಗನರಸಿಂಹ, ಶಂಕ ಚಕ್ರ ಹಿಡಿದು ಸಮಭಂಗಿಯಲ್ಲಿ ನಿಂತಿರುವವನು ಸ್ಥಾನನರಸಿಂಹ, ಒಂದು ಕೈಯನ್ನು ಮಂಡಿಯ ಮೇಲಿರಿಸಿ ಒಂದು ಕಾಲನ್ನು ಇಳಿಬಿಟ್ಟು ಪೀಠದ ಮೇಲೆ ಕುಳಿತ ಭಂಗಿಯಲ್ಲಿರುವವನು ಗಿರಿಜಾನರಸಿಂಹ. ಹೀಗೆ ಅನೇಕ ಹೆಸರುಗಳಿಂದ ನರಸಿಂಹನನ್ನು ಕರೆಯಲಾಗುತ್ತದೆ. ನರಸಿಂಹನ ವಿವಿಧ ಮಾದರಿಯ ಶಿಲ್ಪಗಳನ್ನು ಶಾಂತಿ ಗ್ರಾಮ, ಮುದಗೆರೆ, ಮೊಸಳೆ, ಕೋರವಂಗಲ, ಹೊನ್ನಾವರದ ದೇವಾಲಯಗಳ ಭಿತ್ತಿ, ಹಾರ ಮತ್ತು ಶಿಖರದ ಭದ್ರನಾಸಿಗಳಲ್ಲಿ ಅತ್ಯಂತ ಸುಂದರವಾಗಿ ಕೆತ್ತಿರುವುದನ್ನು ನೋಡಬಹುದು.

**ಭೈರವ:** ಈತನೂ ಸಹ ಶಿವನ ಒಂದು ಅವತಾರವಾಗಿದ್ದು, ಈ ಶಿಲ್ಪದ ಬಗ್ಗೆ ವಿಷ್ಣು ಧರ್ಮೋತ್ತರದಲ್ಲಿ ಉಲ್ಲೇಖವಿದೆ. ಒಟ್ಟು 64 ಅವತಾರಗಳ ಭೈರವನನ್ನು ಕಾಣಬಹುದು.[13] ಭೈರವ ಶಿಲ್ಪ ನಗ್ನ ರೂಪದಲ್ಲಿರುತ್ತದೆ. ಇದರ ಪೀಠದಲ್ಲಿ ಚೇಳಿನ ಶಿಲ್ಪವಿರುತ್ತದೆ. ಚತುರ್ಭುಜವನ್ನು ಹೊಂದಿದ್ದು, ಮೂರು ಕೈಗಳಲ್ಲಿ ತ್ರಿಶೂಲ, ಢಮರು, ಕತ್ತಿವನ್ನು ಹಿಡಿದು ಮತ್ತೊಂದು ಕೈಯಲ್ಲಿ ರುಂಡವಿದ್ದು, ಅದನ್ನು ನಾಯಿಯು ನೆಕ್ಕುತ್ತಿರುವಂತೆ ಶಿಲ್ಪವಿರುತ್ತದೆ. ಹಾಗೂ ಈ ಭೈರವನ ಕೊರಳಿಗೆ ರುಂಡಮಾಲೆ, ಹಾವಿನ ಸೊಂಟಪಟ್ಟಿ ಅಥವಾ ತೋಳಬಂದಿ, ಕಿವಿಗೆ ಪತ್ರಕುಂಡಲ, ನಾಗವಲಯ, ಯಜ್ಞೋಪವೀತ, ಕಂಕಣ, ಕಂಠೀಹಾರ, ಕೇಯೂರ, ಉದರಬಂಧ ಆಭರಣಗಳನ್ನು ಕಾಣಬಹುದು. ಹಾಸನ ತಾಲೂಕಿನ ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯ, ಹೆರಗಿನ ಕಮಟೇಶ್ವರ ದೇವಾಲಯ, ಕೋರವಂಗಲದ ಬೂಚೇಶ್ವರ ದೇವಾಲಯ, ಶಾಂತಿ ಗ್ರಾಮದ ಧರ್ಮೇಶ್ವರ ದೇವಾಲಯ, ಮೊಸಳೆಯ ನಾಗೇಶ್ವರ ದೇವಾಲಯಗಳಲ್ಲಿ ಭೈರವನ ಶಿಲ್ಪಗಳನ್ನು ಸುಂದರವಾಗಿ ಕೆತ್ತಿದ್ದಾರೆ. (ಚಿ.ಸಂ.278)

**ವೀರಭದ್ರ:** ಈತ ಶಿವನ ಮತ್ತೊಂದು ಅವತಾರ. ಕೂರ್ಮ ಪುರಾಣಗಳಲ್ಲಿ ವೀರಭದ್ರನ ಉಲ್ಲೇಖವಿದೆ.[14] ಚತುರ್ಭುಜಗಳನ್ನು ಈತನ ಕೈಯಲ್ಲಿ ಬಿಲ್ಲು, ಬಾಣ, ಕತ್ತಿ ಮತ್ತು ಗುರಾಣಿ ಇರುತ್ತದೆ. ವಸ್ತ್ರಗಳನ್ನು ಧರಿಸಿರುವ ಈ ಶಿಲ್ಪಗಳಿಗೆ ಕೆಲವು ಸಂದರ್ಭಗಳಲ್ಲಿ ಪ್ರಭಾವಳಿಯನ್ನು ನಿರ್ಮಿಸಿರುತ್ತಾರೆ. ಕೊರಳಿಗೆ ರುದ್ರಾಕ್ಷಿ ಮಾಲೆಯ ಧಾರಣೆ ಇರುತ್ತದೆ ಹಾಗೂ ಸುಂದರವಾದ ಕಿರೀಟವಿರುತ್ತದೆ. ಶಾಂತಿ ಗ್ರಾಮದಲ್ಲಿ ವೀರಭದ್ರನಿಗೋಸ್ಕರವೇ ನಿರ್ಮಿಸಿದ ವೀರಭದ್ರನ ದೇವಾಲಯವಿದೆ. (ಚಿ.ಸಂ.279) ಮೊಸಳೆಯ ನಾಗೇಶ್ವರ ದೇವಾಲಯದ ಭಿತ್ತಿಗಳಲ್ಲಿಯೂ ವೀರಭದ್ರನ ಶಿಲ್ಪ ಕಂಡುಬರುತ್ತದೆ. ಶಿವನ ಇನ್ನಿತರ ಶಿಲ್ಪಗಳಾದ ಉಮಾಮಹೇಶ್ವರಮೂರ್ತಿ, ವೃಷಭರೂಢಮೂರ್ತಿ, ದಕ್ಷಿಣಾಮೂರ್ತಿ ಇನ್ನಿತರ ಶಿಲ್ಪಗಳು ಹಾಸನ ತಾಲೂಕಿನ ಹೊಯ್ಸಳ ದೇವಾಲಯಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿವೆ.

**ದುರ್ಗಿ:** ದುರ್ಗಾ ಶಿಲ್ಪಗಳು ಶಿವ ಪಂಚಾಯತನದ ಅಂಗವಾಗಿ ಕಾಣಬರುತ್ತವೆ. ಕೋಣನ ತಲೆಯ ಮೇಲೆ ಸಮಪಾದದಲ್ಲಿ ನಿಂತಿರುವಂತೆ ಬಿಡಿಸಿದ್ದು, ಅಭಯ, ಚಕ್ರ, ಶಂಖ ಮತ್ತು ಕಟಿಹಸ್ತಗಳುಳ್ಳದ್ದಾಗಿರುತ್ತವೆ. ಕೆಲವು ಕಡೆಯಲ್ಲಿ ಶಿಲ್ಪವು 2 ರಿಂದ 10 ಕೈಗಳನ್ನು ಹೊಂದಿರುತ್ತದೆ. ಈ ಕೈಗಳಲ್ಲಿ ಶೈವ, ವೈಷ್ಣವ ದೇವತೆಗಳ ಆಯುಧಗಳಿರುತ್ತವೆ. ವೈದಿಕ ಪರಂಪರೆಯ ಶಿವಾಲಯಗಳಲ್ಲಿ ಪಾರ್ವತಿಗೆ ಅಗ್ರಸ್ಥಾನ ನೀಡಲಾಗಿದ್ದು, ದುರ್ಗಾದೇವಿಯನ್ನು ಸಾಕಾರ ಹಾಗೂ ನಿರಾಕಾರದಂತಹ (ತ್ರಿಶೂಲ) ರೂಪಗಳಲ್ಲಿ ಪೂಜಿಸುತ್ತಾರೆ. ಸಮಸ್ತ ಸೃಷ್ಟಿಗೂ ಶಕ್ತಿಯೇ ಮೂಲವೆಂದು ಮಾರ್ಕಂಡೇಯ ಪುರಾಣ ಹೇಳುತ್ತದೆ. ಗುಪ್ತ ರೂಪಿಯಾದ ದೇವಿ ಸೃಷ್ಟಿಗಾಗಿ ಮಹಾಕಾಳಿಯ ರೂಪ ಧರಿಸುತ್ತಾಳೆ. ಐಶ್ವರ್ಯ ನೀಡಲು ಲಕ್ಷ್ಮೀಯಾಗುತ್ತಾಳೆ. ಜ್ಞಾನ ನೀಡಲು ಸರಸ್ವತಿಯಾಗುತ್ತಾಳೆ, ಸಂಹಾರ ಮಾಡಲು ಮಹಾಮಾರಿಯಾಗುತ್ತಾಳೆ. ಐಶ್ವರ್ಯ ನಾಶ ಮಾಡಲು ಜೇಷ್ಠಾದೇವಿಯು ಆಗಿರುತ್ತಾಳೆ. ಕೋರವಂಗಲದ ಬೂಚೇಶ್ವರ ಮತ್ತು ಮೊಸಳೆಯ ನಾಗೇಶ್ವರ ದೇವಾಲಯಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದುರ್ಗಾ ಶಿಲ್ಪಗಳು ದೊರೆತಿವೆ.

**ಮಹಿಷಮರ್ಧಿನಿ:** ಶಕ್ತಿ ದೇವತೆಗಳಲ್ಲಿ ಮಹಿಷಮರ್ಧಿನಿ ಒಬ್ಬಳು. ಇವಳದು ಸದಾ ಉಗ್ರರೂಪ. ಈಕೆ ಕೋಪಗೊಂಡ ಸ್ತ್ರೀಯಾಗಿದ್ದು, ಒಂದು ಮುಖ ಹಾಗೂ ಅನೇಕ ಕೈಗಳನ್ನು ಹೊಂದಿರುತ್ತಾಳೆಂದು ಶಾಸ್ತ್ರಗ್ರಂಥಗಳಲ್ಲಿ ವರ್ಣಿಸಿದೆ. ಶಿಲ್ಪಗಳಲ್ಲಿಯೂ ಇದೇ ಭಾವವಿರುವಂತೆ ಕೆತ್ತಲಾಗಿರುತ್ತದೆ. ಶಿವನ ಪ್ರಭೆಯಿಂದ ಮಹಿಷಮರ್ಧಿನಿಯ ಮುಖ, ಯಮನ ಪ್ರಭೆಯಿಂದ ಕೂದಲು, ವಿಷ್ಣುವಿನ ಪ್ರಭೆಯಿಂದ ಕೈಗಳು, ಚಂದ್ರನ ಪ್ರಭೆಯಿಂದ ಸ್ತನಗಳು, ಇಂದ್ರನ ಪ್ರಭೆಯಿಂದ ನಡುವು ಹೀಗೆ ಒಂದೊಂದು ದೇವತೆಯ ಪ್ರಭೆಯಿಂದ ರೂಪಿತವಾಗಿರುತ್ತವೆ.[15]

ಮಹಿಷನು ಕೋಣನ ರೂಪವನ್ನು ಧರಿಸಿ ಬಂದಾಗ ಮಹಿಷಮರ್ಧಿನಿಯು ಕೋಣದ ತಲೆಯನ್ನು ಕತ್ತರಿಸಿ ಕಾಲಿನಿಂದ ಮೆಟ್ಟಿ ತುಳಿದಾಗ ಅಸುರನು ಅದರ ಕತ್ತಿನಿಂದ ಹೊರಬರುತ್ತಾನೆ. ಆಗ ಅವನ ಮೇಲೆ ಯುದ್ಧ ಮಾಡಿ ಸಂಹರಿಸುತ್ತಾಳೆ. ಪಂಚಾಯತನ ಪೂಜೆ ಹೆಚ್ಚು ಪ್ರಚಾರದಲ್ಲಿ ಬಂದಂತೆ ಗರ್ಭಗುಡಿಯ ಎಡಬದಿಗೆ ಮಹಿಷಮರ್ಧಿನಿಯ ಶಿಲ್ಪಗಳನ್ನು ಇಟ್ಟು ಪೂಜಿಸುವ ಪದ್ಧತಿ ಪ್ರಾರಂಭವಾಯಿತು. ಈ ರೀತಿಯ ಮಹಿಷಮರ್ಧಿನಿಯ ಶಿಲ್ಪಗಳನ್ನು ಹಲವು ಶೈವ ದೇವಾಲಯಗಳಲ್ಲಿ ಕಾಣಬಹುದು. ಗೊರೂರಿನ ತ್ರಿಕೂಟೇಶ್ವರ ದೇವಾಲಯ, (ಚಿ.ಸಂ.280) ಕೋರವಂಗಲದ ಬೂಚೇಶ್ವರ ದೇವಾಲಯ, ಮೊಸಳೆಯ ನಾಗೇಶ್ವರ ದೇವಾಲಯ ಇನ್ನೂ ಮುಂತಾದ ಕಡೆಗಳಲ್ಲಿರುವ ದೇವಾಲಯಗಳಲ್ಲಿ ಮಹಿಷಮರ್ಧಿನಿಯ ಶಿಲ್ಪಗಳನ್ನು ಕಾಣಬಹುದು.

**ಲಕ್ಷ್ಮಿ:** ಲಕ್ಷ್ಮಿಯು ಐಶ್ವರ್ಯ ದೇವತೆ. ವಿಷ್ಣು ಪುರಾಣದ ಪ್ರಕಾರ ಇವಳು ಸಮುದ್ರ ಮಂಥನ ಮಾಡಿದಾಗ ಕ್ಷೀರಸಾಗರದಲ್ಲಿ ಜನಿಸಿದಳು. ಇವಳು ವಿಷ್ಣುವಿನ ಹೆಂಡತಿ. ಇವಳಿಗೆ ಶ್ರೀ ಪದ್ಮಾ, ಕಮಲಾ ಮುಂತಾದ ಹೆಸರುಗಳಿವೆ. ಎಲ್ಲಾ ಕಾರ್ಯಗಳಿಗೆ ಅನುಗುಣವಾಗಿ ಇವಳು ಒಲಿಯುತ್ತಾಳೆಂದು ನಂಬಿಕೆ. ಆದುದರಿಂದ ಸಂತಾನಲಕ್ಷ್ಮಿ, ಸೌಭಾಗ್ಯಲಕ್ಷ್ಮಿ, ಅಷ್ಟಲಕ್ಷ್ಮಿ, ಗಜಲಕ್ಷ್ಮಿ, ರಾಜ್ಯಲಕ್ಷ್ಮಿ, ಧನಲಕ್ಷ್ಮಿ, ವಿಜಯಲಕ್ಷ್ಮಿ ಎಂದು ಕರೆಯುತ್ತಾರೆ. ಇವಳಿಗೆ ಕೆಲವು ಕಡೆ ಪ್ರತ್ಯೇಕವಾದ ದೇವಾಲಯಗಳಿವೆ. ಅವುಗಳಲ್ಲಿ ಹಾಸನ ತಾಲೂಕಿನ ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ ದೇವಾಲಯವೂ ಸಹ ಪ್ರಮುಖವಾದುದು. ಈಕೆ ಪದ್ಮಪೀಠದಲ್ಲಿ ಪದ್ಮಾಸನದಲ್ಲಿ ಕುಳಿತಿರುತ್ತಾಳೆ. ಕೈಯಲ್ಲಿ ಪದ್ಮದ ಮೊಗ್ಗುಗಳನ್ನು ಹಿಡಿದಿರುತ್ತಾಳೆ. ಸಾಮಾನ್ಯವಾಗಿ ದೇವಾಲಯದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ರೂಪದಲ್ಲಿಯೂ ಲಕ್ಷ್ಮಿ ಶಿಲ್ಪಗಳನ್ನು ಕಾಣಬಹುದು. ಮೊಸಳೆಯ ಚೆನ್ನಕೇಶವ ದೇವಾಲಯದ ನವರಂಗದ ಕೋಷ್ಠಗಳಲ್ಲಿ ಅತ್ಯಂತ ಸುಂದರವಾದ ಸ್ಥಾನಕ ಮತ್ತು ಆಸೀನ ಲಕ್ಷ್ಮಿಯ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. (ಚಿ.ಸಂ.281, 282) ಕೋರವಂಗಲದ ಬೂಚೇಶ್ವರ, ಹೊನ್ನಾವರದ ಕೇಶವ, ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳ ಭಿತ್ತಿಗಳಲ್ಲಿಯೂ ಲಕ್ಷ್ಮಿ ಶಿಲ್ಪಗಳು ದೊರೆತಿವೆ.

**ಸರಸ್ವತಿ:** ಇವಳು ವಿದ್ಯಾದೇವತೆ ಬ್ರಹ್ಮನ ಹೆಂಡತಿ. ಶ್ವೇತಪದ್ಮಾಸನೆ, ಶುಭ್ರವಸ್ತ್ರಾನ್ವಿತೆ, ಧವಳವರ್ಣೆ, ಇವಳ ಸುತ್ತಲೂ ಋಷಿಗಳು ಇರುತ್ತಾರೆ. ಎಲ್ಲಾ ಧರ್ಮಗಳಲ್ಲಿಯೂ ಸರಸ್ವತಿ ಪೂಜಾನೀಯಳು. ಅಕ್ಷಮಾಲೆ, ಪುಸ್ತಕ, ವೀಣೆ, ಪಾಶ, ಅಂಕುಶ ಮುಂತಾದವುಗಳು ಅವಳ ಕೈಯಲ್ಲಿರುತ್ತವೆ. ಸಾಮಾನ್ಯವಾಗಿ ಕೆಳಭಾಗದ ಎಡಗೈಯಲ್ಲಿ ವ್ಯಾಖ್ಯಾನ ಮುದ್ರೆಯನ್ನು ಹೊಂದಿರುತ್ತಾಳೆ. ಇವಳನ್ನು ವಿಷ್ಣುವಿನ ಶಕ್ತಿ ಎಂದು ಬಿಂಬಿಸಲಾಗುತ್ತದೆ. ಗೊರೂರಿನ

ಕೈಲಾಸೇಶ್ವರ ದೇವಾಲಯ, ಕೋರವಂಗಲದ ಬೂಚೇಶ್ವರ, ಮೊಸಳೆಯ ನಾಗೇಶ್ವರ ಮತ್ತು ಚನ್ನಕೇಶವ ದೇವಾಲಯದ ನವರಂಗದ ಕೋಷ್ಠಗಳಲ್ಲಿ ಅತ್ಯಂತ ಸುಂದರವಾದ ಸರಸ್ವತಿಯ ಶಿಲ್ಪಗಳಿವೆ. (ಚಿ.ಸಂ.283)

**ಪಾರ್ವತಿ:** ಈಕೆ ಶಿವನ ಹೆಂಡತಿ. ಇವಳನ್ನು ಗೌರಿ ಎಂತಲೂ ಕರೆಯುತ್ತಾರೆ. ಶಿವನ್ನು ಸ್ತ್ರೀರೂಪದಲ್ಲಿ ಪೂಜಿಸುವ ಶಾಸ್ತರು ಶಕ್ತಿಯ ಜೊತೆಯಿಲ್ಲದೆ ನಿರಾಕಾರ ಶಿವನಿಗೆ ಯಾವ ಅಸ್ತಿತ್ವವೂ ಇಲ್ಲ ಎನ್ನುತ್ತಾರೆ. ಪಾರ್ವತಿ ಹಾಗೂ ಇನ್ನಿತರ ಸ್ತ್ರೀದೇವತೆಗಳಿಗೆ ಪ್ರತ್ಯೇಕ ಗುಡಿಗಳನ್ನು ಕಟ್ಟುವ ಪದ್ಧತಿ ಇರಲಿಲ್ಲ. ಆದರೆ ವಿಜಯನಗರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ವಾಸ್ತು ಪ್ರಕಾರವಾಗಿ ಒಂದು ಗುಡಿಯನ್ನು ಕಟ್ಟಿಸಿ ಅಲ್ಲಿ ದೇವಿಯನ್ನು ಪ್ರತಿಷ್ಠಾಪಿಸುವ ಪದ್ಧತಿ ರೂಢಿಗೆ ಬಂದಿತು. ಸುಪ್ರಭೇದಾಗಮದಲ್ಲಿ ಪಾರ್ವತಿಯು ಉನ್ನತ ಸ್ತನದೊಂದಿಗೆ ಹೆಚ್ಚಿನ ಕಂಠೀಹಾರದಿಂದ ಸೌಂದರ್ಯವತಿಯಾಗಿರುತ್ತಾಳೆ ಎಂದು ಉಲ್ಲೇಖಿಸಿದೆ. ಈಕೆ ಚತುರ್ಭುಜೆ ಕೈಯಲ್ಲಿ ಢಮರು, ತ್ರಿಶೂಲ, ಪಾಶ, ಅಂಕುಶವನ್ನು ಹೊಂದಿರುತ್ತಾಳೆ. ಕೆಲವು ಸಮಯದಲ್ಲಿ ಅಭಯಹಸ್ತವನ್ನು ಹೊಂದಿದ್ದು, ಜೊತೆಯಲ್ಲಿ ಅಕ್ಷಮಾಲೆಯನ್ನು ಹೊಂದಿರುತ್ತಾಳೆ. ಕೆಲವೊಮ್ಮೆ ಶಿವನ ತೊಡೆಯ ಮೇಲೆ ಕುಳಿತಿರುವಂತೆಯೂ ಚಿತ್ರಿಸಲಾಗಿರುತ್ತದೆ. (ಚಿ.ಸಂ.284) ಗೊರೂರಿನ ಕೈಲಾಸೇಶ್ವರ, ಹೆರಗಿನ ಕಮಟೇಶ್ವರ ದೇವಾಲಯಗಳಲ್ಲಿ ಮತ್ತು ಕೋರವಂಗಲದ ಬೂಚೇಶ್ವರ, ಮೊಸಳೆಯ ನಾಗೇಶ್ವರ ದೇವಾಲಯದ ಭಿತ್ತಿ ಮತ್ತು ಲಲಾಟಬಿಂಬದಲ್ಲಿ ಉಮಾಮಹೇಶ್ವರ ಮತ್ತು ಪಾರ್ವತಿಯ ಶಿಲ್ಪಗಳು ದೊರೆತಿವೆ.

**ಕಾರ್ತಿಕೇಯ:** ಇವನನ್ನು ಕುಮಾರ, ಮುರುಗ, ಸ್ಕಂದ, ಷಣ್ಮುಗ, ಗುಹ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ.[16] ಈತನಿಗೆ ಸಂಬಂಧಿಸಿದಂತೆ ತಾಲೂಕಿನಲ್ಲಿ ಪ್ರತ್ಯೇಕವಾದ ದೇವಾಲಯಗಳಿಲ್ಲ. ಶೈವ ಪಂಥದ ದೇವಾಲಯಗಳಲ್ಲಿ ಇವನ ಬಿಡಿ ಶಿಲ್ಪಗಳನ್ನು ಕಾಣಬಹುದು. ಕಾರ್ತಿಕೇಯನು ಚತುರ್ಭುಜ ಹಸ್ತನಾಗಿದ್ದು, ನವಿಲಿನ ವಾಹನದ ಮೇಲೆ ಕುಳಿತಿರುತ್ತಾನೆ. ಇವನ ಹಿಂದಿನ ಎರಡು ಕೈಗಳು ಅಗಲವಾಗಿ ಹರಡಿ ಬಲಗೈಯಲ್ಲಿ ಭರ್ಜಿಯನ್ನು, ಎಡಗೈಯಲ್ಲಿ ತ್ರಿಶೂಲವನ್ನು ಹಿಡಿದಿರುತ್ತಾನೆ. ಮುಂದಿನ ಬಲಗೈ ಅಭಯ ಹಸ್ತವಿದ್ದು, ಎಡಗೈ ಕಟಿಹಸ್ತದಲ್ಲಿರುತ್ತದೆ. ತಲೆಗೆ ಕಿರೀಟ, ಮಕರ ಕುಂಡಲಗಳು, ಸರಳ ಕಂಠೀಹಾರ, ಕೇಯೂರ, ಉದರಬಂಧ, ಕಟಿಬಂಧ ಮತ್ತು ಬಿಗಿಯಾಗಿ ಧರಿಸಿರುವ ವಸ್ತ್ರದ ಅಲಂಕಾರವಿರುತ್ತದೆ. ಕೆಲವು ದೇವಾಲಯಗಳಲ್ಲಿ ಏಕಮುಖ ಶಿಲ್ಪವಿದ್ದರೆ ಮತ್ತೆ ಕೆಲವು ದೇವಾಲಯಗಳಲ್ಲಿ ತ್ರಿಮುಖ ಹೊಂದಿರುವ ಶಿಲ್ಪಗಳು ಕಂಡುಬರುತ್ತವೆ. ಕಾರ್ತಿಕೇಯನು ಸಮಭಂಗಿಯಲ್ಲಿದ್ದರೆ ವಾಹನವಾದ ನವಿಲು ಆಕರ್ಷಕವಾಗಿ ಹಿಂಭಾಗದಲ್ಲಿ ನಿಂತಿರುತ್ತದೆ. ಕೆಲವು ಕಡೆ ಅಭಯಹಸ್ತವು ನವಿಲಿನ ತಲೆಯ ಮೇಲೆ

ಆಸರೆಯಾಗಿ ಇರಿಸಿರುವಂತೆಯೂ ಇರುತ್ತದೆ. ಗೊರೂರಿನ ಕೈಲಾಸೇಶ್ವರ ದೇವಾಲಯದಲ್ಲಿ (ಚಿ.ಸಂ.285) ಮತ್ತು ಕೋರವಂಗಲದ ಬೂಚೇಶ್ವರ, ಮೊಸಳೆಯ ನಾಗೇಶ್ವರ ದೇವಾಲಯಗಳಲ್ಲಿ ಕಾರ್ತಿಕೇಯನ ಶಿಲ್ಪಗಳು ಕಂಡುಬರುತ್ತವೆ.

**ಸಪ್ತಮಾತೃಕೆಯರು:** ಮಾತೃ ದೇವತಾರಾಧನೆಯ ಪರಿಕಲ್ಪನೆಯಲ್ಲಿ ಪ್ರಾರಂಭಗೊಂಡ ಸಪ್ತಮಾತೃಕೆಯರ ಬಗ್ಗೆ ಪುರಾಣ ಮತ್ತು ಇತರ ಗ್ರಂಥಗಳಲ್ಲಿ ವರ್ಣನೆಯಿದೆ. ಇವರು ಮೂಲತಃ ಶೈವ ಪಂಥದ ದೇವತೆಗಳು. ಕ್ರಮವಾಗಿ ಬ್ರಾಹ್ಮಿ, ವೈಷ್ಣವಿ, ಮಹೇಶ್ವರಿ, ವರಾಹಿ, ಇಂದ್ರಾಣಿ, ಕೌಮಾರೀ ಮತ್ತು ಚಾಮುಂಡಿ. ಈ ಸ್ತ್ರೀದೇವತೆಗಳು ಶಕ್ತಿದೇವತೆಗಳಾಗಿದ್ದು, ಇವರು ಒಂದೊಂದು ದೈವದ ಶಕ್ತಿ ಎಂದು ಹೇಳುತ್ತಾರೆ.[17] ಇವರು ಕ್ರಮವಾಗಿ ಬ್ರಹ್ಮ, ವಿಷ್ಣು, ಮಹೇಶ್ವರ, ವರಾಹ, ಇಂದ್ರ, ಕುಮಾರ ಮತ್ತು ಯಮ ದೇವರುಗಳ ಶಕ್ತಿ ದೇವತೆಯರು. ಈ ಸಪ್ತಮಾತೃಕೆಯರನ್ನು ಅವರವರ ವಾಹನ ಸಮೇತವಾಗಿ ಒಂದೇ ಪಟ್ಟಿಕೆಯಲ್ಲಿ ಸಾಲಾಗಿ ಉಬ್ಬುಶಿಲ್ಪಗಳ ರೀತಿಯಲ್ಲಿ ರಚಿಸಿರುತ್ತಾರೆ. ಈ ಶಿಲ್ಪಪಟ್ಟಿಕೆಯಲ್ಲಿ ಮೊದಲು ಬರುವ ಬ್ರಾಹ್ಮಿಯ ಬಲಭಾಗದಲ್ಲಿ ವೀಣಾಧರ ವೀರಭದ್ರನನ್ನು ಕೊನೆಯಲ್ಲಿ ಬರುವ ಚಾಮುಂಡಿಯ ಎಡಭಾಗದಲ್ಲಿ ಗಣೇಶನನ್ನು ರಚಿಸಿ ನಡುವೆ ಮಾತೃಗಣಗಳನ್ನು ಪ್ರತಿಷ್ಠಾಪಿಸಿರುತ್ತಾರೆ.

ಬ್ರಾಹ್ಮಿಯು ಹಂಸವಾದರೆ ಈಕೆ ಬ್ರಹ್ಮನ ಶಕ್ತಿ ದೇವತೆ. ಬ್ರಹ್ಮನ ರೀತಿಯಲ್ಲಿ ನಾಲ್ಕು ಮುಖ, ಆರು ಕೈಗಳನ್ನು ಹೊಂದಿರುತ್ತಾಳೆ. ಬಲಬದಿಯ ಮೂರು ಕೈಗಳಲ್ಲಿ ವರಮುದ್ರೆ, ಪಾಶ, ಸ್ರುವವಿದ್ದು, ಎಡಬದಿಯ ಮೂರು ಕೈಗಳಲ್ಲಿ ಅಭಯಮುದ್ರೆ, ಪುಸ್ತಕ, ಕಮಂಡಲವನ್ನು ಹಿಡಿದಿರುತ್ತಾಳೆ.

ವೈಷ್ಣವಿಯು ಆರು ಕೈಗಳನ್ನು ಹೊಂದಿದ್ದು, ಎಡ ಕೈಗಳಲ್ಲಿ ಚಕ್ರ, ಶಂಖವನ್ನು ವಿಶೇಷವಾಗಿ ವನಮಾಲೆಯನ್ನು ಹೊಂದಿರುತ್ತಾಳೆ. ಬಲ ಕೈಗಳಲ್ಲಿ ವರಮುದ್ರೆ, ಗದ, ಪದ್ಮ ಹಾಗೂ ಗರುಡ ಲಾಂಛನವಿರುತ್ತದೆ.

ಮಹೇಶ್ವರಿಯನ್ನು ಭೈರವಿ ಎಂತಲೂ ಕರೆಯುತ್ತಾರೆ. ಈಕೆ ಮಹೇಶ್ವರನ ಶಕ್ತಿದೇವತೆ. ವೃಷಭ ವಾಹನವನ್ನು ಹೊಂದಿರುವ ಇವಳು ಐದುಮುಖ, ಮೂರುಕಣ್ಣು ಹಾಗೂ ಹತ್ತು ಕೈಗಳನ್ನು ಹೊಂದಿದ್ದು, ಬಾಲಚಂದ್ರ ಭೂಷಣಳಾಗಿದ್ದಾಳೆ. ಐದು ಬಲಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಶೂಲ, ವಜ್ರ, ಖಡ್ಗವನ್ನೂ, ಐದು ಎಡಕೈಗಳಲ್ಲಿ ವರಮುದ್ರೆ, ಅಂಕುಶ, ನಾಗ, ಘಂಟೆ ಮತ್ತು ಪಾಶವನ್ನು ಹಿಡಿದಿದ್ದಾಳೆ.

ವರಾಹಿಯು ವರಾಹದ ಮುಖವನ್ನು ಹೊಂದಿದ್ದು ದೊಡ್ಡದಾದ ಹೊಟ್ಟೆಯಿಂದ ಕೂಡಿರುತ್ತಾಳೆ. ಇವಳು ಆರು ಕೈಗಳನ್ನು ಹೊಂದಿದ್ದು ಬಲಕೈಗಳಲ್ಲಿ ವರದಹಸ್ತ, ಖಡ್ಗ, ದಂಡವಿದ್ದು, ಎಡಕೈಗಳಲ್ಲಿ ಅಭಯಮುದ್ರೆ, ಖೇಟಕ ಮತ್ತು ಪಾತ್ರೆಯನ್ನು ಹೊಂದಿರುತ್ತಾಳೆ ಹಾಗೂ ಇವಳ ವಾಹನ ಗರುಡ. ಈಕೆ ವರಾಹದ ಶಕ್ತಿ ದೇವತೆ.

ಇಂದ್ರಾಣಿಯು ಇಂದ್ರನ ರೀತಿಯಲ್ಲಿ ಸಾವಿರ ಕಣ್ಣುಗಳನ್ನು ಹೊಂದಿರುತ್ತಾಳೆ. ಆರು ಕೈಗಳನ್ನು ಹೊಂದಿದ್ದು, ಬಲಕೈಗಳಲ್ಲಿ ವರಮುದ್ರೆ, ಸೂತ್ರ, ವಜ್ರವನ್ನು, ಎಡಕೈಗಳಲ್ಲಿ ಅಭಯಮುದ್ರೆ, ಪಾತ್ರೆ ಮತ್ತು ಪದ್ಮವನ್ನು ಹೊಂದಿರುತ್ತಾಳೆ. ಇವಳ ವಾಹನ ಆನೆ ಹಾಗೂ ಈಕೆ ಇಂದ್ರನ ಶಕ್ತಿದೇವತೆ. ಕೌಮಾರಿಯು ಆರು ತಲೆ ಹಾಗೂ ಹನ್ನೆರಡು ಕೈಗಳನ್ನು ಹೊಂದಿರುತ್ತಾಳೆ. ಆರು ಬಲಕೈಗಳಲ್ಲಿ ವರಮುದ್ರೆ, ಶಕ್ತಿ, ಪತಾಕೆ, ದಂಡ, ಪಾತ್ರೆ, ಬಾಣವನ್ನು, ಆರು ಎಡಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಕುಕ್ಕುಟ, ಕಮಲ, ಬಿಲ್ಲು ಮತ್ತು ಗಂಟೆಯನ್ನು ಹೊಂದಿರುತ್ತಾಳೆ. ಇವಳ ವಾಹನ ನವಿಲು ಹಾಗೂ ಈಕೆ ಕುಮಾರನ ಶಕ್ತಿದೇವತೆ.

ಚಾಮುಂಡಿಯು ಕಪ್ಪನೆಯ ಶರೀರಕಾಂತಿಯ ಉಗ್ರದೇವತೆ. ಈಕೆಯು ಸರ್ಪಗಳನ್ನು ಭೂಷಣವಾಗಿ ಪಡೆದು ಕೋರೆಹಲ್ಲುಗಳಿಂದಲೂ ದೊಡ್ಡದಾದ ಶರೀರದಿಂದಲೂ, ಗುಳಿ ಕಣ್ಣುಗಳಿಂದಲೂ, ಸಣ್ಣ ಹೊಟ್ಟೆಯಿಂದಲೂ ಕೂಡಿದವಳಾಗಿ, ಕಾಮರೂಪಿಣಿಯಾಗಿ ಕೊರಳಿಗೆ ರುಂಡ ಮಾಲೆಯನ್ನು ಧರಿಸಿರುತ್ತಾಳೆ. ಇವಳನ್ನು ಹಲವು ಕಡೆ ದುರ್ಗಿ ಎಂತಲೂ ಕರೆಯುವುದುಂಟು. ಈಕೆಯು ಹತ್ತು ಕೈಗಳನ್ನು ಹೊಂದಿದ್ದು, ಬಲಕೈಗಳಲ್ಲಿ ಖಡ್ಗ, ಬಾಣ, ಒನಕೆ, ಚಕ್ರ, ಚಾಮರವಿದ್ದು, ಎಡಕೈಗಳಲ್ಲಿ ಖೇಟ, ಪಾಶ, ದಂಡ, ಕೊಡಲಿ ಮತ್ತು ಬಿಲ್ಲನ್ನು ಹೊಂದಿರುತ್ತಾಳೆ. ಇವಳ ವಾಹನ ನರಿ ಹಾಗೂ ಈಕೆ ಯಮನ ಶಕ್ತಿ ದೇವತೆ. ಗೊರೂರಿನ ತ್ರಿಕೋಟೇಶ್ವರ, ಮೊಸಳೆಯ ನಾಗೇಶ್ವರ, ಕೋರವಂಗಲದ ಬೂಚೇಶ್ವರ, ಶಾಂತಿಗ್ರಾಮದ ಧರ್ಮೇಶ್ವರ ದೇವಾಲಯಗಳಲ್ಲಿ ಸುಂದರವಾದ ಸಪ್ತಮಾತೃಕೆಯರ ಶಿಲ್ಪಗಳು ಕಂಡುಬರುತ್ತವೆ. (ಚಿ.ಸಂ.286)

**ಅಷ್ಟದಿಕ್ಪಾಲಕರ ಶಿಲ್ಪಗಳು:** ಪ್ರತಿಯೊಂದು ದಿಕ್ಕಿಗೂ ಒಬ್ಬೊಬ್ಬ ದೇವತೆಯರಿರುತ್ತಾರೆ. ಇವರನ್ನೇ ಅಷ್ಟದಿಕ್ಪಾಲಕರು ಎಂದು ಕರೆಯುತ್ತಾರೆ.[18] ಅಷ್ಟದಿಕ್ಪಾಲಕರಿಗೆ ಪ್ರತ್ಯೇಕವಾದ ದೇವಾಲಯಗಳು ಇಲ್ಲದಿದ್ದರೂ ಇವರಿಗೆ ಶೈವ-ವೈಷ್ಣವ ದೇವಾಲಯಗಳಲ್ಲಿ ಪ್ರತ್ಯೇಕವಾದ ಸ್ಥಾನವನ್ನು ಕಲ್ಪಿಸಲಾಗಿದೆ. ಇವರನ್ನು ಒಂದೊಂದು ದಿಕ್ಕಿಗೆ ಒಬ್ಬರಂತೆ ಪರಿಗಣಿಸಲಾಗುತ್ತದೆ. ಇವರನ್ನು ದೇವಾಲಯಗಳ ಭುವನೇಶ್ವರಿಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಸಪತ್ನಿಕರಾಗಿ ವಾಹನ

ರೂಢರಾಗಿರುವಂತೆ ಶಿಲ್ಪಿಸಲಾಗಿರುತ್ತದೆ. ಕೆಲವು ಕಡೆ ಭುವನೇಶ್ವರಿಯ ಮಧ್ಯದಲ್ಲಿ ಪದ್ಮಮಂಡಲ ವಿತಾನವಿದ್ದು, ಕೆಳಭಾಗದ ಪಟ್ಟಿಕೆಯಲ್ಲಿ ಆಯಾ ದಿಕ್ಕಿಗನುಗುಣವಾಗಿ ಚಿತ್ರಿಸಲಾಗಿರುತ್ತದೆ.

ಪೂರ್ವ ದಿಕ್ಕಿನಲ್ಲಿ ಇಂದ್ರನು ಐರಾವತದ (ಆನೆ) ಮೇಲೆ ಪತ್ನಿಯಾದ ಇಂದ್ರಾಣಿ ಯೊಡನೆ ಇರುವನು. ಇವನು ಚತುರ್ಭುಜವನ್ನು ಹೊಂದಿದ್ದು ಅಭಯ, ವರದಾ ಹಸ್ತಗಳೊಂದಿಗೆ ಕೈಯಲ್ಲಿ ಅಂಕುಶ ಮತ್ತು ಶಕ್ತಿಯನ್ನು ಹಿಡಿದಿರುತ್ತಾನೆ.

ಆಗ್ನೇಯ ದಿಕ್ಕಿನಲ್ಲಿ ಅಗ್ನಿಯು ಮೇಷದ (ಟಗರು) ಮೇಲೆ ಆಸೀನನಾಗಿರುತ್ತಾನೆ. ಯಾವುದೇ ಹೋಮಗಳನ್ನು ಮಾಡಬೇಕಾದರೆ ಈತನನ್ನು ಪೂಜಿಸಬೇಕು. ಇವನಿಗೆ 2 ತಲೆ, 6 ಕಣ್ಣು, 7 ಕೈಗಳು, 3 ಕಾಲುಗಳನ್ನು ಹೊಂದಿದ್ದು, ಕೈಗಳಲ್ಲಿ ಸ್ರುಕ್, ಸ್ರುವ, ನೀರು ತುಂಬಿದ ಬಟ್ಟಲು, ತುಪ್ಪ ತುಂಬಿರುವ ಬಟ್ಟಲು ಮುಂತಾದವುಗಳಿರುತ್ತವೆ.

ದಕ್ಷಿಣ ದಿಕ್ಕಿನಲ್ಲಿ ಯಮನು ಮಹಿಷದ ಮೇಲೆ ಕುಳಿತಿರುತ್ತಾನೆ. ಇವನು ದ್ವಿಭುಜವನ್ನು ಹೊಂದಿದ್ದು, ಕೈಯಲ್ಲಿ ದಂಡ ಮತ್ತು ಪಾಶವನ್ನು ಹಿಡಿದಿರುತ್ತಾನೆ. ಸಾಮಾನ್ಯವಾಗಿ ಇವನ ಜೊತೆಯಲ್ಲಿ ಚಿತ್ರಗುಪ್ತ ಎಂಬ ಸೇವಕನಿರುತ್ತಾನೆ. ಆದರೆ ಶಿಲ್ಪಗಳಲ್ಲಿ ಈತನನ್ನು ತೋರಿಸಿರುವುದಿಲ್ಲ.

ನೈರುತ್ಯ ದಿಕ್ಕಿನಲ್ಲಿ ನಿರುರತಿ ಮನುಷ್ಯನ (ನರವಾಹನ) ಮೇಲೆ ಪತ್ನಿ ಕಾಳಕಾಳ ಜೊತೆ ಇರುತ್ತಾನೆ. ಈತ ದ್ವಿಭುಜವನ್ನು ಹೊಂದಿದ್ದು, ಒಂದು ಕೈಯಲ್ಲಿ ಗದೆಯನ್ನು ಹಿಡಿದಿರುತ್ತಾನೆ. ರಾಕ್ಷಸರು ಭೂತ, ಪ್ರೇತಗಳನ್ನು ನಾಶ ಮಾಡುವುದು ಇವನ ಕಾಯಕ. ಪಶ್ಚಿಮ ದಿಕ್ಕಿನಲ್ಲಿ ವರುಣನು ಮಕರದ (ಮೊಸಳೆ) ಮೇಲೆ ಪತ್ನಿಯಾದ ಗಂಗೆ ಮತ್ತು ಯಮುನೆಯರೊಡನೆ ಇರುತ್ತಾನೆ. ಇವನು ಸಮುದ್ರ ದೇವತೆ ಹಾಗೂ ಮಳೆ ದೇವತೆಯೂ ಹೌದು. ಮಳೆ ಬಾರದಿದ್ದಾಗ ಇವನನ್ನು ಪೂಜಿಸುವುದುಂಟು. ಜನಪದದಲ್ಲಿಯೇ ಮಳೆರಾಯನೆಂದು ಈತನನ್ನು ಪೂಜಿಸುವ ಸಂಪ್ರದಾಯವಿದೆ. ವಾಯುವ್ಯ ದಿಕ್ಕಿನಲ್ಲಿ ವಾಯು ದೇವತೆಯು ಸಾರಂಗದ (ಜಿಂಕೆ) ಮೇಲೆ ಪತ್ನಿ ಅಂಜನಾ ಜೊತೆ ಇರುವನು. ಈತ ವಾಯು (ಗಾಳಿ) ದೇವತೆ. ಈತನು ಕೈಗಳಲ್ಲಿ ಧ್ವಜ, ದಂಡವನ್ನು ಹಿಡಿದಿರುತ್ತಾನೆ.

ಉತ್ತರ ದಿಕ್ಕಿನಲ್ಲಿ ಕುಬೇರನು ಅಶ್ವದ (ಕುದುರೆ) ಮೇಲೆ ಪತ್ನಿಯೊಡನೆ ಕುಳಿತಿರುತ್ತಾನೆ. ಈತ ಸಂಪತ್ತಿನ ಅಧಿದೇವತೆಯಾಗಿದ್ದು, ಕೈಯಲ್ಲಿ ದಂಡವನ್ನು ಹಿಡಿದಿರುತ್ತಾನೆ. ಮತ್ತೊಂದು ಕೈ

ಅಭಯ ಹಸ್ತವನ್ನು ಹೊಂದಿರುತ್ತದೆ. ಇವನ ಅಕ್ಕಪಕ್ಕದಲ್ಲಿ ಶಂಖನಿಧಿ, ಪದ್ಮನಿಧಿ ಎಂಬ ಪರಿಚಾರಕಿಯರು ಇರುತ್ತಾರೆ.[19]

ಈಶಾನ್ಯ ದಿಕ್ಕಿನಲ್ಲಿ ಈಶಾನು (ಶಿವ) ವೃಷಭದ ಮೇಲೆ ಪತ್ನಿ ಪಾರ್ವತಿಯೊಡನೆ ಕುಳಿತಿದ್ದು, ಢಮರು, ತ್ರಿಶೂಲವನ್ನು ಹಿಡಿದಿರುತ್ತಾನೆ.

ಈ ರೀತಿಯಾದ ಅಷ್ಟದಿಕ್ಪಾಲಕರ ಶಿಲ್ಪಗಳು ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ, ಹರಿಹರಪುರದ ಹರಿಹರೇಶ್ವರ ಕೋರವಂಗಲದ ಬೂಚೇಶ್ವರ, ಹೊನ್ನಾವರದ ಕೇಶವ ಇನ್ನೂ ಮುಂತಾದ ದೇವಾಲಯಗಳಲ್ಲಿ ಕಂಡುಬರುತ್ತವೆ.

**ದ್ವಾರಪಾಲಕರ ಶಿಲ್ಪಗಳು:** ಸಾಮಾನ್ಯವಾಗಿ ದೇವಾಲಯಗಳಲ್ಲಿ ದ್ವಾರಪಾಲಕರಿಗೆ ವಿಶೇಷವಾದ ಸ್ಥಾನವಿರುತ್ತದೆ. ದೇವಾಲಯದ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳ ದ್ವಾರಬಂಧದ ಕೆಳಭಾಗದಲ್ಲಿ ಇವರನ್ನು ನಿರ್ಮಿಸಿರುವುದು ರೂಢಿಯಲ್ಲಿದೆ. ದ್ವಾರಪಾಲಕರ ಶಿಲ್ಪಗಳು ಆಯಾ ಪಂಥಗಳಿಗೆ ಅನುಗುಣವಾಗಿರುತ್ತವೆ. ಶೈವ ದೇವಾಲಯಗಳಲ್ಲಿ ಶೈವ ದ್ವಾರಪಾಲಕರನ್ನು, ವೈಷ್ಣ ದೇವಾಲಯಗಳಲ್ಲಿ ವೈಷ್ಣವ ದ್ವಾರಪಾಲಕರನ್ನು ಕೆತ್ತಲಾಗಿರುತ್ತದೆ. (ಚಿ.ಸಂ.287) ಆಯಾ ದಿಕ್ಕಿಗೆ ಅನುಗುಣವಾಗಿ ಇರುವ ದ್ವಾರಪಾಲಕರಿಗೆ ಬೇರೆ ಬೇರೆ ಹೆಸರುಗಳಿವೆ. ವೈಷ್ಣವ ದ್ವಾರಪಾಲಕರನ್ನು ಜಯ-ವಿಜಯ ಎಂದು ಕರೆಯುತ್ತಾರೆ. ಇವರ ಕೈಗಳಲ್ಲಿ ಶಂಖ, ಚಕ್ರ, ಗದೆ, ಇದ್ದು ಮತ್ತೊಂದು ಹಸ್ತವು ಸೂಚಿಹಸ್ತವಾಗಿರುತ್ತದೆ. ಶೈವ ದ್ವಾರಪಾಲಕರ ಶಿಲ್ಪಗಳು ತ್ರಿಶೂಲ, ಢಮರು, ಪಾಶ, ಗದೆ ಮತ್ತು ಅಭಯಹಸ್ತವನ್ನು ಹೊಂದಿರುತ್ತವೆ. ಶೈವ ದ್ವಾರಪಾಲಕರನ್ನು ನಂದಿ-ಭೃಂಗಿ ಎಂದು ಕರೆಯುತ್ತಾರೆ. ಪೂರ್ವ ಭಾಗದಲ್ಲಿರುವವರನ್ನು ಚಂಡ, ಪ್ರಚಂಡ ಎಂತಲೂ, ಪಶ್ಚಿಮ ದಿಕ್ಕಿನಲ್ಲಿರುವವರನ್ನು ಭದ್ರ-ಸುಭದ್ರ ಎಂತಲೂ ಕರೆಯುತ್ತಾರೆ.[20] ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಆಳೆತ್ತರದ ದ್ವಾರಪಾಲಕರ ಶಿಲ್ಪಗಳನ್ನು ಬಿಡಿ ಶಿಲ್ಪಗಳಾಗಿ ಕೆತ್ತಿರುವುದನ್ನು ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ನೋಡಬಹುದಾಗಿದೆ. ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ, ಕೋರವಂಗಲದ ಬೂಚೇಶ್ವರ, ಹೊನ್ನಾವರದ ಕೇಶವ, ಹಿರಿಕಡಲೂರಿನ ಕೇಶವ ಇನ್ನೂ ಮುಂತಾದ ದೇವಾಲಯಗಳಲ್ಲಿ ಸುಂದರವಾದ ದ್ವಾರಪಾಲಕರ ಶಿಲ್ಪಗಳನ್ನು ಕೆತ್ತಿರುವುದನ್ನು ನೋಡಬಹುದಾಗಿದೆ. ಈ ದ್ವಾರಪಾಲಕರ ಶಿಲ್ಪಗಳು ದೇವತಾ ಮೂರ್ತಿಗಳಂತೆಯೇ ಆಭರಣಗಳಿಂದ ಅಲಂಕೃತವಾಗಿದ್ದು, ಸಾಮಾನ್ಯವಾಗಿ ದ್ವಿಭಂಗಿ ಮತ್ತು ತ್ರಿಭಂಗಿಯಲ್ಲಿರುತ್ತವೆ.

## ಅಡಿ ಟಿಪ್ಪಣಿಗಳು

1. ಆಚಾರ್ಯ ಪಿ.ಕೆ., ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಪು.ಸಂ.362
2. ಎಲಿಮೆಂಟ್ಸ್ ಆಫ್ ಇಂಡಿಯನ್ ಆರ್ಟ್ಸ್, ಪು.ಸಂ.151
3. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಪು.ಸಂ.801
4. ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪು.ಸಂ.59
5. ಅದೇ, ಪು.ಸಂ.65-66
6. ಅದೇ, ಪು.ಸಂ.72
7. ಅಲ್ಲೈಹಿನ್ ಡ್ಯಾನಿಯಿಲು, ಹಿಂದೂ ಪಾಲಿಥಿಯಿಸಮ್, ಪು.ಸಂ.295-296
8. ಅದೇ, ಪು.ಸಂ.222-228
9. ಗೋಪಿನಾಥ ರಾವ್ ಟಿ.ಎ., ಎಲಿಮೆಂಟ್ಸ್ ಆಫ್ ಹಿಂದೂ ಕಾನಗ್ರಫಿ, ಪು.ಸಂ.75
10. ಅಲ್ಲೈಹಿನ್ ಡ್ಯಾನಿಯಿಲು, ಪೂರ್ವೋಕ್ತ, ಪು.ಸಂ.153-154
11. ಲಕ್ಷ್ಮಣ್ ತೆಲಗಾವಿ(ಸಂ), ಸಂಶೋಧನೆ, ಪು.ಸಂ.787
12. ಅಲ್ಲೈಹಿನ್ ಡ್ಯಾನಿಯಿಲು, ಪೂರ್ವೋಕ್ತ, ಪು.ಸಂ.95-97
13. ಗೋಪಿನಾಥ ರಾವ್ ಟಿ.ಎ., ಪೂರ್ವೋಕ್ತ, ಪು.ಸಂ.182
14. ಅದೇ, ಪು.ಸಂ.182
15. ರಾಜೇಶ್ವರಿ. ಆರ್., ಶಕ್ತಿ ಐಕಾನಗ್ರಫಿ, ಪು.ಸಂ.53-54
16. ಅಲ್ಲೈಹಿನ್ ಡ್ಯಾನಿಯಿಲು, ಪೂರ್ವೋಕ್ತ, ಪು.ಸಂ.298-300
17. ಆಚಾರ್ಯ ಪಿ.ಕೆ., ಪೂರ್ವೋಕ್ತ, ಪು.ಸಂ.570
18. ಅಲ್ಲೈಹಿನ್ ಡ್ಯಾನಿಯಿಲು, ಪೂರ್ವೋಕ್ತ, ಪು.ಸಂ.130-131
19. ಅದೇ, ಪು.ಸಂ.135-136
20. ಸುರೇಶ ಬಿ.ಸಿ., ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಪು.ಸಂ.328

# ಅಧ್ಯಾಯ–7

## ಉಪಸಂಹಾರ

ಭೂಮಿಯು ಒಂದು ವಿಶಿಷ್ಟ ಗ್ರಹವಾಗಿದ್ದು ಇದರ ಮೇಲೆ ಮಾನವನು ಒಳಗೊಂಡಂತೆ ಹಲವಾರು ಜೀವ ಸಂಕುಲಗಳು ಭೌಗೋಳಿಕ ಸಂರಚನೆಗೆ ಅನುಗುಣವಾಗಿ ವಿಭಿನ್ನ ಲಕ್ಷಣಗಳನ್ನು ಮತ್ತು ಜೀವನ ಕ್ರಮಗಳನ್ನು ರೂಢಿಸಿಕೊಂಡು ಜೀವಿಸುತ್ತಿವೆ. ಆದರೆ ಈ ಎಲ್ಲಾ ಜೀವ ಸಂಕುಲಗಳಲ್ಲಿ ಮಾನವನು ಒಂದು ವಿಶಿಷ್ಟ ಜೀವಿಯಾಗಿದ್ದು ತನ್ನದೇ ಆದ ವಿಭಿನ್ನ ಆಲೋಚನಾ ಶಕ್ತಿಯಿಂದ ಇಡೀ ಜೈವಿಕ ಪರಂಪರೆಯ ಮೇಲೆ ಹಿಡಿತ ಸಾಧಿಸಿದ್ದಾನೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಮಾನವನು ಭೂಮಿಯ ಮೇಲೆ ಕಾಣಿಸಿ ಕೊಂಡಾಗಿನಿಂದ ಹಲವಾರು ವಿಕಾಸ ಪ್ರಕ್ರಿಯೆಗಳಿಗೆ ಒಳಗಾಗುತ್ತಾ ಬಂದಿದ್ದಾನೆ. ಈ ವಿಕಾಸ ಪ್ರಕ್ರಿಯೆಯೊಳಗೆ ಈತನು ತನ್ನದೇ ಆದ ಸಂಸ್ಕೃತಿಯನ್ನು ಪೋಷಿಸುತ್ತಾ ಬಂದಿದ್ದು, ಈ ಸಂಸ್ಕೃತಿಯ ಭಾಗವಾಗಿ ದೈವಿ ಶಕ್ತಿಯೊಂದನ್ನು ರೂಢಿಸಿಕೊಂಡು ಅದರಲ್ಲಿ ನಂಬಿಕೆ, ಭಕ್ತಿ, ಭಯ ಹೀಗೆ ಹಲವು ಭಾವನೆಗಳನ್ನು ವ್ಯಕ್ತಪಡಿಸುವ ಮೂಲಕ ಜೀವಿಸುತ್ತಾ ಬಂದಿದ್ದಾನೆ. ಪ್ರಾರಂಭದಲ್ಲಿ ಪ್ರಕೃತಿ ಆರಾಧಕನಾಗಿದ್ದ ಈತನಿಗೆ ಗಿಡ, ಮರ, ನದಿ ಇತ್ಯಾದಿ ಪರಿಸರದ ಅಂಶಗಳು ಪೂಜನೀಯವಾದುದಲ್ಲದೇ ಇವುಗಳ ಸೃಷ್ಟಿಯ ಹಿನ್ನೆಲೆಯಾಗಿ ಒಂದು ಅಗೋಚರ ಶಕ್ತಿಯಿದೆ ಎಂಬ ಅರಿವು ಮೂಡಿದಾಗ ಆ ಶಕ್ತಿಗೆ ಒಂದು ರೂಪಕೊಡಲು ಯತ್ನಿಸಿದನು. ಹೀಗೆ ನೀಡಿದ ಆ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಆಲಯವನ್ನು ಕಟ್ಟಲು ಪ್ರಾರಂಭಿಸಿದ್ದರ ಪರಿಣಾಮವಾಗಿ ದೇವಾಲಯಗಳ ರಚನೆಗೆ ನಾಂದಿಯಾಯಿತು.

ಮಾನವನ ಜೀವನದಲ್ಲಿ ದೇವಾಲಯಗಳು ಮಹತ್ತರವಾದ ಪಾತ್ರವನ್ನು ವಹಿಸಿವೆ. ದೇವಾಲಯವೆಂದರೆ ದೇವರ ವಾಸಸ್ಥಾನ. ದೇವಾಲಯವನ್ನು 'ಆಯತನ'ವೆನ್ನುವುದೂ ಉಂಟು. ಆಯತನವೆಂದರೆ ದೇವತಾ ಶಕ್ತಿಯು ಆಗಮಿಸುವ ಪವಿತ್ರ ಸ್ಥಳ. ಇದು ದೇವತೆಗಳಿಗೆ ವಿಶ್ರಾಂತಿ ಸ್ಥಳವೂ ಆಗಿದೆ. ದೇವಾಲಯವು ದೇವತೆಗಗಳಿಗೆ ವಾಸಸ್ಥಾನವಾದ್ದರಿಂದ ವಿಶೇಷವಾಗಿಯೂ ವೈಭವಯುತವಾಗಿಯೂ ಇರಬೇಕು ಎಂಬ ಕಾರಣದಿಂದ ವಿಭಿನ್ನವಾಗಿ ನಿರ್ಮಾಣ ಮಾಡಲಾಗುತ್ತಿತ್ತು.

ದೇವಾಲಯಗಳು ಅಂದಿನ ಸಮಾಜದ ವಿವಿಧ ಚಟುವಟಿಕೆಗಳ ಕೇಂದ್ರ ಬಿಂದುವಾಗಿದ್ದು, ಪರಮಾತ್ಮನನ್ನು ಪಾಮರ ಜನರಿಗೆ ಎಟುಕುವಂತೆ ಮಾಡುವ ಸಾಧನವಾಗಿದ್ದವು. ಇವು ಕೇವಲ ಆಧ್ಯಾತ್ಮ ಕೇಂದ್ರಗಳಾಗಿರದೇ ವಿದ್ಯಾಕೇಂದ್ರಗಳೂ ಆಗಿದ್ದು,

ಸಂಗೀತ, ನೃತ್ಯ ಇತ್ಯಾದಿ ಕಲೆಗಳಿಗೆ ಆಸರೆಯಾಗಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದವು. ದೇವಾಲಯಗಳ ನಿರ್ಮಾಣದಲ್ಲಿ ಜನಸಾಮಾನ್ಯರು ನೋಡಿ ತಿಳಿಯುವಂತಹ ಹಲವಾರು ಅಂಶಗಳನ್ನು ದೃಶ್ಯ ಮಾಧ್ಯಮದ ಮೂಲಕ ಚಿತ್ರಿಸಲಾಗುತ್ತಿತ್ತು. ಪರಮಾತ್ಮನಿಗಿರುವ ವಿಶೇಷ ಗುಣಗಳನ್ನು ಮತ್ತು ಧರ್ಮ, ಅರ್ಥ. ಕಾಮ ಹಾಗೂ ಮೋಕ್ಷಗಳ ಪರಿಕಲ್ಪನೆಯನ್ನು ತಿಳಿಸುವ ಸಲುವಾಗಿ ಮೂರ್ತ ರೂಪದಲ್ಲಿ ಶಿಲ್ಪಗಳನ್ನು ದೇವಾಲಯದ ವಿವಿಧ ಭಾಗಗಳಲ್ಲಿ ಅಳವಡಿಸಲಾಯಿತು. ಭಿತ್ತಿಯಲ್ಲಿರುವ ದೇವತಾ ಸ್ವರೂಪಗಳು, ಪೌರಾಣಿಕ ಸನ್ನಿವೇಶಗಳು, ಧಾರ್ಮಿಕ ಪರಂಪರೆಯ ಬಗ್ಗೆ ತಿಳಿಸಿದರೆ ಪ್ರಾಣಿ–ಪಕ್ಷಿ ಸಂಕುಲಗಳು, ವೃಕ್ಷವಲ್ಲಿಗಳು, ಗಜಾಶ್ವಬಲ, ಸಾಲಭಂಜಿಕೆಯ ಸಂಕೇತಗಳು ಅಂದಿನ ಆರ್ಥಿಕ, ನೈಸರ್ಗಿಕ ಅಂಶಗಳನ್ನು ಹಾಗೂ ಕಲಾ ಪ್ರೌಢಿಮೆಯ ವೈಭವವನ್ನು ಪ್ರತಿಬಿಂಬಿಸುತ್ತಿದ್ದವು.

ಈ ತರಹದ ಉನ್ನತವಾದ ಸಾಂಸ್ಕೃತಿಕ ಪರಂಪರೆಯನ್ನು ಪ್ರಾಚೀನ ಕಾಲದಿಂದ ಇಂದಿನವರೆಗೂ ಉಳಿಸಿಕೊಂಡು ಬಂದಿರುವ ನಮ್ಮ ನಾಡಿನ ಪ್ರದೇಶಗಳ ಸಾಲಿನಲ್ಲಿ ಹಾಸನ ಜಿಲ್ಲೆಯು ಸಹ ಒಂದು. ಹೊಯ್ಸಳ ಅರಸರ ರಾಜಧಾನಿಯಾಗಿ ಮೆರೆದ ಈ ಜಿಲ್ಲೆಯು ತನ್ನ ಶಿಲ್ಪಕಲಾ ವೈಭವದಿಂದ ಜಾಗತಿಕ ಭೂಪಟದಲ್ಲಿ ಚಿರಸ್ಥಾಯಿಯಾದ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿ ಹೊಯ್ಸಳರ ಕಾಲದ ನೂರಾರು ಸುಂದರ ದೇವಾಲಯಗಳು ಮತ್ತು ಶಾಸನಗಳು ಕಂಡುಬಂದಿದ್ದು, ಇದನ್ನು 'ಶಿಲ್ಪಕಲೆಗಳ ಕಣಜ' ಎಂದು ಕರೆದರೆ ಉತ್ಪ್ರೇಕ್ಷೆಯಾಗಲಾರದು. ಈ ಜಿಲ್ಲೆಯು ಹಾಸನ, ಹೊಳೆನರಸೀಪುರ, ಅರಕಲಗೂಡು, ಸಕಲೇಶಪುರ, ಆಲೂರು, ಬೇಲೂರು, ಅರಸೀಕೆರೆ ಮತ್ತು ಚನ್ನರಾಯಪಟ್ಟಣ ಎಂಬ 8 ತಾಲೂಕುಗಳನ್ನು ಒಳಗೊಂಡಿದೆ. ಇವುಗಳಲ್ಲಿ ಹಾಸನ ತಾಲೂಕು ಹೊಯ್ಸಳ ಅರಸರ ನೇರ ಆಳ್ವಿಕೆಗೆ ಒಳಪಟ್ಟಿದ್ದಂತಹ ಪ್ರಮುಖ ಪ್ರದೇಶವಾಗಿದ್ದು, ಇವರ ಪ್ರಭಾವದಿಂದಾಗಿ ಇಲ್ಲಿ ಹಲವಾರು ಸುಂದರ ದೇವಾಲಯಗಳು ನಿರ್ಮಾಣವಾಗಿದ್ದು, ಇವು ನಮ್ಮ ಸಂಸ್ಕೃತಿಯ ಭಾಗವಾಗಿ ಉಳಿದುಬಂದಿವೆ. ನಮ್ಮ ಪರಂಪರೆಯ ಉದಾತ್ತ ಅಂಶಗಳನ್ನು ಒಳಗೊಂಡಿರುವ ಈ ದೇವಾಲಯಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿದ್ದು, ಪ್ರಸ್ತುತ ಸಂಶೋಧನೆಯಲ್ಲಿ ಹಾಸನ ತಾಲೂಕಿನ ಹೊಯ್ಸಳರ ಆಳ್ವಿಕೆಗೆ ಸೀಮಿತವಾದಂತೆ "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ" ಎಂಬ ಮಹಾಪ್ರಬಂಧದ ರಚನೆಯ ಮೂಲಕ ಹೊಯ್ಸಳರ ಕಾಲದ ದೇವಾಲಯಗಳು, ಶಾಸನಗಳು, ಶಿಲ್ಪಗಳು ಮತ್ತು ಸ್ಮಾರಕ ಶಿಲ್ಪಗಳಾದ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ವಿವರಣಾತ್ಮಕವಾಗಿ ವಿವರಿಸಲಾಗಿದೆ.

ಈ ತಾಲೂಕಿನ ಪ್ರತಿಯೊಂದು ಗ್ರಾಮಕ್ಕೂ ಕ್ಷೇತ್ರಕಾರ್ಯವನ್ನು ಕೈಗೊಂಡು ತನ್ನ ಪರಿಮಿತಿಯಲ್ಲಿ ಬರುವ ದೇವಾಲಯಗಳನ್ನು ಅಂದರೆ ಹೊಯ್ಸಳರ ಕಾಲದ ದೇವಾಲಯಗಳನ್ನು ದಾಖಲೀಕರಣ ಮಾಡುವುದರ ಜೊತೆಗೆ ಅದರ ಕಲೆ ಮತ್ತು ವಾಸ್ತುಶಿಲ್ಪ, ಶಿಲ್ಪಗಳ ವೈಶಿಷ್ಟ್ಯ ಮತ್ತು ಸ್ಮಾರಕ ಶಿಲ್ಪಗಳಾದ ಶಾಸನೋಕ್ತ ವೀರಗಲ್ಲುಗಳ ಅಂಶಗಳನ್ನು ಕುರಿತಂತೆ ವಿವರಣಾತ್ಮಕವಾಗಿ ಈ ಪ್ರೌಢಪ್ರಬಂಧದಲ್ಲಿ ವಿವರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದೇನೆ. ಹೊಯ್ಸಳ ದೇವಾಲಯಗಳ ಅಧ್ಯಯನಕ್ಕಾಗಿ ಹಾಸನ ತಾಲೂಕಿನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿಗಳನ್ನು ಕಲೆ ಹಾಕುವಾಗ ಅನೇಕ ವಿಭಿನ್ನ ಪರಿಸ್ಥಿತಿಗಳನ್ನು ಎದುರಿಸಬೇಕಾಯಿತು. ಅಂದರೆ ನನ್ನ ಅಧ್ಯಯನದ ಮೂಲ ವಿಷಯಗಳಾದ ದೇವಾಲಯಗಳು, ಶಿಲ್ಪಗಳು, ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳ ಬಗ್ಗೆ ಸ್ಥಳೀಯರನ್ನು ವಿಚಾರಿಸಿದಾಗ ಅವರಲ್ಲಿನ ನಿರ್ಲಕ್ಷ್ಯ, ಅನುಮಾನ, ಆಸಕ್ತಿ ಮತ್ತು ಉತ್ಸಾಹ ಪೂರ್ವಕವಾಗಿ ತಮ್ಮ ಪರಿಸರದ ಸಂಸ್ಕೃತಿ, ಗ್ರಾಮಗಳ ಐತಿಹಾಸಿಕ ಹಿನ್ನೆಲೆ, ಪುರಾಣಗಳು ಮತ್ತು ಸ್ಮಾರಕಗಳ ಬಗ್ಗೆ ಮಾಹಿತಿಯನ್ನು ಒದಗಿಸಿದರು. ಅಲ್ಲದೇ ನಮ್ಮಿಂದಲೂ ಸಹ ಅವರ ಗ್ರಾಮದ ಸ್ಮಾರಕಗಳು ಮತ್ತು ಶಾಸನಗಳ ಕಾಲಮಾನ ಮತ್ತು ಅವುಗಳ ವೈಶಿಷ್ಟ್ಯದ ಬಗ್ಗೆ ಮಾಹಿತಿಯನ್ನು ಕೇಳಿ ಪಡೆದರು. ಕ್ಷೇತ್ರಕಾರ್ಯದಲ್ಲಿ ಕಂಡುಬಂದಂತಹ ಪ್ರಮುಖ ಅಂಶವೇನೆಂದರೆ ಕೆಲವು ದೇವಾಲಯಗಳು ಶಿಥಿಲಾವಸ್ಥೆಯಲ್ಲಿರುವುದರಿಂದ ಮತ್ತು ಅದರಲ್ಲಿ ಆರಾಧನೆಗೆ ಒಳಪಡುವ ಮೂರ್ತಿಗಳು ಇಲ್ಲವಾದ್ದರಿಂದ ಈ ದೇವಾಲಯಗಳು ಜನರ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಹಾಗೂ ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರ ಪಡಿಸುವ ಉದ್ದೇಶದಿಂದ ಅತ್ಯಂತ ಸುಂದರ ಕಲಾತ್ಮಕ ಅಂಶಗಳಿರುವ ದೇವಾಲಯಗಳ ಭಿತ್ತಿ ಮತ್ತು ಶಿಲ್ಪಗಳಿಗೆ ಸುಣ್ಣ-ಬಣ್ಣ ಮತ್ತು ಎಣ್ಣೆಯನ್ನು ಬಳಿದು ಅವುಗಳ ಮೂಲ ಸೌಂದರ್ಯವು ಗೋಚರಿಸದಂತೆ ಮಾಡಿರುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಹಾಗೂ ಕೆಲವು ಮೂಲ ದೇವಾಲಯಗಳನ್ನೇ ಕೆಡವಿ ಹೊಸದಾಗಿ ನಿರ್ಮಿಸಿರುವುದರಿಂದ ಆ ದೇವಾಲಯದ ಮೂಲ ಸಂಸ್ಕೃತಿಯ ಕುರುಹುಗಳು ನಾಶವಾಗಿರುವುದು ಸಹ ಒಂದು ಪ್ರಮುಖವಾದ ವಿಷಾದನೀಯ ಅಂಶವಾಗಿದೆ.

**ಹಾಸನ ತಾಲೂಕಿನ ಹೊಯ್ಸಳ ದೇವಾಲಯಗಳ ಅಧ್ಯಯನದಲ್ಲಿ ವಿಶೇಷ ಅಂಶಗಳು**

ಒಂದು ಸಂಸ್ಕೃತಿಯ ನಿರ್ಮಾಣ ಮತ್ತು ಬೆಳವಣಿಗೆಯಲ್ಲಿ ಭೌಗೋಳಿಕ ಅಂಶಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಅದೇ ರೀತಿಯಾಗಿ ಹಾಸನ ತಾಲೂಕಿನಲ್ಲಿ ಹೊಯ್ಸಳರ ಆಳ್ವಿಕೆ ಮತ್ತು ಇವರ ಕಾಲದ ದೇವಾಲಯಗಳ ನಿರ್ಮಾಣದ ಮೇಲೆ ಅಲ್ಲಿನ ಭೌಗೋಳಿಕ ಅಂಶಗಳು ಪ್ರಭಾವ ಬೀರಿರುವುದನ್ನು ಅಲ್ಲಗಳೆಯುವಂತಿಲ್ಲ. ಈ ತಾಲೂಕು ಕಸಬಾ,

ಸಾಲಗಾಮೆ, ಕಟ್ಟಾಯ, ದುದ್ದ ಮತ್ತು ಶಾಂತಿಗ್ರಾಮ ಎಂಬ 5 ಹೋಬಳಿಗಳನ್ನು ಹೊಂದಿದ್ದು, ಇವುಗಳಲ್ಲಿ ಕಸಬಾ, ಕಟ್ಟಾಯ, ಸಾಲಗಾಮೆ ಮತ್ತು ಶಾಂತಿಗ್ರಾಮ ಹೋಬಳಿಯ ಪಶ್ಚಿಮ ಭಾಗವು ಅರೆಮಲೆನಾಡು ವಾತಾವರಣವನ್ನು ಹೊಂದಿದ್ದರೆ ದುದ್ದ ಹೋಬಳಿಯು ಬಯಲು ಸೀಮೆಯ ವಾತಾವರಣವನ್ನು ಹೊಂದಿದೆ. ಸಮುದ್ರಮಟ್ಟಕ್ಕಿಂತ ಎತ್ತರದ ಭೂ ಪ್ರದೇಶವನ್ನು ಹೊಂದಿರುವ ಈ ತಾಲೂಕು ಫಲವತ್ತಾದ ವ್ಯವಸಾಯ ಯೋಗ್ಯ ಭೂಮಿಯನ್ನು ಹೊಂದಿದ್ದು, ಇಲ್ಲಿ ಹೇಮಾವತಿ, ಯಗಚಿ ಮತ್ತು ವಾಟೆಹೊಳೆ ನದಿಗಳು ಹರಿಯುತ್ತವೆ. ಫಲವತ್ತಾದ ಭೂ ಪ್ರದೇಶ ಮತ್ತು ನದಿಗಳ ಹರಿಯುವಿಕೆಯ ಪ್ರಭಾವದಿಂದಾಗಿ ಈ ತಾಲೂಕು ಪ್ರಮುಖವಾಗಿ ಕೃಷಿ ಆಧಾರಿತ ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಲು ಕಾರಣವಾಗಿದೆ. ಒಟ್ಟಾರೆಯಾಗಿ ಈ ಪ್ರದೇಶ ಪ್ರಾಚೀನ ಕಾಲದಿಂದಲೂ ರಾಜಕೀಯ ಮತ್ತು ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಲೂ ಈ ಭೌಗೋಳಿಕ ಅಂಶಗಳು ಪ್ರಭಾವ ಬೀರಿವೆ ಎಂದು ಮನಗಾಣಬೇಕಾಗುತ್ತದೆ.

ಹಾಸನ ತಾಲೂಕಿನ ರಾಜಕೀಯ ಇತಿಹಾಸವನ್ನು ಶಾಸನಗಳ ಆಧಾರದ ಮೇಲೆ ನೋಡಿದಾಗ ಈ ಪ್ರದೇಶವು ಪ್ರಾಚೀನ ಕಾಲದಲ್ಲಿ ಗಂಗರ ಆಳ್ವಿಕೆಯ ಸಂದರ್ಭದಲ್ಲಿ ಗಂಗವಾಡಿ ೯೬,೦೦೦ ಪ್ರದೇಶದ ವ್ಯಾಪ್ತಿಯೊಳಗೆ ಕಂಡುಬಂದಿದ್ದು, ಇಲ್ಲಿ ನೀರ್ಗುಂದ ಮತ್ತು ಸೀಗೆನಾಡುಗಳು ಪ್ರಮುಖ ಆಡಳಿತ ವಿಭಾಗಗಳಾಗಿದ್ದವು. ಇಲ್ಲಿ ಗಂಗರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಇವರ ಸಾಮಂತರು ಹಾಗೂ ವಿವಿಧ ಪಾಳೆಯ ಪಟ್ಟುಗಳನ್ನು ಹೊಂದಿದ್ದ ಪಾಳೆಯಗಾರರು ಆಳ್ವಿಕೆ ನಡೆಸಿರುವುದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಈ ತಾಲೂಕಿನಲ್ಲಿ ಒಟ್ಟು 219 ಶಾಸನಗಳು ಕಂಡುಬಂದಿದ್ದು, ಇವುಗಳಲ್ಲಿ ಶೇ.50ಕ್ಕೂ ಹೆಚ್ಚು ಶಾಸನಗಳು ಹೊಯ್ಸಳರ ಆಳ್ವಿಕೆಯನ್ನು ಪ್ರತಿಬಿಂಬಿಸುತ್ತವೆ.

ಹೊಯ್ಸಳರ ರಾಜಕೀಯ ಇತಿಹಾಸವನ್ನು ತಾಲೂಕಿಗೆ ಸೀಮಿತವಾದಂತೆ ನೋಡುವುದಾದರೆ ವಿನಯಾದಿತ್ಯನ ಆಳ್ವಿಕೆಯನ್ನು ತಿಳಿಸುವ ನಿಟ್ಟೂರಿನ ಶಾಸನವು ಪ್ರಥಮವಾಗಿ ದಾಖಲಾಗುತ್ತದೆ. ಈ ಶಾಸನದ ಪ್ರಕಾರ ವಿನಯಾದಿತ್ಯನು ಚಾಳುಕ್ಯರ ಮಾಂಡಲೀಕನಾಗಿದ್ದನೆಂಬುದು ತಿಳಿದುಬರುತ್ತದೆ. ಈತನ ನಂತರ ಅಧಿಕಾರಕ್ಕೆ ಬಂದ ಒಂದನೇ ಬಲ್ಲಾಳನಿಗೆ ಸಂಬಂಧಿಸಿದ ಎರಡು ಶಾಸನಗಳು ಗುಡ್ಡದ ತೆರಣ್ಯ ಗ್ರಾಮದಲ್ಲಿ ದೊರೆತಿದ್ದು, ಇವುಗಳಲ್ಲಿ ಒಂದು ಶಾಸನವು ಒಂದನೇ ಬಲ್ಲಾಳನು ಕೊಂಗಾಳ್ವ ದೇವನ ಮೇಲೆ ದಾಳಿ ಮಾಡಿದ ವಿಷಯವನ್ನು ಉಲ್ಲೇಖಿಸುತ್ತದೆ. ಒಂದನೇ ಬಲ್ಲಾಳನ ನಂತರ ವಿಷ್ಣುವರ್ಧನನು ಇಲ್ಲಿ ಆಳ್ವಿಕೆ ನಡೆಸಿರುವುದಕ್ಕೆ ಪೂರಕವಾಗಿ 16 ಶಾಸನಗಳು ಕಂಡುಬರುತ್ತವೆ. ಇವುಗಳಲ್ಲಿ

ದೊಡ್ಡಗದ್ದವಳ್ಳಿಯ ಶಾಸನವು ಪ್ರಥಮವಾದುದ್ದು. ಇದು ಲಕ್ಷ್ಮಿದೇವಿ ದೇವಾಲಯ ಎಂಬ ಚತುಷ್ಕೂಟ ದೇವಾಲಯದ ನಿರ್ಮಾಣ ಮತ್ತು ಇದರ ವಾಸ್ತು ಪ್ರಕಾರಗಳನ್ನು ಹೆಸರಿಸಿರುವುದು ವಿಶೇಷವಾಗಿದೆ. ಕೆಲವತ್ತಿ ಗ್ರಾಮದ ಕ್ರಿ.ಶ.1123ರ ಶಾಸನವು ವಿಷ್ಣುವರ್ಧನನ ಸಹೋದರ ಉದಯಾದಿತ್ಯನು ಇದೇ ಗ್ರಾಮದಲ್ಲಿ ಮರಣ ಹೊಂದಿದ ವಿಷಯವನ್ನು ಉಲ್ಲೇಖಿಸಿದ್ದು, ವಿಷ್ಣುವರ್ಧನನು ತನ್ನ ತಮ್ಮನ ನೆನಪಿಗಾಗಿ ಪರೋಕ್ಷ ವಿನಯದ ರೂಪದಲ್ಲಿ ಈ ಗ್ರಾಮವನ್ನು ಅಗ್ರಹಾರವಾಗಿ ಮಾರ್ಪಡಿಸಿ ದಾನ ನೀಡಿದ ಅಂಶವನ್ನು ತಿಳಿಸುತ್ತದೆ. ಪೂಮಗಾಮೆ ಗ್ರಾಮದ ಕ್ರಿ.ಶ.1139ರ ಶಾಸನವು ಕಲ್ಯಾಣಿ ಚಾಳುಕ್ಯರ ದೊರೆ 3ನೇ ಸೋಮೇಶ್ವರನ ಬಿರುದಾವಳಿಗಳನ್ನು ವರ್ಣಿಸಿ ನಂತರ ವಿಷ್ಣುವರ್ಧನನ ಬಿರುದುಗಳನ್ನು ವರ್ಣಿಸುತ್ತದೆ. ಇದರಿಂದ ತಿಳಿದುಬರುವ ಪ್ರಮುಖ ಅಂಶವೇನೆಂದರೆ ವಿಷ್ಣುವರ್ಧನನ ಆಳ್ವಿಕೆಯ ಕೊನೆಯ ಕಾಲಘಟ್ಟದಲ್ಲೂ ಸಹ ಕಲ್ಯಾಣಿ ಚಾಳುಕ್ಯರ ಅಧಿಪತ್ಯದಿಂದ ಹೊಯ್ಸಳರು ಪೂರ್ಣವಾಗಿ ಹೊರಬಂದಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ವಿಷ್ಣುವರ್ಧನನು ಉತ್ತಮ ಕಲಾಭಿರುಚಿಯುಳ್ಳ ವ್ಯಕ್ತಿಯಾಗಿದ್ದು, ಈತನ ಆಳ್ವಿಕೆಯ ಕಾಲದಲ್ಲಿ ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ, ಶಾಂತಿಗ್ರಾಮದ ಧರ್ಮೇಶ್ವರ ಮತ್ತು ಹೊನ್ನಾವರದ ಕೇಶವ ದೇವಾಲಯಗಳು ನಿರ್ಮಾಣವಾದವು. ವಿಷ್ಣುವರ್ಧನನ ನಂತರ ಇವನ ಮಗ ಒಂದನೇ ನರಸಿಂಹನು ಈ ಪ್ರದೇಶವನ್ನು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ 20 ಶಾಸನಗಳು ದೊರೆತಿವೆ. ಇವುಗಳಲ್ಲಿ ಕ್ರಿ.ಶ.1160ರ ಕೋರವಂಗಲದ ಶಾಸನ ಮತ್ತು ಕ್ರಿ.ಶ.1170ರ ಜಕ್ಕೇನಹಳ್ಳಿ ಶಾಸನಗಳು ಪ್ರಮುಖವಾಗಿವೆ. ಏಕೆಂದರೆ ಈ ಎರಡೂ ಶಾಸನಗಳು ಒಂದನೇ ನರಸಿಂಹನ ಅಧಿಕಾರಿಯಾಗಿದ್ದ ಗೋವಿಂದನ ವಂಶಾವಳಿಯನ್ನು ತಿಳಿಸುತ್ತವೆ. ಈ ವಂಶಾವಳಿಯ ಪ್ರಕಾರ ಮದ್ದಿಮಯ್ಯ ಮತ್ತು ಮಾಕವ್ವೆ ದಂಪತಿಗಳಿಗೆ ಗೋವಿಂದ, ನಾಕಣ(ನಾಕುಮಯ್ಯ), ಕಾಳಿಮಯ್ಯ ಮತ್ತು ಬೂಚಿರಾಜ ಎಂಬ ನಾಲ್ಕು ಜನ ಪುತ್ರರಿದ್ದು, ಇವರು ಒಂದನೇ ನರಸಿಂಹನ ಕಾಲದಲ್ಲಿ ಮಹಾಪ್ರಧಾನರು, ಶ್ರೀಕರಣರು ಹಾಗೂ ತಂತ್ರಾಧಿಕಾರಿಗಳು ಆಗಿದ್ದರೆಂದು ಹಾಗೂ ಗೋವಿಂದನು ಗೋವಿಂದೇಶ್ವರ, ನಾಕಣನು ನಾಕೇಶ್ವರ ಮತ್ತು ಬೂಚರಾಜನು ಬೂಚೇಶ್ವರ ಎಂಬ ದೇವಾಲಯಗಳನ್ನು ಕೋರವಂಗಲದಲ್ಲಿ ಹಾಗೂ ಕಾಳಿಮಯ್ಯನು ಜಕ್ಕೇನಹಳ್ಳಿಯಲ್ಲಿ ಕಾಳೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ಅಂಶಗಳು ತಿಳಿದುಬರುತ್ತವೆ. ಒಂದನೇ ನರಸಿಂಹನ ನಂತರ ಈತನ ಮಗ ಎರಡನೇ ಬಲ್ಲಾಳನು ಹೊಯ್ಸಳ ಸಿಂಹಾಸನವನ್ನು ಏರಿದನು. ಹಾಸನ ತಾಲೂಕಿನಲ್ಲಿ ಹೊಯ್ಸಳ ಅರಸರು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ ದಾಖಲಾಗಿರುವ ಶಾಸನಗಳಲ್ಲಿ ಅತೀ ಹೆಚ್ಚಿನ ಶಾಸನಗಳು ಕಂಡುಬರುವುದು ಎರಡನೇ ಬಲ್ಲಾಳನ ಆಳ್ವಿಕೆಯ ಕಾಲಘಟ್ಟದಲ್ಲಿ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ. ಕ್ರಿ.ಶ.1173ರಲ್ಲಿ ಬಲ್ಲಾಳನ ಪಟ್ಟಾಭಿಷೇಕದ ದಿನದಂದೇ

ಕೋರವಂಗಲದಲ್ಲಿ ಬೂಚಿರಾಜನಿಂದ ಬೂಚೇಶ್ವರ ದೇವಾಲಯ ಹಾಗೂ ಮರ್ಕುಲಿ ಗ್ರಾಮದಲ್ಲಿ ಸಂಧಿವಿಗ್ರಹಿ ಬೂಚಿಮಯ್ಯನಿಂದ ತ್ರಿಕೂಟ ಜೈನ ಬಸದಿಯು ನಿರ್ಮಾಣವಾಗಿರುವುದು ಒಂದು ವಿಶೇಷ ಅಂಶವಾಗಿದೆ. ಹಾಗೂ ಈ ಎರಡು ದೇವಾಲಯಗಳ ನಿರ್ಮಾತೃಗಳ ಹೆಸರು ಒಂದೇ ಎಂಬಂತೆ ಕಂಡುಬಂದರೂ ಸಹ ಇವರು ಬೇರೆ ಬೇರೆ ವ್ಯಕ್ತಿಗಳೆಂದು ಅಲ್ಲಿನ ಶಾಸನ ಪಠ್ಯದಿಂದ ತಿಳಿಯುತ್ತದೆ. ಹೆರಗು ಗ್ರಾಮದ ಕ್ರಿ.ಶ.1218ರ ಶಾಸನವು ಎರಡನೇ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಜಯಭಟ್ಟಯ್ಯ ನಾಯಕನು ಜೈತನಾರಾಯಣ ಎಂಬ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ. ಎರಡನೇ ಬಲ್ಲಾಳನ ನಂತರ ಎರಡನೇ ನರಸಿಂಹನು ಹೊಯ್ಸಳ ಸಿಂಹಾಸನವನ್ನೇರಿ ಹಾಸನ ತಾಲೂಕಿನಲ್ಲಿಯೂ ಆಳ್ವಿಕೆ ನಡೆಸಿ ದೊಡ್ಡಗದ್ದವಳ್ಳಿ ಲಕ್ಷ್ಮಿದೇವಿ, ಶಾಂತಿಗ್ರಾಮದ ವರದ ನರಸಿಂಹ ದೇವಾಲಯಗಳಿಗೆ ಮತ್ತು ಹಿರಿಯ ಅಗ್ರಹಾರವಾಗಿದ್ದ ಅರುಂಧತೀಪುರಕ್ಕೆ (ಹಿರಿಕಡಲೂರು) ದಾನ ನೀಡಿರುವ ಅಂಶಗಳು ಇಲ್ಲಿನ ಶಾಸನಗಳಿಂದ ತಿಳಿದುಬಂದಿದೆ. ಆದರೆ ಈತನ ಕಾಲದಲ್ಲಿ ಯಾವುದೇ ಪ್ರಮುಖ ದೇವಾಲಯಗಳ ನಿರ್ಮಾಣ ತಾಲೂಕಿನಲ್ಲಿ ಕಂಡುಬರುವುದಿಲ್ಲ. ಎರಡನೇ ನರಸಿಂಹನ ನಂತರ ಸೋಮೇಶ್ವರನು ಹೊಯ್ಸಳ ರಾಜ್ಯದ ಚುಕ್ಕಾಣಿ ಹಿಡಿದನಾದರೂ ಹಾಸನ ತಾಲೂಕಿನಲ್ಲಿ ಈತನು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ ಕೇವಲ ಎರಡು ಶಾಸನಗಳು ಮಾತ್ರ ಕಂಡುಬಂದಿದ್ದು, ಇದರಲ್ಲಿ ಸಾಲಗಾಮೆ ಗ್ರಾಮದ ಶಾಸನವು ಈತನು ಕಣ್ಣಾನೂರಿನಿಂದ ಆಳ್ವಿಕೆ ಮಾಡುತ್ತಿದ್ದನೆಂಬ ಅಂಶವನ್ನು ಉಲ್ಲೇಖಿಸಿದೆ. ಸೋಮೇಶ್ವರನ ನಂತರ ಮೂರನೇ ನರಸಿಂಹ ಹಾಗೂ ಮೂರನೇ ಬಲ್ಲಾಳ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿ ವಿವಿಧ ದೇವಾಲಯಗಳಿಗೆ ಮತ್ತು ಕೆರೆಕಟ್ಟೆಗಳ ನಿರ್ಮಾಣಕ್ಕೆ ದಾನ ನೀಡಿದ ಅಂಶಗಳು ಇವರ ಶಾಸನಗಳಿಂದ ತಿಳಿದುಬಂದಿದೆ.

ಹೊಯ್ಸಳರು ಆಡಳಿತದ ಅನುಕೂಲಕ್ಕಾಗಿ ರಾಜ್ಯವನ್ನು ವಿವಿಧ ಆಡಳಿತ ವಿಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದು, ಅವುಗಳಲ್ಲಿ 'ನೀರ್ಗುಂದ' ಮತ್ತು 'ಸೀಗೆನಾಡುಗಳು' ಹಾಸನ ತಾಲೂಕಿನ ಪ್ರಮುಖ ಆಡಳಿತ ವಿಭಾಗಗಳಾಗಿದ್ದವು. ಹಾಗೂ ಸಾಲಗಾಮೆ, ನಿಟ್ಟೂರು, ಹೊನ್ನಾವರ, ಹಿರಿಕಡಲೂರು, ಕೋರವಂಗಲ, ಶಾಂತಿಗ್ರಾಮ ಮತ್ತು ಗೊರೂರು ಗ್ರಾಮಗಳು ಪ್ರಮುಖ ಅಗ್ರಹಾರಗಳಾಗಿದ್ದು ಹೆಚ್ಚಿನ ಸಂಖ್ಯೆಯ ಹೊಯ್ಸಳ ದೇವಾಲಯಗಳು ಈ ಪ್ರದೇಶಗಳಲ್ಲೇ ನಿರ್ಮಾಣವಾಗಿರುವುದು ವಿಶೇಷವಾಗಿದೆ.

ಈ ತಾಲೂಕಿನ ಹೊಯ್ಸಳ ದೇವಾಲಯಗಳ ಬಗ್ಗೆ ಹೇಳುವುದಾದರೆ ಬಹುಪಾಲು ದೇವಾಲಯಗಳು ಸೋಪುಗಲ್ಲಿನಿಂದ (ಕ್ಲೋರೈಟಿಕ್ ಸಿಸ್ಟ್) ನಿರ್ಮಾಣವಾಗಿವೆ. ಆದರೆ ಇವರ ಆಳ್ವಿಕೆಯ ನಂತರ ದೇವಾಲಯಗಳ ಜೀರ್ಣೋದ್ಧಾರದ ಸಂದರ್ಭದಲ್ಲಿ ಕಣಶಿಲೆಯನ್ನು

(ಗ್ರಾನೈಟ್) ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ದೇವಾಲಯಗಳ ಹಂಚಿಕೆಯ ಪ್ರಮಾಣವನ್ನು ಗಮನಿಸಿದಾಗ ಅತೀ ಹೆಚ್ಚಿನ ಸಂಖ್ಯೆಯ ದೇವಾಲಯಗಳು ದುದ್ದ ಮತ್ತು ಶಾಂತಿಗ್ರಾಮ ಹೋಬಳಿಯಲ್ಲಿ ಕಂಡುಬರುತ್ತವೆ. ಇಲ್ಲಿ ಶೈವ ಮತ್ತು ವೈಷ್ಣವ ದೇವಾಲಯಗಳು ಹೆಚ್ಚು ಕಡಿಮೆ ಸಮಾನ ಸಂಖ್ಯೆಯಲ್ಲಿ ಕಂಡುಬಂದರೆ ಜೈನ ಬಸದಿಗಳು ತೀರಾ ವಿರಳವೆಂದೇ ಹೇಳಬಹುದು. ಶೈವ ದೇವಾಲಯಗಳಲ್ಲಿ ಪ್ರಾಚೀನ ದೇವಾಲಯವಾಗಿ ಗುಡ್ಡದ ತೆರಣ್ಯ ಗ್ರಾಮದ ಸೋಮೇಶ್ವರ ದೇವಾಲಯವು ತೀರಾ ಸರಳವಾಗಿ ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ. ತಾಲೂಕಿನ ಹೊಯ್ಸಳ ದೇವಾಲಯಗಳ ಲಕ್ಷಣಗಳನ್ನು ಗಮನಿಸಿದಾಗ ಇವು ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿವೆ ಹಾಗೂ ಕೆಲವು ದೇವಾಲಯಗಳು ಪ್ರಾಕಾರವನ್ನೂ ಸಹ ಹೊಂದಿವೆ. ಊರ್ಧ್ವಮುಖವಾಗಿ ನೋಡಿದಾಗ ದೇವಾಲಯಗಳು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿಗಳನ್ನು ಹೊಂದಿದ್ದು, ಷಡ್ವರ್ಗ ಕ್ರಮದಲ್ಲಿಯೇ ನಿರ್ಮಾಣವಾಗಿವೆ. ಕೆಲವು ದೇವಾಲಯಗಳಿಗೆ ಶಿಖರ ಕಂಡುಬಂದರೆ ಕೆಲವು ದೇವಾಲಯಗಳಿಗೆ ಶಿಖರ ಇರುವುದಿಲ್ಲ. ಕೋರವಂಗಲದ ಬೂಚೇಶ್ವರ ದೇವಾಲಯ, ಹೊನ್ನಾವರದ ಕೇಶವ, ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳು ಅತ್ಯಂತ ಆಕರ್ಷಕವಾದ ಭಿತ್ತಿ ಶಿಲ್ಪಗಳ ಅಲಂಕರಣೆಯನ್ನು ಹೊಂದಿದ್ದರೆ, ದೊಡ್ಡಗದ್ದವಳ್ಳಿ ಲಕ್ಷ್ಮಿದೇವಿ, ಶಾಂತಿಗ್ರಾಮದ ಧರ್ಮೇಶ್ವರ ಮತ್ತು ಕೋರವಂಗಲದ ಗೋವಿಂದೇಶ್ವರ ದೇವಾಲಯಗಳು ಸ್ತಂಭಪಂಜರ ಮತ್ತು ಕೋಷ್ಟಪಂಜರಗಳಿಂದ ಅಲಂಕರಿಸಲ್ಪಟ್ಟಿವೆ. ಶಾಂತಿಗ್ರಾಮದ ವರದ ನರಸಿಂಹ, ಹೆರಗಿನ ಕೀರ್ತಿನಾರಾಯಣ, ಗೊರೂರಿನ ತ್ರಿಕೂಟೇಶ್ವರ, ಸಾಲಗಾಮೆಯ ಕೇಶವ, ಹರಿಹರಪುರದ ಹರಿಹರೇಶ್ವರ ಹಾಗೂ ಹಿರಿಕಡಲೂರಿನ ಕೇಶವ ದೇವಾಲಯಗಳು ಸರಳವಾದ ಬ್ರಹ್ಮಕಾಂತ ಭಿತ್ತಿಪಾದಗಳ ರಚನೆಯನ್ನು ಹೊಂದಿವೆ. ತಾಲೂಕಿನ ದೇವಾಲಯಗಳು ಸಾಮಾನ್ಯವಾಗಿ ದ್ರಾವಿಡ ಮಾದರಿಯ ಶಿಖರಗಳನ್ನು ಹೊಂದಿದ್ದು, ಕೆಲವು ದೇವಾಲಯಗಳು ಅಂದರೆ ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ, ಗೊರೂರಿನ ತ್ರಿಕೂಟೇಶ್ವರ, ಹರಿಹರಪುರದ ಹರಿಹರೇಶ್ವರ, ಹೆರಗಿನ ಕೀರ್ತಿನಾರಾಯಣ, ಹಿರಿಕಡಲೂರಿನ ಕೇಶವ ಇನ್ನೂ ಮುಂತಾದ ದೇವಾಲಯಗಳು ಫಾಂಸಾನ ಶೈಲಿಯ ಶಿಖರಗಳನ್ನು ಹೊಂದಿವೆ.

ಶೈವ ದೇವಾಲಯಗಳಲ್ಲಿ ಕೋರವಂಗಲದ ಬೂಚೇಶ್ವರ ದೇವಾಲಯವು ಬಹಳ ಪ್ರಾಮುಖ್ಯತೆಯನ್ನು ಪಡೆದಿದ್ದು, ದ್ವಿಕೂಟಾಚಲ ಮಾದರಿಯಲ್ಲಿ ಶಿಲ್ಪಗಳ ಸಮೃದ್ಧತೆಯಿಂದ ನಿರ್ಮಾಣವಾಗಿದೆ. ಇದರ ಭಿತ್ತಿಯಲ್ಲಿ ರಾಮಾಯಣ, ಮಹಾಭಾರತ ಮತ್ತು ಪುರಾಣಗಳ ಸನ್ನಿವೇಶಗಳನ್ನು ಉಬ್ಬು ಶಿಲ್ಪಗಳ ಮೂಲಕ ಕೆತ್ತಲಾಗಿದೆ ಹಾಗೂ ಶೈವ ಮತ್ತು ವೈಷ್ಣವ

ಪರಂಪರೆಯ ಲೀಲಾ ಮೂರ್ತಿಗಳನ್ನು ಮತ್ತು ಚತುರ್ವಿಂಶತಿ ಮೂರ್ತಿಗಳನ್ನು ಸುಂದರವಾಗಿ ಖಂಡರಿಸಲಾಗಿದೆ. ಈ ದೇವಾಲಯವು 32 ಶ್ರೀಕಾರ ಸ್ತಂಭಗಳಂದ ಕೂಡಿದ ಮುಖಮಂಟಪವನ್ನು ಹೊಂದಿದ್ದು ಇದರ ಭುವನೇಶ್ವರಿಗಳು ಅತ್ಯಂತ ಆಕರ್ಷಕವಾಗಿ ನಿರ್ಮಿಸಲ್ಪಟ್ಟಿವೆ.

ಮೊಸಳೆ ಗ್ರಾಮದ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳು ಹೊಯ್ಸಳ ಅರಸರ ಉತ್ಕೃಷ್ಟ ಪರಂಪರೆಯನ್ನು ಸಾರುವ ಅವಳ ದೇವಾಲಯಗಳಾಗಿದ್ದು, ತಳವಿನ್ಯಾಸ ಮತ್ತು ಏರು ವಿನ್ಯಾಸದಲ್ಲಿ ಒಂದೇ ಮಾದರಿಯಲ್ಲಿ ನಿರ್ಮಾಣವಾಗಿವೆ. ಎರಡೂ ದೇವಾಲಯಗಳ ನವರಂಗವು ಅತ್ಯಂತ ಆಕರ್ಷಕವಾದ ಭುವನೇಶ್ವರಿಗಳನ್ನು ಹೊಂದಿದ್ದು, ಮಧ್ಯ ಅಂಕಣದ ಭುವನೇಶ್ವರಿಗಳಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಹಾಗೂ ಚೆನ್ನಕೇಶವ ದೇವಾಲಯದ ಮುಖ್ಯ ಭುವನೇಶ್ವರಿಯಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳ ಕೆತ್ತನೆಯು ಕಂಡುಬರುತ್ತದೆ. ನಾಗೇಶ್ವರ ದೇವಾಲಯದ ಭಿತ್ತಿಯಲ್ಲಿ ಶೈವ ಮತ್ತು ಶಾಕ್ತ ಪರಂಪರೆಯನ್ನು ಬಿಂಬಿಸುವ ಶಿಲ್ಪಗಳಿದ್ದರೆ, ಚೆನ್ನಕೇಶವ ದೇವಾಲಯದ ಭಿತ್ತಿಯಲ್ಲಿ ವೈಷ್ಣವ ಪರಂಪರೆಯ ಶಿಲ್ಪಗಳದ್ದೇ ಪ್ರಾಬಲ್ಯ.

ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ ದೇವಾಲಯವು ಹೊಯ್ಸಳ ಕಲೆ ಮತ್ತು ವಾಸ್ತು ಶಿಲ್ಪದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದ್ದು, ಇದು ನಾಲ್ಕು ಗರ್ಭಗುಡಿಗಳನ್ನು ಹೊಂದಿರುವ ಚತುಷ್ಕೂಟ ದೇವಾಲಯವಾಗಿದೆ. ಇದನ್ನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1113ರಲ್ಲಿ ವಜ್ರದ ವ್ಯಾಪಾರಿ ಕುಲ್ಹಣ ರಾಹುತ ಮತ್ತು ಈತನ ಪತ್ನಿ ಸಹಜಾದೇವಿ ನಿರ್ಮಾಣ ಮಾಡಿದರೆಂದು ತಿಳಿದುಬರುತ್ತದೆ. ಈ ದೇವಾಲಯವು ವಾಸ್ತುವಿನ ಪ್ರಕಾರಗಳಾದ ವಿಮಾನ, ಸರ್ವತೋಭದ್ರ, ವೈಷ್ಣವ, ನಳನೀಕ, ಉತ್ತುಂಗ, ವೈರಾಜ, ಗರುಡ, ವರ್ಧಮಾನ, ಶಂಖ, ವೃತ್ತ, ಪುಷ್ಪಕ ಹಾಗೂ ಗೃಹರಾಜ ಎಂಬ ಅಂಶಗಳನ್ನು ಒಳಗೊಂಡಿದ್ದು, ಇದರ ನಿರ್ಮಾತೃಗಳು ಮಲ್ಲೋಜ ಮತ್ತು ಮಾಣಿಯೋಜರೆಂಬುದು ಇಲ್ಲಿನ ಶಾಸನದಿಂದ ತಿಳಿದುಬರುತ್ತದೆ. ಈ ದೇವಾಲಯದಲ್ಲಿ ಉತ್ತರ ದಿಕ್ಕಿನ ಗರ್ಭಗುಡಿಯಲ್ಲಿ ಕಾಳಿ ವಿಗ್ರಹ, ಪೂರ್ವ ದಿಕ್ಕಿನ ಗರ್ಭಗೃಹದಲ್ಲಿ ಲಕ್ಷ್ಮಿದೇವಿ, ದಕ್ಷಿಣ ದಿಕ್ಕಿನಲ್ಲಿ ಭೈರವ ಮತ್ತು ಪಶ್ಚಿಮ ದಿಕ್ಕಿನ ಗರ್ಭಗೃಹದಲ್ಲಿ ಭೂತನಾಥ ಲಿಂಗಗಳು ಪ್ರತಿಷ್ಠಾಪಿತವಾಗಿದ್ದು, ಲಕ್ಷ್ಮಿದೇವಿ ಗರ್ಭಗೃಹದ ಶಿಖರವು ದ್ರಾವಿಡ ಮಾದರಿಯಲ್ಲಿದ್ದರೆ ಉಳಿದ ಗರ್ಭಗುಡಿಗಳ ಶಿಖರಗಳು ಫಾಂಸಾನ ಮಾದರಿಯಲ್ಲಿವೆ. ಈ ದೇವಾಲಯಕ್ಕೆ ವಿಶಾಲವಾದ ಪ್ರಾಕಾರವಿದ್ದು, ಇದರ ಮೂಲೆಗಳಲ್ಲಿ ನಾಲ್ಕು ಸಣ್ಣ ಗುಡಿಗಳ ನಿರ್ಮಾಣವಿದೆ. ಹೊನ್ನಾವರದ ಕೇಶವ ದೇವಾಲಯವು ಹೊಯ್ಸಳರ ಪ್ರಮುಖ

ಕಲಾಕೃತಿಯಾಗಿದ್ದು, ಇದನ್ನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಕೋಣೆಯ ಶಂಕರ ದಂಡನಾಥ ಎಂಬಾತನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ದೇವಾಲಯದ ಭಿತ್ತಿಯು ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು, ದೇವ–ದೇವತೆಯರ ಶಿಲ್ಪಗಳು, ಸುರುಳಿ ಬಳ್ಳಿಗಳು ಮತ್ತು ಸ್ತಂಭ ಪಂಜರಗಳ ಅಲಂಕಾರಿಕ ಕೆತ್ತನೆಯಿಂದ ಕೂಡಿದೆ. ಇದರ ಶಿಖರವು ಮೂರು ತಲಗಳನ್ನು ಹೊಂದಿದ್ದು, ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾಗಿದೆ.

ಹರಿಹರಪುರದ ಹರಿಹರೇಶ್ವರ ದೇವಾಲಯವು ಹೊಯ್ಸಳರ ಕಾಲದ ಒಂದು ಪ್ರಮುಖ ತ್ರಿಕೂಟ ದೇವಾಲಯವಾಗಿದ್ದು, ದುರಾದೃಷ್ಟವಶಾತ್ ಈ ದೇವಾಲಯದ ಮೂರು ಗರ್ಭಗುಡಿಯಲ್ಲಿ ಇಂದು ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಪ್ರಾರಂಭದಲ್ಲಿ ಈ ದೇವಾಲಯದ ಗರ್ಭಗುಡಿಯಲ್ಲಿ ಕ್ರಮವಾಗಿ ಹರಿಹರ, ಅನಂತಶಯನ ಮತ್ತು ಸರಸ್ವತಿ ವಿಗ್ರಹಗಳಿದ್ದವೆಂದು ತಿಳಿದುಬರುತ್ತದೆ. ಆದರೆ ವಸಾಹತುಶಾಹಿಗಳ ಆಳ್ವಿಕೆಗೆ ಒಳಪಟ್ಟಿದ್ದಂತಹ ಸಂದರ್ಭದಲ್ಲಿ ಡೆನ್ಮಾರ್ಕಿನ ಎಡ್ವರ್ಡ್ ಲೊವಿನ್‌ತಲ್ ಎಂಬ ಅಧಿಕಾರಿಗೆ ಹೊಯ್ಸಳ ಶಿಲ್ಪಗಳನ್ನು ಸಂಗ್ರಹಿಸುವ ಹವ್ಯಾಸವಿದ್ದುದರಿಂದ ೧೮೯೭ರ ನಂತರ ಈ ದೇವಾಲಯದ ಮೂರು ವಿಗ್ರಹಗಳನ್ನು ತೆಗೆದುಕೊಂಡು ಹೋಗಿ ಡೆನ್ಮಾರ್ಕಿನ ಕೊಪೆನ್ ಹೆಗನ್‌ನ ನ್ಯಾಷನಲ್ ಮ್ಯೂಸಿಯಂನಲ್ಲಿ ಇಟ್ಟನೆಂದು ತಿಳಿದುಬರುತ್ತದೆ. ಪ್ರಸ್ತುತ ಈ ಮ್ಯೂಸಿಯಂನಲ್ಲಿ ಅತ್ಯಂತ ಸುಂದರವಾದ ಅನಂತಶಯನ ಮೂರ್ತಿಯನ್ನು ನೋಡಬಹುದಾಗಿದೆ.

ಹಾಸನ ತಾಲೂಕಿನ ಹೊಯ್ಸಳರ ಜೈನ ಬಸದಿಗಳ ಬಗ್ಗೆ ಹೇಳುವುದಾದರೆ ಈ ಬಸದಿಗಳು ಇಂದು ಕೇವಲ ಶಾಸನ ಉಲ್ಲೇಖಕ್ಕೆ ಮಾತ್ರ ಸೀಮಿತವಾಗಿವೆ. ಅಂದರೆ ಇಲ್ಲಿನ ಬಹುಪಾಲು ಬಸದಿಗಳು ಶಿಥಿಲವಾಗಿವೆ ಮತ್ತು ನಾಶವಾಗಿವೆ. ಪ್ರಸ್ತುತ ಮರ್ಕುಲಿಯ ತ್ರಿಕೂಟ ಬಸದಿಯು ಸುಸ್ಥಿತಿಯಲ್ಲಿದ್ದರೂ ಶಾಂತಿಗ್ರಾಮದ ಶಾಂತಿನಾಥ ಬಸದಿಯು ಹೊಸದಾಗಿ ನಿರ್ಮಾಣಗೊಂಡಿದೆ. ಹೆರಗಿನ ಪಾರ್ಶ್ವನಾಥ ಬಸದಿಯು ಭಗ್ನಾವಶೇಷ ಸ್ಥಿತಿಯಲ್ಲಿದ್ದು, ಇದರ ಕೆಲವು ಭಾಗಗಳನ್ನು ಇದೇ ಗ್ರಾಮದ ಕಮಟೇಶ್ವರ ದೇವಾಲಯದ ದ್ವಾರಬಂಧದ ಲಲಾಟ ಬಿಂಬದಲ್ಲಿ ಜಿನ ಶಿಲ್ಪವಿರುತ್ತದೆ. ಆದರೆ ಶಾಸ್ತ್ರಗ್ರಂಥಗಳ ಪ್ರಕಾರ ಶೈವ ಅಥವಾ ವೈಷ್ಣವ ದೇವಾಲಯಗಳ ದ್ವಾರಬಂಧದಲ್ಲಿ ಜೈನ ಶಿಲ್ಪಗಳು ಕಂಡುಬರುವುದಿಲ್ಲ. ಆದ್ದರಿಂದ ಕಮಟೇಶ್ವರ ದೇವಾಲಯದ ದ್ವಾರಬಂಧವು ಮೂಲದಲ್ಲಿ ಪಾರ್ಶ್ವನಾಥ ಬಸದಿಯದ್ದು ಎಂಬುದು ಖಚಿತವಾಗುತ್ತದೆ. ಮುಗುಳೂರಿನಲ್ಲಿ ಎರಡು ಜೈನ ಬಸದಿಗಳು ನಿರ್ಮಾಣವಾಗಿದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಈ ಎರಡು ಬಸದಿಗಳಲ್ಲಿ ಒಂದು ಬಸದಿ ಶಿಥಿಲಾವಸ್ಥೆಯಲ್ಲಿದ್ದರೆ ಇನ್ನೊಂದು ಬಸದಿ ಕಣ್ಮರೆಯಾಗಿದೆ. ದುರಂತವೆಂದರೆ ಇಂದು ಈ

ಮುಗುಳೂರು ಗ್ರಾಮವೇ ಕಂಡುಬರದಿರುವುದು ಒಂದು ಆಶ್ಚರ್ಯಕರ ಸಂಗತಿಯಾಗಿದೆ. ಸರ್ಕಾರದ ಕಂದಾಯ ದಾಖಲೆಗಳಲ್ಲಿರುವ ಈ ಗ್ರಾಮ ವಾಸ್ತವದಲ್ಲಿ ಕಂಡುಬರುವುದಿಲ್ಲ.

ಒಂದು ಪ್ರದೇಶದ ಸ್ಥಳೀಯ ಇತಿಹಾಸವನ್ನು ತಿಳಿಯುವಲ್ಲಿ ವೀರಗಲ್ಲು ಸ್ಮಾರಕಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಹೊಯ್ಸಳರ ಆಳ್ವಿಕೆಯಲ್ಲಿ ಹಾಸನ ತಾಲೂಕಿನಾದ್ಯಂತ ಸಾಕಷ್ಟು ಸಂಖ್ಯೆಯಲ್ಲಿ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ತಿಳಿಯುವುದಾದರೆ, ಗೌಡಗೆರೆ ಗ್ರಾಮದ ಕ್ರಿ.ಶ.1173ರ ವೀರಗಲ್ಲು ಶಾಸನವು ಗೌಡಗೆರೆ ಗ್ರಾಮದ ತುರುಗಳನ್ನು ಅಪಹರಿಸಲು ಬಂದಾಗ ವೀರಣ ಮತ್ತು ಬಂಕ ಎಂಬುವವರು ಹೋರಾಡಿ ಮಡಿದಾಗ ಮಾರಗಾವುಂಡನ ಮಗ ಮುದ್ದಯನು ವೀರಗಲ್ಲನ್ನು ನಿಲ್ಲಿಸಿದನೆಂಬ ಮಾಹಿತಿಯನ್ನು ನೀಡುತ್ತದೆ. ಕಿತ್ತನೆಕೆರೆ ಗ್ರಾಮದ ಕ್ರಿ.ಶ.1196ರ ವೀರಗಲ್ಲು ಶಾಸನವು ಹಾರುವನಹಳ್ಳಿಯ ದಾರಿಯಲ್ಲಿ ಹೆಂಗಸರ ಮೇಲೆ ಮಾನಭಂಗ ಪ್ರಯತ್ನವಾಗುತ್ತಿರುವಾಗ ಚಟ್ಟಗಾವುಂಡರ ಮಾಳಯ್ಯನ ಮಗ ಸೋಮೆಯನೂ ಅವನ ಸಂಗದಲ್ಲಿದ್ದ ಬೆಚ್ಚಯ್ಯ ಎಂಬಾತನು ಹೆಣ್ಣು ಮಕ್ಕಳನ್ನು ರಕ್ಷಿಸಿ ಮಡಿದ ವಿಚಾರವನ್ನು ತಿಳಿಸುತ್ತದೆ. ಕ್ರಿ.ಶ.1174ರ ಹೊನ್ನಾವರ ಗ್ರಾಮದ ವೀರಗಲ್ಲು ಶಾಸನವು ಹೊನ್ನಾವರ ಮತ್ತು ನೀರ್ಗುಂದ ಗಡಿ ಕಾಳಗದಲ್ಲಿ ಭೀಮನ ಮಗ ಹೊನ್ನಗಾವುಂಡನು ಮರಣ ಹೊಂದಿದ ವಿಚಾರವನ್ನು ಉಲ್ಲೇಖಿಸಿದೆ. ಕುದುರೆ ಗುಂಡಿ ಗ್ರಾಮದ ಕ್ರಿ.ಶ.1140ರ ವೀರಗಲ್ಲು ಶಾಸನವು ಹೊಯ್ಸಳ ವಿಷ್ಣುವರ್ಧನನು ಹಾನಗಲ್ಲಿನ ಕೋಟೆಯನ್ನು ವಶಪಡಿಸಿಕೊಂಡಾಗ ಈ ಕಾಳಗದಲ್ಲಿ ಬಾಳುಗಿಯ ಚಟ್ಟಯ್ಯ ಎಂಬಾತನು ಮರಣ ಹೊಂದಿದ ಅಂಶವನ್ನು ತಿಳಿಸಿದೆ. ದುದ್ದ ಗ್ರಾಮದ ಕ್ರಿ.ಶ.1276ರ ವೀರಗಲ್ಲು ಶಾಸನವು ಸಾಳುವ ತಿಕ್ಕಮನ ವಿರುದ್ಧದ ಯುದ್ಧದಲ್ಲಿ ಹಿರಿಯ ಬಯಿಚೆಯನಾಯಕನ ಮಗ ಅಂಕಣನು ಮರಣ ಹೊಂದಿದ ಅಂಶವನ್ನು ತಿಳಿಸುತ್ತದೆ. ಇದೇ ಗ್ರಾಮದ ಕ್ರಿ.ಶ.1310ರ ವೀರಗಲ್ಲು ಶಾಸನವು ಬಹಳ ಪ್ರಮುಖವಾಗಿದ್ದು, ದೋರಸಮುದ್ರದ ಮೇಲೆ ಮುಸ್ಲಿಮರು (ಮಲ್ಲಿಕಾಫರ್) ದಾಳಿ ಮಾಡಿದಾಗ ದುದ್ದನ ನಡೆಗೋಟೆಯ ಮಾಚಯನಾಯಕನ ಮಗ ಬಯಿಚಯ ನಾಯಕನು ವೀರಾವೇಷದಿಂದ ಹೋರಾಡಿ ಮಡಿದಾಗ ಈತನ ಮಗ ಮಾಚಯನು ವೀರಗಲ್ಲನ್ನು ನಿಲ್ಲಿಸಿದನೆಂದು ತಿಳಿದುಬರುತ್ತದೆ. ಹೀಗೆ ಹಾಸನ ತಾಲೂಕಿನಲ್ಲಿ ಗೋವುಗಳನ್ನು ರಕ್ಷಿಸಲು, ಮಹಿಳೆಯರ ಮಾನ ಕಾಪಾಡಲು, ಕೋಟೆಗಳನ್ನು ವಶಪಡಿಸಿಕೊಳ್ಳಲು, ಊರಿನ ಗಡಿಯ ವಿಚಾರಕ್ಕಾಗಿ ಹಾಗೂ ರಾಜ್ಯವನ್ನು ಶತ್ರುಗಳಿಂದ ರಕ್ಷಿಸಲು ಇನ್ನೂ ಮುಂತಾದ ಕಾರಣಗಳಿಗೆ ಮಡಿದ ವೀರರ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ಹಾಕಿಸಿದ್ದು, ಇವು ಹೊಯ್ಸಳ ಅರಸರ ಆಳ್ವಿಕೆಗೆ ಸಾಕ್ಷಿಯಾಗಿ ಕಂಡುಬರುತ್ತವೆ. ಹಾಸನ ತಾಲೂಕಿನ ಹೊಯ್ಸಳರ ಶಿಲ್ಪಗಳ ಬಗ್ಗೆ ತಿಳಿಸುವುದಾದರೆ ಇವರ ಕಲೆ ಮತ್ತು

ವಾಸ್ತುಶಿಲ್ಪದ ಪ್ರೌಢಿಮೆ ನಿಂತಿರುವುದೇ ಇವರ ಮೂರ್ತಿ ಶಿಲ್ಪಗಳು ಮತ್ತು ಭಿತ್ತಿ ಶಿಲ್ಪಗಳಿಂದ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ. ಇವರ ಶಿಲ್ಪ ರಚನಾ ಕ್ರಮವು ಅದ್ವಿತೀಯವಾಗಿದ್ದು ಎಂತಹವರನ್ನು ಬೆರಗುಗೊಳಿಸುತ್ತದೆ. ಹೊಯ್ಸಳರ ಶೈವ ದೇವಾಲಯಗಳ ಲಿಂಗಗಳ ಬಗ್ಗೆ ಹೇಳುವುದಾದರೆ ಇವು ಎತ್ತರವಾದ ಪೀಠದ ಮೇಲೆ ನಿರ್ಮಾಣವಾಗಿವೆ. ಲಿಂಗದ ರುದ್ರ ಭಾಗದಲ್ಲಿ ಬ್ರಹ್ಮಸೂತ್ರ ರೇಖೆಗಳಿರುವ ಲಿಂಗಗಳು ನಿಟ್ಟೂರಿನ ಸೋಮೇಶ್ವರ, ಮೊಸಳೆಯ ನಾಗೇಶ್ವರ ಮತ್ತು ಹೆರಗಿನ ಕಮಟೇಶ್ವರ ದೇವಾಲಯಗಳಲ್ಲಿ ಕಂಡುಬಂದಿವೆ. ಶೈವ ದೇವಾಲಯಗಳಲ್ಲಿ ನಂದಿ ಶಿಲ್ಪವು ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಅತ್ಯಂತ ಸುಂದರವಾಗಿ ಅಲಂಕರಿಸಲ್ಪಟ್ಟ ನಂದಿ ಶಿಲ್ಪವು ಮುದುಗೆರೆಯ ಓಂಕಾರೇಶ್ವರ ದೇವಾಲಯದ ಬಳಿ ಕಂಡುಬರುತ್ತದೆ. ಶೈವ ಪರಂಪರೆಯಲ್ಲಿ ಗಣಪತಿಗೆ ವಿಶೇಷ ಸ್ಥಾನವಿದ್ದು, ಈ ಗಣಪತಿಯ ಶಿಲ್ಪಗಳು ಮೊಸಳೆಯ ನಾಗೇಶ್ವರ ಮತ್ತು ಕೋರವಂಗಲದ ಬೂಚೇಶ್ವರ ದೇವಾಲಯದ ನವರಂಗದ ದೇವಕೋಷ್ಟಗಳಲ್ಲಿ ಕಂಡುಬರುತ್ತವೆ. ಹಾಗೂ ಅತ್ಯಂತ ಸುಂದರವಾದ ನರ್ತನ ಗಣಪತಿಯ ಶಿಲ್ಪವು ಕೋರವಂಗಲದ ಸೂರ್ಯ ಗುಡಿಯ ದಕ್ಷಿಣ ದಿಕ್ಕಿನ ಹೊರ ಭಿತ್ತಿಯಲ್ಲಿ ಉಬ್ಬು ಶಿಲ್ಪವಾಗಿ ರಚನೆಯಾಗಿದೆ. ಶೈವ ಮತ್ತು ವೈಷ್ಣವ ಪರಂಪರೆಯೆರಡರಲ್ಲೂ ಸರಸ್ವತಿಗೆ ವಿಶೇಷ ಸ್ಥಾನವಿದ್ದು ಈಕೆಯ ಅತ್ಯಂತ ಸುಂದರವಾದ ಹಾಗೂ ಸರ್ವಾಭರಣಭೂಷಿತವಾದ ಶಿಲ್ಪಗಳು ಕೋರವಂಗಲದ ಬೂಚೇಶ್ವರ ಮತ್ತು ಮೊಸಳೆಯ ಚೆನ್ನಕೇಶವ ದೇವಾಲಯದ ದೇವಕೋಷ್ಟಗಳಲ್ಲಿ ಬಿಡಿ ಶಿಲ್ಪವಾಗಿ ಪ್ರತಿಷ್ಠಾಪನೆಯಾಗಿವೆ. ಮಾತೃದೇವೋಪಾಸನೆಯ ಅಡಿಯಲ್ಲಿ ನಿರ್ಮಾಣವಾದ ಸಪ್ತಮಾತೃಕೆಯರ ಶಿಲ್ಪಗಳು ಗೊರೂರಿನ ತ್ರಿಕೂಟೇಶ್ವರ, ಕೋರವಂಗಲದ ಬೂಚೇಶ್ವರ ಮತ್ತು ಮೊಸಳೆಯ ನಾಗೇಶ್ವರ ಹಾಗೂ ಶಾಂತಿಗ್ರಾಮದ ಧರ್ಮೇಶ್ವರ ದೇವಾಲಯಗಳಲ್ಲಿ ಕಂಡುಬಂದಿವೆ. ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದ ಕಾಳಿ ವಿಗ್ರಹವು ಅತ್ಯಂತ ವಿಶಿಷ್ಟವಾಗಿದ್ದು, ಇದರಲ್ಲಿ ಬೇತಾಳದ ಶಿಲ್ಪವನ್ನು ಹೊಂದಿರುವ ಪೀಠದ ಮೇಲೆ ಕಾಳಿಯು ಸುಖಾಸನದಲ್ಲಿ ಕುಳಿತಿದ್ದಾಳೆ. ಈಕೆಯು ಬಲಪಾರ್ಶ್ವದ ಕೈಗಳಲ್ಲಿ ಬಾಣ, ಕತ್ತಿ, ತ್ರಿಶೂಲ ಮತ್ತು ಪರಶು ಹಾಗೂ ಎಡ ಭಾಗದ ಕೈಗಳಲ್ಲಿ ಢಮರು, ಪಾಶ, ಬಿಲ್ಲು ಮತ್ತು ಬಟ್ಟಲನ್ನು ಹಿಡಿದಿದ್ದು, ಸರ್ವಾಭರಣ ಭೂಷಿತಳಾಗಿ ಜಟಾಮುಕುಟವನ್ನು ಹೊಂದಿದ್ದಾಳೆ. ಇದೇ ದೇವಾಲಯದ ಎರಡು ಬೇತಾಳ ಶಿಲ್ಪಗಳು ಅತ್ಯಂತ ವಿಶಿಷ್ಟವಾಗಿ ರೂಪುಗೊಂಡಿವೆ. ಇವುಗಳು ಆರೂವರೆ ಅಡಿ ಎತ್ತರವನ್ನು, ಅಗಲವಾದ ಕಣ್ಣುಗಳು, ದೊಡ್ಡದಾದ ಕಿವಿಯೋಲೆಗಳು, ಉದ್ದವಾದ ಕೂದಲನ್ನು ಹೊಂದಿದ್ದು, ನಾಲಿಗೆಯನ್ನು ಉದ್ದವಾಗಿ ಹೊರಕ್ಕೆ ಚಾಚಿ ಅಸ್ಥಿಪಂಜರದ ರೀತಿಯಲ್ಲಿ ನಗ್ನವಾಗಿ ಕಂಡುಬರುತ್ತವೆ. ಇದರಲ್ಲಿ ಒಂದು ಬೇತಾಳವು ಬಲಗೈಯಲ್ಲಿ ಕತ್ತಿಯನ್ನು ಎಡಗೈಯಲ್ಲಿ

ಕತ್ತರಿಸಿದ ರುಂಡವನ್ನು ಹಿಡಿದು ಉದ್ದವಾಗಿ ನಾಲಿಗೆಯನ್ನು ಹೊರಚಾಚಿದೆ. ಬೂಚೇಶ್ವರ ದೇವಾಲಯದ ಸೂರ್ಯ ವಿಗ್ರಹವು ಅತ್ಯಂತ ಸುಂದರವಾದ ಮೂರ್ತಿ ಶಿಲ್ಪವಾಗಿದ್ದು, ಈ ಶಿಲ್ಪವು ನಾಲ್ಕುವರೆ ಅಡಿ ಎತ್ತರವನ್ನು ಹೊಂದಿದೆ. ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದು, ಹಾರ, ಕಂಠೀಹಾರ, ಯಜ್ಞೋಪವೀತ, ಉದರಬಂಧ, ರತ್ನಾಂಗುಲೀಯಕಗಳು, ಪಾದಸರ ಮತ್ತು ಕಿರೀಟಮುಕುಟವನ್ನು ಹೊಂದಿದೆ. ತಾಲೂಕಿನ ಹೊಯ್ಸಳರ ಕಾಲದ ಎಲ್ಲಾ ಕೇಶವ ದೇವಾಲಯಗಳ ಕೇಶವ ಮೂರ್ತಿ ಶಿಲ್ಪಗಳು ಅತ್ಯಂತ ಸುಂದರವಾಗಿ ನಿರ್ಮಿಸಲ್ಪಟ್ಟಿದ್ದು, ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಹೊಂದಿವೆ. ಹೊನ್ನಾವರದ ಕೇಶವ ಮೂರ್ತಿ ಶಿಲ್ಪವು 6 ಅಡಿ ಎತ್ತರವನ್ನು ಹೊಂದಿದ್ದು, ಶಂಖ, ಚಕರ, ಗದಾ ಮತ್ತು ಪದ್ಮವನ್ನು ಹಿಡಿದು, ಕಂಠೀಹಾರ, ಹಾರ, ಕೇಯೂರ, ಉದರಬಂಧ, ಕಂಕಣ, ರತ್ನಾಂಗುಲೀಯಕಗಳು, ಯಜ್ಞೋಪವೀತ ಮತ್ತು ವನಮಾಲೆಯನ್ನು ಧರಿಸಿದೆ. ಹಾಗೂ ಇದರ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಿದ್ದಾರೆ. ಹಿರಿಕಡಲೂರಿನ ಚೆನ್ನಕೇಶವ ದೇವಾಲಯದ ಕೇಶವನ ವಿಗ್ರಹವು ಅತ್ಯಂತ ಆಕರ್ಷಕವಾದ ಕಲಾಕೃತಿಯಾಗಿದ್ದು, ಇದು $1^1/_2$ ಅಡಿ ಗರುಡ ಪೀಠದ ಮೇಲೆ ಭೂದೇವಿ ಶ್ರೀದೇವಿ ಸಮೇತನಾಗಿ ಸಮಭಂಗಿಯಲ್ಲಿ ನಿಂತಿದ್ದು, $4^1/_2$ ಅಡಿ ಎತ್ತರವನ್ನು ಹೊಂದಿದೆ. ಈ ಶಿಲ್ಪವು ಕಂಠಿಹಾರ, ಮುಕ್ತಾಹಾರ, ಭುಜಕೀರ್ತಿ, ಕೇಯೂರ, ಉದರಬಂಧ, ಹಸ್ತಕಟಕ, ಯಜ್ಞೋಪವೀತ, ವನಮಾಲೆ, ಪಾದಕಟಕ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದು, ಬಲ ಹಿಂಬದಿಯ ಕೈಯಲ್ಲಿ ಶಂಖ, ಮುಂಬದಿಯ ಕೈಯಲ್ಲಿ ಪದ್ಮ ಮತ್ತು ಎಡ ಹಿಂಬದಿಯ ಕೈಯಲ್ಲಿ ಚಕ್ರವನ್ನು ಹಿಡಿದಿದೆ. ಆದರೆ ಎಡ ಮುಂಬದಿಯ ಕೈ ಭಗ್ನವಾಗಿದೆ. ಶಿಲ್ಪದ ಹಿಂಬದಿಯಲ್ಲಿ ಸುಂದರವಾದ ಪ್ರಭಾವಳಿಯಿದ್ದು, ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಲಾಗಿದೆ.

ಹೊಯ್ಸಳ ದೇವಾಲಯಗಳಲ್ಲಿ ಭಿತ್ತಿಯು ಒಂದು ಪ್ರಮುಖ ಆಕರ್ಷಣೀಯ ಭಾಗವಾಗಿದ್ದು, ಇದರಲ್ಲಿ ವಿವಿಧ ಉಬ್ಬು ಶಿಲ್ಪಗಳನ್ನು ಕೆತ್ತುವ ಮೂಲಕ ಅಲಂಕರಿಸಲಾಗಿರುತ್ತದೆ. ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳು ಕೂಡ ಸುಂದರವಾದ ಭಿತ್ತಿ ಶಿಲ್ಪಗಳ ಅಲಂಕರಣದಿಂದ ಕೂಡಿದ್ದು, ನಾಗೇಶ್ವರ ದೇವಾಲಯದ ಭಿತ್ತಿಯಲ್ಲಿ ಶೈವ ಮತ್ತು ಶಾಕ್ತ ಪರಂಪರೆಯನ್ನು ಬಿಂಬಿಸುವ ಚಕ್ರೇಶ್ವರಿ, ಗೌರಿ, ವಜ್ರಭೂತ, ಮಹೇಶ್ವರಿ, ಶಾರದಾ, ದುರ್ಗಾ, ಸರಸ್ವತಿ, ಸದಾಶಿವಮೂರ್ತಿ, ದಕ್ಷಿಣಾಮೂರ್ತಿ ಇನ್ನೂ ಮುಂತಾದ ಶಿಲ್ಪಗಳಿದ್ದರೆ, ಚೆನ್ನಕೇಶವ ದೇವಾಲಯದಲ್ಲಿ ವೈಷ್ಣವ ಪರಂಪರೆಯ ಗರುಡ, ಭೂವರಾಹಮೂರ್ತಿ, ಕಾಳಿಂಗಮರ್ಧನ, ವೇಣುಗೋಪಾಲ, ಗೋವರ್ಧನ ಗಿರಿಧಾರಿ, ಬಲಿಚಕ್ರವರ್ತಿ ಮತ್ತು ವಾಮನ, ತ್ರಿವಿಕ್ರಮ ಇನ್ನೂ

ಮುಂತಾದ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು ಕಂಡುಬರುತ್ತವೆ. ಕೋರವಂಗಲದ ಬೂಚೇಶ್ವರ ದೇವಾಲಯವೂ ಸಹ ಭಿತ್ತಿಯಲ್ಲಿ ಉಬ್ಬು ಶಿಲ್ಪಗಳ ಕೆತ್ತನೆಯನ್ನು ಹೊಂದಿದ್ದು, ಇದರಲ್ಲಿ ರಾಮಾಯಣ, ಮಹಾಭಾರತ ಮತ್ತು ಪುರಾಣದ ಕತೆಗಳನ್ನು ನಿರೂಪಿಸುವ ಶಿಲ್ಪಗಳು ಪ್ರಮುಖವಾಗಿ ಕಂಡುಬರುತ್ತವೆ.

ಹೀಗೆ ಹಾಸನ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪ, ಸ್ಮಾರಕ ಶಿಲ್ಪಗಳು, ಮೂರ್ತಿ ಶಿಲ್ಪಗಳು ಮತ್ತು ಭಿತ್ತಿ ಶಿಲ್ಪಗಳ ವಿಶೇಷ ಅಂಶಗಳನ್ನು ಒಳಗೊಂಡಿರುವ ಈ ಮಹಾಪ್ರಬಂಧವು ಈ ಕೆಳಕಂಡ ಅಧ್ಯಾಯಗಳ ವರ್ಗೀಕರಣದಂತೆ ರಚನೆಗೊಂಡಿದೆ.

ಮೊದಲನೇ ಅಧ್ಯಾಯವು ಪೀಠಿಕೆಯಾಗಿದ್ದು ಇದರಲ್ಲಿ ಹಾಸನ ತಾಲೂಕಿನ ಭೌಗೋಳಿಕ ಲಕ್ಷಣಗಳಲ್ಲಿ ಕಂಡುಬರುವ ನದಿಗಳು, ಬೆಟ್ಟ ಗುಡ್ಡಗಳು, ಅರಣ್ಯಗಳು, ವಾಯುಗುಣದ ಬಗ್ಗೆ ಹಾಗೂ ಆರ್ಥಿಕ ಅಂಶಗಳಾದ ಕೃಷಿ, ಕೈಗಾರಿಕೆ, ನೀರಾವರಿಯ ಬಗ್ಗೆ ಚರ್ಚಿಸುವುದರ ಜೊತೆಗೆ ಹಾಸನ ನಗರದ ಐತಿಹಾಸಿಕ ಹಿನ್ನೆಲೆಯನ್ನು ತಿಳಿಸಲಾಗಿದೆ. ಯಾವುದೇ ಒಂದು ಅಧ್ಯಯನ ಅಥವಾ ಸಂಶೋಧನೆಗೆ ಒಂದು ಉದ್ದೇಶ, ವ್ಯಾಪ್ತಿ ಮತ್ತು ವಿಧಾನಗಳಿರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಈ ಮಹಾಪ್ರಬಂಧದ ಶೀರ್ಷಿಕೆಯನ್ನು ಆಯ್ಕೆ ಮಾಡಿಕೊಂಡ ಉದ್ದೇಶ. ಸಂಶೋಧನೆಯ ವ್ಯಾಪ್ತಿ ಹಾಗೂ ಈ ಸಂಶೋಧನೆಗಾಗಿ ರೂಪಿಸಿಕೊಂಡ ವಿಧಾನಗಳನ್ನು ಚರ್ಚಿಸಿದ್ದೇನೆ. ನಂತರ ಈ ಸಂಶೋಧನಾ ಶೀರ್ಷಿಕೆಗೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳ ಬಗ್ಗೆ ತಿಳಿಸಿದ್ದೇನೆ. ಕೊನೆಯಲ್ಲಿ ಈ ಸಂಶೋಧನೆಯ ಸ್ವರೂಪವನ್ನು ಹೇಳಿದ್ದು, ಇದನ್ನು 7 ಅಧ್ಯಾಯಗಳನ್ನಾಗಿ ಮಾಡಿಕೊಂಡು ಆಯಾಯ ಅಧ್ಯಾಯದಲ್ಲಿ ನಿಗಧಿಪಡಿಸಿಕೊಂಡ ವಿಷಯಗಳ ಬಗ್ಗೆ ಕೂಲಂಕಷವಾಗಿ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯವು ಹಾಸನ ತಾಲೂಕಿನ ರಾಜಕೀಯ ಇತಿಹಾಸದ ಅಂಶಗಳನ್ನು ಒಳಗೊಂಡಿದೆ. ಇದರಲ್ಲಿ ಹೊಯ್ಸಳರ ಮೂಲಪುರುಷ ಸಳನಿಂದ ಪ್ರಾರಂಭವಾಗಿ ಮೂರನೇ ಬಲ್ಲಾಳನವರೆಗಿನ ಸಂಕ್ಷಿಪ್ತ ರಾಜಕೀಯ ಇತಿಹಾಸವನ್ನು ತಿಳಿಸುವುದರ ಜೊತೆಗೆ ಇವರ ಆಳ್ವಿಕೆಯ ಕಾಲದಲ್ಲಿ ಹಾಸನ ತಾಲೂಕಿನಲ್ಲಿ ಕಂಡುಬರುವ ಶಾಸನಗಳನ್ನು ಬಳಸಿಕೊಂಡು ಹಾಸನ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು ಸಂರಚಿಸುವ ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹೊಯ್ಸಳರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳನ್ನು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಹೊಯ್ಸಳ ದೇವಾಲಯಗಳ ತಳವಿನ್ಯಾಸದಲ್ಲಿ ಕಂಡುಬರುವ ಗರ್ಭಗೃಹ, ಸುಕನಾಸಿ, ನವರಂಗ, ಭುವನೇಶ್ವರಿಗಳು, ಸ್ತಂಭಗಳು, ದ್ವಾರಗಳು ಮತ್ತು ದ್ವಾರಪಾಲಕರು ಹಾಗೂ ಏರು ವಿನ್ಯಾಸದಲ್ಲಿ ಕಂಡುಬರುವ ಜಗತಿ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಹಾರ ಮತ್ತು ಶಿಖರದ ಲಕ್ಷಣಗಳನ್ನು ಹಾಗೂ ಹೊಯ್ಸಳ ಶಿಲ್ಪಗಳ ವೈಶಿಷ್ಟ್ಯತೆಯನ್ನು ತಿಳಿಸಿದ್ದೇನೆ.

ನಾಲ್ಕನೆಯ ಅಧ್ಯಾಯವು ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಅಂಶಗಳನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಹಾಸನ ತಾಲೂಕಿನ ಹೊಯ್ಸಳರ ದೇವಾಲಯಗಳನ್ನು ಶೈವ, ವೈಷ್ಣವ ಮತ್ತು ಜೈನ ಬಸದಿಗಳೆಂದು ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಶಾಸನಗಳು, ಕಲೆ ಮತ್ತು ವಾಸ್ತು ಶಿಲ್ಪದ ಗ್ರಂಥಗಳನ್ನು ಪೂರಕವಾಗಿ ಬಳಸಿಕೊಂಡು ಈ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ಹಾಗೂ ವಿಶೇಷತೆಗಳನ್ನು ವಿವರಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧದಲ್ಲಿ 14 ಶೈವ ದೇವಾಲಯಗಳು, 10 ವೈಷ್ಣವ ದೇವಾಲಯಗಳು ಹಾಗೂ 3 ಜೈನ ಬಸದಿಗಳ ಕುರಿತಾಗಿ ಕಾಲಾನುಕ್ರಮದಲ್ಲಿ ವಿವರಿಸಿದ್ದೇನೆ.

ಐದನೆಯ ಅಧ್ಯಾಯದಲ್ಲಿ ಹಾಸನ ತಾಲೂಕಿನ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ವೀರಗಲ್ಲುಗಳ ಸ್ವರೂಪ ಮತ್ತು ವಿಧಗಳು ಹಾಗೂ ಹಾಸನ ತಾಲೂಕಿನಲ್ಲಿ ಕಂಡುಬಂದಿರುವ ಹೊಯ್ಸಳರ ಕಾಲದ ಶಾಸನೋಕ್ತ ವೀರಗಲ್ಲುಗಳಲ್ಲಿನ ಅಂಶಗಳ ಕುರಿತಾಗಿ ವಿವರಿಸಿದ್ದೇನೆ.

ಆರನೆಯ ಅಧ್ಯಾಯದಲ್ಲಿ ಶಿಲ್ಪಗಳ ರಚನಾ ವಿಧಾನ ಮತ್ತು ಬೆಳವಣಿಗೆ, ಶಿಲ್ಪಗಳ ಲಕ್ಷಣಗಳು, ಹಸ್ತ-ವಿನ್ಯಾಸ, ಮುದ್ರೆಗಳು, ಆಯುಧಗಳು, ಆಭರಣಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸುವುದರ ಜೊತೆಗೆ ಈ ಶಿಲ್ಪಗಳು ಆರಾಧಿಸುತ್ತಿರುವ ಗ್ರಾಮಗಳು ಮತ್ತು ದೇವಾಲಯಗಳ ಬಗ್ಗೆ ತಿಳಿಸಿದ್ದೇನೆ.

ಏಳನೆಯ ಅಧ್ಯಾಯವು ಉಪಸಂಹಾರವಾಗಿದ್ದು, ಇದರಲ್ಲಿ ಕ್ಷೇತ್ರಕಾರ್ಯದ ಅನುಭವ, ಸಂಶೋಧನೆಯಲ್ಲಿ ಕಂಡುಕೊಂಡ ವಿಶೇಷ ಫಲಿತಗಳು ಹಾಗೂ ಇಡೀ ಮಹಾಪ್ರಬಂಧದ ಸಾರಾಂಶವನ್ನು ತಿಳಿಸಲಾಗಿದೆ. ಅಲ್ಲದೇ ಪರಾಮರ್ಶನ ಗ್ರಂಥಗಳು, ಭೂಪಟಗಳು, ದೇವಾಲಯಗಳ ಪಟ್ಟಿ ಮತ್ತು ತಳನಕ್ಷೆಗಳು ಹಾಗೂ ಛಾಯಾಚಿತ್ರಗಳನ್ನು ಸಹ ನೀಡಿದ್ದೇನೆ.

ಪ್ರಸ್ತುತ ಹಾಸನ ತಾಲೂಕಿನ ಕೆಲವು ಹೊಯ್ಸಳ ದೇವಾಲಯಗಳು ಶಿಥಿಲವಾಗಿ ವಿನಾಶದ ಅಂಚನ್ನು ತಲುಪಿವೆ. ಕೆಲವು ದೇವಾಲಯಗಳು ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡು ಬಂದಿದ್ದು, ಪ್ರವಾಸಿಗರ ಆಕರ್ಷಣೀಯ ಕೇಂದ್ರಗಳಾಗಿವೆ. ಕೆಲವು ಸ್ಮಾರಕಗಳನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿಸುತ್ತಿದ್ದರೆ, ಕೆಲವು ಸ್ಮಾರಕಗಳನ್ನು ಕರ್ನಾಟಕದ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯವು ಸಂರಕ್ಷಿಸುತ್ತಿರುವುದು ಕಂಡುಬರುತ್ತದೆ. ಕೆಲವು ಗ್ರಾಮಗಳ ಶಿಥಿಲವಾದ ದೇವಾಲಯಗಳನ್ನು ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟಿನವರು, ಗ್ರಾಮಸ್ಥರು ಮತ್ತು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಸಹಯೋಗದೊಂದಿಗೆ ಜೀರ್ಣೋದ್ಧಾರ ಮಾಡಿರುವುದು ಶ್ಲಾಘನೀಯ ವಿಷಯವಾಗಿದೆ.

ಪ್ರಸ್ತುತ ಈ ಮಹಾಪ್ರಬಂಧದಲ್ಲಿ ಹಾಸನ ತಾಲೂಕಿನಲ್ಲಿ ಕಂಡುಬರುವ ಹೊಯ್ಸಳ ದೇವಾಲಯಗಳನ್ನು ಒಂದೇ ಕಡೆ ದಾಖಲಿಸಿ ವಿವರಣೆ ನೀಡಲಾಗಿದೆ. ಅಲ್ಲದೇ ಈಗಾಗಲೇ ಪ್ರಕಟವಾಗಿರುವ ಗ್ರಂಥಗಳು, ಲೇಖನಗಳನ್ನು ಪರಾಮರ್ಶಿಸಿ ಸಾಧ್ಯವಾದಷ್ಟರ ಮಟ್ಟಿಗೆ ಮಹಾಪ್ರಬಂಧವನ್ನು ರಚಿಸಿದ್ದೇನೆ ಎಂದು ತಿಳಿಸುತ್ತಾ ಈ ಮಹಾಪ್ರಬಂಧವು ಮುಂದೆ ಇತಿಹಾಸ ಮತ್ತು ಕಲಾಸಕ್ತರ ಹೆಚ್ಚಿನ ಸಂಶೋಧನೆಗೆ ಉತ್ತಮ ಪರಾಮರ್ಶನ ಗ್ರಂಥವಾಗಲಿದೆ ಎಂಬುದು ನನ್ನ ಆಶಯವಾಗಿದೆ.

## ಪರಾಮರ್ಶನ ಗ್ರಂಥಗಳು


ಅಣ್ಣಯ್ಯ ತೈಲೂರು : ಹೊಯ್ಸಳ ರಾಜ ವೀರ ಸೋಮೇಶ್ವರ, ಸಂದೀಪ್ ಪ್ರಕಾಶನ, ಕೊಳ್ಳೇಗಾಲ, 2011

ಅನಂತರಂಗಾಚಾರ್, ಎನ್. : ಕರ್ನಾಟಕದ ವಾಸ್ತುಶಿಲ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1972

ಅಪರ್ಣ, ಕೂ.ಸ. : ದೇವಾಲಯ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999.

ಉದಯರವಿ : ಹಾಸನ ಜಿಲ್ಲಾ ವೈಶಿಷ್ಟ್ಯ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಹಾಸನ, 2010

ಕಡಪಟ್ಟಿ, ಎಂ.ಎನ್. : ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, 2008.

ಕಲಬುರ್ಗಿ, ಎಂ.ಎಂ. : ಕನ್ನಡ ಸಂಶೋಧನಾ ಶಾಸ್ತ್ರ, ಚೇತನ ಬುಕ್ ಹೌಸ್, ಬೆಂಗಳೂರು, 1992.

ಕಲಬುರ್ಗಿ, ಎಂ.ಎಂ.(ಸಂ.) : ಮಾನಸೋಲ್ಲಾಸ, ಸಂಪುಟ-1 ಮತ್ತು 2, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1988.

ಕಲ್ಲಿನಾಥ ಎನ್. ಕಾತ್ರಾಳೆ : ಕರ್ನಾಟಕ ಪ್ರಾಚೀನ ಜೈನ ಬಸದಿಗಳ ಕೋಶ, ಸಾಗರ್ ಪ್ರಕಾಶನ, ಬೆಂಗಳೂರು, 2007

ಕೋಸಾಂಬಿ, ಡಿ.ಡಿ. : ಪ್ರಾಚೀನ ಭಾರತದ ಚರಿತ್ರೆ, (ಅನು) ಶ್ರೀಮತಿ, ಎಚ್.ಎಸ್., ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಮೈಸೂರು, 1998

ಕೃಷ್ಣಮೂರ್ತಿ, ಎಂ.ಎಸ್. : ಹೊಯ್ಸಳ ಆರ್ಟ್, ದ್ರವಿಡಿಯನ್ ಯೂನಿವರ್ಸಿಟಿ, ಕುಪ್ಪಂ, 2001

ಕೃಷ್ಣರಾವ್, ಎಂ.ಎಚ್. : ಕನ್ನಡ ನಾಡಿನ ಚರಿತ್ರೆ, ಕರ್ನಾಟಕ ಕಲೆ, ಬೆಂಗಳೂರು, 1976

ಕೃಷ್ಣರಾಯ, ಅ.ನ. (ಸಂ.) : ಭಾರತೀಯ ಸಂಸ್ಕೃತಿ ದರ್ಶನ, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರ್ಕಾರ, ಬೆಂಗಳೂರು, 1962.

ಜೀರಿಗೆ ಕಟ್ಟಿ ಬಸವಪ್ಪ : ಕರ್ನಾಟಕ ಯಾತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1973

ಗೋಪಾಲ್, ಆರ್. : ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2010

: ಕರ್ನಾಟಕ ವಾಸ್ತುಶಿಲ್ಪ ಉದ್ಯಾನ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2010

ಗೋಪಾಲ, ಬಾ.ರಾ. : ಕರ್ನಾಟಕದ ಕಲೆಗಳು–ವಾಸ್ತು, ಸಂಪುಟ–4, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1992.

: ಕರ್ನಾಟಕದ ವಾಸ್ತು ಶಿಲ್ಪ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1980.

ಗೊರೂರು ಅನಂತರಾಜು : ಹಾಸನ ಜಿಲ್ಲೆಯ ದೇವಾಲಯ ದರ್ಶನ, ಹಾಸನ, 2009

ಚಂದ್ರ ಪೂಜಾರಿ, ಎಂ. : ಸಂಶೋಧನಾ ಜವಾಬ್ದಾರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2008.

: ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2008.

ಚಿದಾನಂದ ಮೂರ್ತಿ, ಎಂ. : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.450–1150), ಸಪ್ನ ಬುಕ್ ಹೌಸ್, ಬೆಂಗಳೂರು, ಆರನೆಯ ಮುದ್ರಣ, 2014.

ತಿಪ್ಪೇರುದ್ರಸ್ವಾಮಿ, ಎಚ್. : ಕರ್ನಾಟಕದ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, 2010.

ತಿಪ್ಪೇಸ್ವಾಮಿ, ಪಿ.ಆರ್. (ಸಂ) : ಶಿಲ್ಪಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, 1994.

ನರಸಿಂಹ ಮೂರ್ತಿ, ಎ.ವಿ. : ಚಾಲುಕ್ಯ ವಾಸ್ತು ಶಿಲಪ ಪರಿಚಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1984.

ಪ್ರಭಾಕರ್, ಎಂ.ಎಸ್. : ದೇವಾಲಯ ವಾಸ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2011.

ಪ್ರಭು, ಕೆ. : ಅಮೃತಾಪುರದ ಅಮೃತೇಶ್ವರ ದೇವಾಲಯ – ಒಂದು ಸಮಗ್ರ ಅಧ್ಯಯನ, 2018

ಬಾಲಸುಬ್ರಹ್ಮಣ್ಯ : ಕರ್ನಾಟಕ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2007.

ಮಳಲಿ ವಸಂತಕುಮಾರ್ : ಹೊಯ್ಸಳ ಸಂಪದ, ಅಖಿಲ ಭಾರತ 65ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಾಕ್ಷೀ ಸಂಪುಟ, 1996.

ಮನೋಜ್, ಜಿ. : ದೇವಾಲಯ ವಾಸ್ತು ವಿಜ್ಞಾನ, ಸುಬೋಧಿನಿ ಬುಕ್ ಪಬ್ಲಿಷರ್ಸ್ ಮತ್ತು ನಾಲೆಡ್ಜ್ ಅಕಾಡೆಮಿ, ಚಿತ್ರದುರ್ಗ, 2015.

ಮನೋಜದಾಸ್ (ಮೂಲ), ಸೀತಾರಾಮಯ್ಯ (ಅನು) : ಭಾರತದ ದೇವಾಲಯಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, 1978.

ಮರಿಶಾಮಾಚಾರ್, ಎನ್. : ಭಾರತೀಯ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, 2000.

ಮೂರ್ತಿ, ಕೆ.ಎಲ್.ಎನ್. : ಕರ್ನಾಟಕ ಕಲೆ ಮತ್ತು ವಾಸ್ತುಶಿಲ್ಪ, ರಂಜಿತಾ ಪ್ರಕಾಶನ, ತುಮಕೂರು, 1998.

ಮಲ್ಲೇಪುರ, ಜಿ., ವೆಂಕಟೇಶ (ಸಂ.) : ಶಿವತತ್ವ ರತ್ನಾಕರ, ಸಂಪುಟ-1 ಮತ್ತು 2, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

ಮಹದೇವಯ್ಯ, ಎಂ.ಪಿ. : ಪ್ರಾಚೀನ ಕರ್ನಾಟಕದ ಆಡಳಿತ ಪದ್ಧತಿಯ ಕೆಲವು ಅಂಶಗಳು, ಕುಮಾರ ಪ್ರಕಾಶನ, ಮೈಸೂರು, 2012.

ಮುತ್ತಾಚಾರ್ಯ, ಟಿ.ವಿ. : ಭಾರತೀಯ ಶಿಲ್ಪಶಾಸ್ತ್ರಸಾರ, ಶಿಲ್ಪಕಲಾ ಪರಿಷತ್ತು, ಬೆಂಗಳೂರು, 1994.

ಮೈಸೂರು ನಾಗರಾಜ ಶರ್ಮಾ : ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2010.

ರಾಜಗೋಪಾಲ್, ಟಿ.ಎಸ್. : ಹೊಯ್ಸಳ ವಾಸ್ತುಶಿಲ್ಪ ಪರಿಚಯ, ಬೆಂಗಳೂರು

ರಂಗಸ್ವಾಮಿ, ಎಸ್. : ಕರ್ನಾಟಕದ ದೇವಾಲಯಗಳು, ಬಿನ್ನಿ ಲೇಔಟ್, ವಿಜಯನಗರ, ಬೆಂಗಳೂರು, 1994.

ರಘೋತ್ತಮ ತೀರ್ಥರು : ವೈಷ್ಣವ ಕ್ಷೇತ್ರದರ್ಶನ, ಶ್ರೀಮತಿಬಾಯಿ ಪ್ರಕಾಶನ, ಮೈಸೂರು, 1999.

ರಘುನಾಥ ಭಟ್, ಎಚ್.ಆರ್. : ಹೊಯ್ಸಳ ವಾಸ್ತುಶಿಲ್ಪ ಪರಿಚಯ, ಬೆಂಗಳೂರು, 1979

ರಮೇಶ, ಬಿ.ಗೋ. : ಕರ್ನಾಟಕದ ವಾಸ್ತುಶಿಲ್ಪ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1984.

ರಾಜಶೇಖರ್, ಎಸ್. : ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್, ಧಾರವಾಡ, 1988.

ರಾಮಕೃಷ್ಣ, ಕೆ.ಆರ್. : ಕ್ಯಾತನಹಳ್ಳಿ ರಾಮಣ್ಣ, ಕ್ಷೇತ್ರಕಾರ್ಯದ ತತ್ವಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಮೈಸೂರು, 2003.

ರಾಮಚಂದ್ರ ರಾವ್, ಎಸ್.ಕೆ. : ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಎರಡನೆಯ ಮುದ್ರಣ, 2010.

ಲಕ್ಷ್ಮಣ್ ತೆಲಗಾವಿ (ಸಂ.) : ಸ್ಥಳೀಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2003.

ವೆಂಕೋಬರಾವ್, ಬಿ. : ಮೈಸೂರು ದೇಶದ ವಾಸ್ತುಶಿಲ್ಪ, ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು, 1928.

ಶರ್ಮ, ಆರ್.ಎಸ್. : ಪ್ರಾಚೀನ ಭಾರತದ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಐದನೇ ಮುದ್ರಣ, 2010.

ಶಾರದಾ, ಕೆ. : ಕರ್ನಾಟಕದಲ್ಲಿ ಜೈನಧರ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006.

ಶಿವತಾರಕ್, ಕೆ.ಬಿ. : ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

ಶಿವರಾಮ ಕಾರಂತ : ಚಾಲುಕ್ಯ ವಾಸ್ತು ಮತ್ತು ಶಿಲ್ಪ, ಲಲಿತಕಲಾ ಅಕಾಡೆಮಿ, ಬೆಂಗಳೂರು, 1969.

: ಭಾರತೀಯ ಶಿಲ್ಪ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1975.

ಶಿವರುದ್ರಸ್ವಾಮಿ, ಎಸ್.ಎನ್. : ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪೌರಸ್ತ್ಯ ಪ್ರಕಾಶನ, ತಿಕಪಟೂರು, 2004.

ಶೇಷಶಾಸ್ತ್ರಿ, ಆರ್. : ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2004.

ಶ್ರೀಕಂಠಶಾಸ್ತ್ರಿ, ಎಸ್. : ಹೊಯ್ಸಳ ವಾಸ್ತುಶಿಲ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1965.

ಶ್ರೀಧರ, ಬಿ.ಎಚ್. : ಭಾರತೀಯ ಮೂರ್ತಿಶಿಲ್ಪ, ರಂಗಸಂಗ ಮತ್ತು ಕಲಾರಂಗ, ಶಿರಸಿ, 1988.

ಶ್ರೀನಿವಾಸ ರಿತ್ತಿ (ಸಂ.) : ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2000.

ಶ್ರೀವತ್ಸ, ಎಸ್. ವಟಿ : ಶಿಲ್ಪಕಲೆಯ ಅವಳಿ ಅದ್ಭುತ–"ಮೊಸಳೆ" ಗ್ರಾಮದ ದೇವಾಲಯಗಳು, ಹೊಯ್ಸಳ ಟೂರಿಸಂ ಮಾಸ ಪತ್ರಿಕೆ, 2007.

ಸರಸ್ವತಿ, ಎನ್. : ಹೊಯ್ಸಳರ ಇತಿಹಾಸ, ವಾಚಸ್ಪತಿ ಪ್ರಕಾಶನ, ಮೈಸೂರು, 2009

ಸರಸ್ವತಿ, ಎನ್., ಸಾವಿತ್ರಿ, ಎನ್. : ಹೊಯ್ಸಳ ಕಾಲದ ಸಾಂಸ್ಕೃತಿಕ ಕೊಡುಗೆಗಳು, ಪದ್ಮಶೇಖರ್ ಪ್ರಿಂಟರ್ಸ್, ಮೈಸೂರು, 2008

ಸೀತಾರಾಮ ಜಾಗೀರ್‌ದಾರ್ : ಕಂಬದಹಳ್ಳಿ: ಒಂದು ಜೈನ ಕೇಂದ್ರ, ಅತ್ತಿಮಬ್ಬೆ ಪ್ರಕಾಶನ, ಮೈಸೂರು, 1999.

ಸುಂದರ, ಅ. (ಸಂ.). ಷೇಕ್ ಅಲಿ (ಪ್ರ.ಸಂ.) : ಕರ್ನಾಟಕ ಚರಿತ್ರೆ, ಸಂಪುಟ–1, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1997.

ಸುರೇಶ, ಬಿ.ಸಿ. : ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ರಚನಾ ಪ್ರಕಾಶನ, ಮೈಸೂರು, 2014.

ಜ್ಞಾನಾನಂದ, ಜಿ. : ಶಿಲ್ಪಾದರ್ಶ, ಭಾಗ–1, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

| | | |
|---|---|---|
| | : | ಶಿಲ್ಪಾದರ್ಶ, ಭಾಗ-2, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004. |
| | : | ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ (ಉತ್ತರಾರ್ಧ), ಕರ್ನಾಟಕದ ಶಿಲ್ಪ ಕಲಾ ಅಕಾಡೆಮಿ, ಬೆಂಗಳೂರು, 2004. |
| | : | ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ (ಪೂವಾರ್ಧ, ಸಣ.-1), ಕರ್ನಾಟಕದ ಶಿಲ್ಪ ಕಲಾ ಅಕಾಡೆಮಿ, ಬೆಂಗಳೂರು, 2004. |
| ಹಂಪ ನಾಗರಾಜಯ್ಯ | : | ಶಾಸನಗಳಲ್ಲಿ ಜೈನ ತೀರ್ಥಗಳು, ಪಂಡಿತರತ್ನ, ಎ., ಶಾಂತಿರಾಜ ಶಾಸ್ತ್ರಿ ಟ್ರಸ್ಟ್, ಬೆಂಗಳೂರು, 1998. |


## ಆಂಗ್ಲ ಭಾಷೆಯ ಪುಸ್ತಕಗಳು


| | | |
|---|---|---|
| Acharya, P.K. | : | Indian Architecture according to Manasara Shilpa Shastra, Madras, 1927. |
| | : | A Dictionary of Hindu Architecture, Oxford, 1927. |
| | : | Architecture of Manasara, Oxford, 1933. |
| | : | An Encyclopaedia of Hindu Architecture, London, 1946. |
| Altekar, A.S. | : | Position of Women in Hindu Civilization, Banaras, 1956. |
| Banarjee, J.N. | : | The Development of Hindu Iconography, Calcutta, 1956. |
| | : | Religion in Art and Archaeology, Vaishnavism and Saivism, Lucknow, 1968. |
| | : | The Development of Hindu Iconography, Third Revised Edition, Calcutta, 1956. |
| Basavaraju, K.R. | : | History and Culture of Karnataka, Dharwad, 1984 |
| Bhandarkar, R.G. | : | Vaishnavism, Saivism and Minor Religious Systems, Poona, 1929. |
| Bharata Iyer, K. | : | Indian Art, A Short Introduction, Bombay, 1958. |
| Bhattacharya, B.C. | : | Jain Iconography, Lahore, 1939. |
| Bhattacharya Haridas | : | The Cultural Heritage of India, Vol. IV, Calcutta, 1956. |

Briggs Martin, S. : Concise Encyclopaedia of Architecture, London, 1959.

Chandra Pramoda : Studies in Indian Temple Architecture, Varanasi, 1975.

Coomaraswamy, A.K. : The History of Indian and Indonesian Art, New York, 1926.

Cousens, H. : The Chalukyan Architecture of Kanarees Districts, Calcutta, 1926.

The Medieval Temples of the Deccan, Calcutta, 1931.

Daniel Smith : Vaisnava Iconography, Madras, 1969.

Dasgupta, S.N. : Fundamentals of Indian Art, Bombay, 1960.

Date, G.T. : The Art of War in Ancient India, London, 1929.

Dayalan, O.L. : Early Temples of South Indian Art, ASI, New Delhi, 1992.

Dayananda Patel, T. : Keshava Temple-Somanathapura-A Cultural Study, Delhi, 1990.

Derett, JDM : The Hoysalas-A Medieval Indian Royal Family, Oxford, 1957.

Desai, P.B. : History of Karnataka, Dharwad, 1970.

Dhaky, M.A. : Encyclopaedia of Indian Temple Architecture, Vol. I, Part-III, South India, Upper Dravida Desa, Later Phase 2, Volumes 1996

Encyclopaedia of Indian Temple Architecture, Vol. II, Part-III, North India, 2 Volumes 1998

Diwakar, R.R. (Ed) : Karnataka through the Ages, Bangalore, 1968.

Fabri Charles : Discovering Indian Sculptures, New Delhi, 1970

Fergusson James, H. : History of Indian and Eastern Architecture, Vol.I (Revised Edition), London, 1970.

Fredericlouis : Indian Temples and Cultures, London, 1959

Gerard Foekema : Chalukya Architecture: Medieval temple of Northern Karnataka Built during the rule of Chalukyas of Kalyana, Thereafter, 3 volumes, New Delhi, 1975.

: Hoysala Architecture Medieval Temples of Southern Karnataka Built during Hoysala Rule, Vol.I &II, Delhi, 1994.

George Michel : Encyclopaedia of Indian Temple Architecture, South India, Dravidadesa, Later Phase, Delhi, 2001.

Ghosh, A. : Jaina Art and Architecture, Vol.-I, II, New Delhi, 1975.

Gopinath Rao, T.V. : Elements of Hindu Iconography, Vol.-I, II & III, Delhi (Reprint), 1977.

Gupte, R.S. : Iconography of the Hindus Buddhist and Jainas, Bombay, 1972.

Guru, G.S. : Indian Costume, Bombay, 1951.

Harle James : Temple Gateways in South India, Oxford, 1963

Harshananda Swamy : Hindu Gods and Goddesses, Mysore, 1980.

Havell, E.B. : The Ancient and Medieval Architecture of India, London, 1915.

: Indian Architecture, London, 1927.

: The Ideals of Indian Art, Delhi, 1962.

Hayavadhana Rao, C. : History of Mysore, (2 volumes), Bangalore, 1943

Ismail, K. : Karnataka Temples, Delhi, 1984.

James Fergusson, H. : History of Indian and Eastern Architecture, Volume-I, Revised Edition, London, 1970

Jitendra Nath Banerjee : The Development of Hindu Iconography, New Delhi, 1974.

Kelleson, Collyer : Hoysala Artists their Identity, Mysore, 1989.

Krishna Murthy, K. : Mirrors of Indian Culture, Delhi, 1982.

Shiva Art and Architecture in South India, New Delhi, 1985.

Krishnappa, M.V. and Kulakarni,R.H. : Prahalada Charita Narratives in Hoysala Temple, Tirupati, 2007

Krishna Sastri : The Hoysalas in and beyond, Mysore, Quarterly Journal of Mythic Society II, 1911

Krishna Sastri, H. : South Indian Images of Gods and Goddesses, Madras, 1916.

Krishna Swamy Iyengar : Dravidian Architecture, Varanasi, 1984.

Louis Frederic : Indian Temple and sculpture, London, 1959.

Mahalingam, T.V. : The South Indian Temple Complex, Dharwar, 1970.

Maity, S.K. : Masterpieces of Hoysala Art, Bombay, 1979.

Majumdar, B.K. : A Guide to Halebid, Mysore, 1976.

Meta Rustam : Master pieces of Indian Sculptures, Bombay, 1976.

Michael W. Meister, M.A.Dhaky : Encyclopaedia of Indian Temple Architecture, Volume-I, Part-3, South India, Upper Dravidadesa, Early Phase, A.D. 550-1075, Delhi, 1986.

Michel George : Early Western Chalukyan Temple, London, 1975.

Mugali, R.S. : The Heritage of Karnataka, Bangalore, 1946.

Narasimhachar, R. : The Lakshmidevi temple at Doddagaddavalli, Monograph,

: The Keshava Temple at Somanathapura, Monograph,

Narasimha Murthy, A.V. : Archaeology of Karnataka, Mysore, 1978.

Nilakanta Sastri, K.A. : History of South India, Delhi (Reprint), 2002.

Padmanabaha, K. : Hoysala Sculptures – A Cultural Study, Sandeep Prakashan, New Delhi, 1979

Parthasarathi, A. : The Symbolism of Hindu Gods and Rituals, Bombay, 1983.

Percy Brown : Indian Architecture (Buddhist, Hindu), 3rd Revised and enlarged Edition, Bombay, 1956.

Prasanna Kumar Acharya : Encyclopaedia of Hindu Architecture, London, 1946.

Rajashekara, S. : Karnataka Architecture, Dharwar, 1985.

Ramachandra Rao, S.K. : Indian Temples a Background, Bangalore, 1980.

: Encyclopaedia of Indian Iconography, Hinduism-Buddhism-Jainism, 3 volumes, Delhi, 2003.

Raman, K.V. : Temple Art, Icons and Culture of India and South-East Asia, Delhi, 2006.

Ramasharma, M.H. : The Hoysala of the Vijayanagara Empire, Bombay, 1985.

Rangaraju, N.S. : Hoysala Temples in Mandya and Tumkur Districts, Prasaranga, University of Mysore, Mysore, 1998.

Rea, Alexander : Chalukyan Architecure, Delhi, 1970.

Rowland Benjamin : The Art and Architecture of India (Buddhist, Hindu, Jaina), Reprint, 1959.

Rao, G.V. : Temples and Legends of Karnataka, Mumbai, 2003.

Shastri, K.K. : South Indian Images of Gods and Goddesses, Madras, 1916.

Sharma, I.K. : Temples of the Gangas of Karnataka, Delhi, 1993.

Sharma, S.R. : Jainism and Karnataka Culture, Dharwar, 1940.

Settar, S. : Hoysala Temples, Volume I & II, Kalayatra Prakashan, Dharwad, 1992

: Hoysala Sculptures in National Museum, Copenhagen,1975

Sheik Ali, B. : History of the Western Gangas, Mysore, 1976.

Shivaramamuthy, C. : The Art of India, New York, 1977.

Soundar Rajan, K.V. : Early Temple Architecture in Karnataka and its Ramifications, First Edition, Dharwad, 1969.

: Indian Temples Styles, New Delhi, 1972.

Srinivasan, K.R. : Temples of South India, New Delhi, 1993.

Stain Burton : South Indian Temples, New Delhi, 1978.

Suryanath U. Kamath : A Concise History of Karnataka, Bangalore, 2002.

Venkatesh Iyengar, M. : Popular Culture in Karnataka, Bangalore, 1983.

Venkataramanayya, S. : An Essay on the Origin of the South Indian Temple, New Delhi, 1985.

Witched : The Village Gods of South India, Oxford, 1921.

William Coelho : The Hoysala Vamsa, Bombay, 1950.

## ಗೆಜೆಟಿಯರ್, ನಿಘಂಟು, ನಿಯತಕಾಲಿಕೆಗಳು ಮತ್ತು ವರದಿಗಳು


Kitterl Rev, F.A. : Kannada-English Dictionary, Mangalore, 1894.

Saletore, R.N. : Encyclopaedia of Indian Culture, New Delhi, 1982.

Sircar, D.C. : Indian Epigraphical Glossary, Varanasi, 1966.

Suryanath U. Kamath : Karnataka State Gazetter, Bangalore Rural District, Bangalore, 1989.

Indian Antiquary, Volume-1 to 62.

Indian Historical Quarterly (1925-1963), 1 to 39 volumes.

Encyclopaedia of World Art, New York, 1959.

Encyclopaedia of Britannica, U.A.A.30 Volumes.

Hassan District Gazetter, 1971

Mysore Archaeological Reports, 1986-1956.

South Indian Inscriptions, Volumes: 1-32.

Quarterly Journal of the Mythic Society, Bangalore.

ಸೂರ್ಯನಾಥ ಯು. ಕಾಮತ್ (ಸಂ.): ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984.

ಸೂರ್ಯನಾಥ ಯು. ಕಾಮತ್ (ಸಂ.): ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-2, 1985.

ಸೂರ್ಯನಾಥ ಯು. ಕಾಮತ್ (ಸಂ.): ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-3, 1986.

ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಕನ್ನಡ ವಿಶ್ವಕೋಶ, ಸಂಪುಟ-1 ರಿಂದ 14, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1979.

ಮಾನವಿಕ ಕರ್ನಾಟಕ ಸಂಪುಟಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಇತಿಹಾಸ ದರ್ಪಣ, (ತ್ರೈಮಾಸಿಕ), ಕೆಂಪೇಗೌಡನಗರ, ಬೆಂಗಳೂರು.

ಇತಿಹಾಸ ದರ್ಶನ, ಸಂಪುಟ: 1 ರಿಂದ 30, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

ಕರ್ನಾಟಕ ಇತಿಹಾಸ ಪರಿಷತ್ತು, ಕರ್ನಾಟಕ ಇತಿಹಾಸ ಕಾಂಗ್ರೆಸ್, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

ಎಪಿಗ್ರಾಫಿಯ ಕರ್ನಾಟಿಕ, ಸಂಪುಟಗಳು: 1 ರಿಂದ 13, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪಾರಿಭಾಷಿಕ ಪದಕೋಶ, ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಮೈಸೂರು,

ಇತಿಹಾಸ ಮತ್ತು ಪುರಾತತ್ವ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.





Bidar
Gulbaraga
Bijapur
Raichur
Bagalkote
Belgaum
Koppal
Dharwad
Gadag
Bellary
Uttara Kannada
Haveri
Davanagere
Chitradurga
Shimoga
Udupi
Chikmagalur
Tumkur
Kolar
Hassan
Bangalore
Mangalore
Mandya
Kodagu
Mysore
Chamarajanagara


**ಕರ್ನಾಟಕ**


Arasikere
Belur
HASSAN
Channarayapatna
Alur
Sakleshpura
Arkalgud

**ಹಾಸನ ಜಿಲ್ಲೆ**



ಲಕ್ಷ್ಮೀದೇವಿ ದೇವಾಲಯ, ದೊಡ್ಡಗದ್ದವಳ್ಳಿ, ಕೃಪೆ, ಎಸ್.ಶೆಟ್ಟರ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1




ತ್ರಿಕೂಟೇಶ್ವರ ದೇವಾಲಯ, ಗೊರೂರು ಕೃಪೆ, ಎಸ್.ಶೆಟ್ಟರ್, ದಿ ಹೊಯ್ಸಳ ಟೆಂಪಲ್ಸ್, ಸಂಪುಟ–1



ಬೂಚೇಶ್ವರ ದೇವಾಲಯ, ಕೋರವಂಗಲ, ಕೃಪೆ, ಎಂ.ಎ.ಆರ್, 1933



ಕೇಶವ ದೇವಾಲಯ, ಹಿರಿಕಡಲುರು, ಕೃಪೆ, ಎಂ.ಎ.ಆರ್, 1942

NAGESVARA AND CHANNA KESAVA TEMPLES AT MOSALE: HASSAN TALUK

SCALE OF FEET.

MYSORE ARCHAEOLOGICAL SURVEY.

ARCHITECTURAL ASSISTANT

AUGUST 1914

ನಾಗೇಶ್ವರ ಮತ್ತು ಚನ್ನಕೇಶವ ದೇವಾಲಯ, ಮೊಸಳೆ, ಕೃಪೆ, ಎಂ.ಎ.ಆರ್

## ಶೈವ ದೇವಾಲಯಗಳು



ಚಿ.ಸಂ.1. ಸೋಮೇಶ್ವರ ದೇವಾಲಯ ಗುಡ್ಡದ ತೆರಣ್ಯ



ಚಿ.ಸಂ.2. ಧರ್ಮೇಶ್ವರ ದೇವಾಲಯದ ಪಾರ್ಶ್ವನೋಟ, ಶಾಂತಿಗ್ರಾಮ



ಚಿ.ಸಂ.3. ಗರ್ಭಗೃಹ ಮತ್ತು ದ್ವಾರಬಂಧ



ಚಿ.ಸಂ.4. ನವರಂಗದ ಶ್ರೀಕಾರ ಕಂಬಗಳು



ಚಿ.ಸಂ.5. ದೇವಾಲಯದ ಹಿನ್ನೋಟ



ಚಿ.ಸಂ.6. ಶಾಂತಮಲ್ಲೇಶ್ವರ ದೇವಾಲಯದ ಮುನ್ನೋಟ, ಯೆಲಗುಂದ





ಚಿ.ಸಂ.7. ಗರ್ಭಗೃಹದಲ್ಲಿನ ಶಿವಲಿಂಗ

ಚಿ.ಸಂ.8. ಕೆನ್ನೆಕೆರೆಯಮ್ಮ (ಬೊಪ್ಪಲೇಶ್ವರ) ದೇವಾಲಯ, ಯೆಲಗುಂದ





ಚಿ.ಸಂ.9. ಗರ್ಭಗೃಹದ ಶಿವಲಿಂಗ

ಚಿ.ಸಂ.10. ಕಮಟೇಶ್ವರ ದೇವಾಲಯ, ಹೆರಗು





ಚಿ.ಸಂ.11. ಬ್ರಹ್ಮಸೂತ್ರವಿರುವ ಶಿವಲಿಂಗ

ಚಿ.ಸಂ.12. ನವರಂಗದ ದ್ವಾರಬಂಧ





ಚಿ.ಸಂ.13. ದೇವಾಲಯದ ಶಿಖರದ ಹಿನ್ನೋಟ

ಚಿ.ಸಂ.14. ಗೋವಿಂದೇಶ್ವರ ದೇವಾಲಯದ ಪಾರ್ಶ್ವನೋಟ, ಕೋರವಂಗಲ



ಚಿ.ಸಂ.15. ನವರಂಗದ ಶ್ರೀಕಾರ ಕಂಬಗಳು





ಚಿ.ಸಂ.16. ಮುಖಮಂಟಪ ಮತ್ತು ನವರಂಗದ ಭುವನೇಶ್ವರಿಗಳು



ಚಿ.ಸಂ.17. ದ್ವಾರಬಂಧ



ಚಿ.ಸಂ.18. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿ



ಚಿ.ಸಂ.19. ನಾಕೇಶ್ವರ ದೇವಾಲಯ, ಕೋರವಂಗಲ



ಚಿ.ಸಂ.20. ಗರ್ಭಗೃಹ ಮತ್ತು ನವರಂಗ



ಚಿ.ಸಂ.21. ದೇವಾಲಯದ ಬಲಪಾರ್ಶ್ವನೋಟ



ಚಿ.ಸಂ.22. ದೇವಾಲಯದ ಮುಂದಿನ ಮಂಟಪ



ಚಿ.ಸಂ.23. ಗೋವಿಂದೇಶ್ವರ ದೇವಾಲಯದ ಮುಖಮಂಟಪ



ಚಿ.ಸಂ.24. ಕೈಸಾಲೆಯ ಕಂಬಗಳು



ಚಿ.ಸಂ.25. ತ್ರಿಕೂಟೇಶ್ವರ ದೇವಾಲಯ, ಗೊರೂರು



ಚಿ.ಸಂ.26. ಗರ್ಭಗೃಹ ಮತ್ತು ನವರಂಗದ ಕಂಬಗಳು



ಚಿ.ಸಂ.27. ನವರಂಗದ ಭುವನೇಶ್ವರಿ



ಚಿ.ಸಂ.28. ದೇವಾಲಯದ ಭಿತ್ತಿ ಮತ್ತು ಫಾಂಸಾನ ಶೈಲಿಯ ಶಿಖರ





ಚಿ.ಸಂ.29. ಪುನರ್ ನಿರ್ಮಾಣಗೊಂಡ ಪ್ರಾಚೀನ ಕಲ್ಲೇಶ್ವರ ದೇವಾಲಯ, ಜಕ್ಕೇನಹಳ್ಳಿ





ಚಿ.ಸಂ.30. ಬೂಚೇಶ್ವರ ದೇವಾಲಯದ ಮುನ್ನೋಟ, ಕೋರವಂಗಲ

ಚಿ.ಸಂ.31. ಬೂಚೇಶ್ವರ ಲಿಂಗ





ಚಿ.ಸಂ.32. ಗರ್ಭಗೃಹದ ದ್ವಾರಬಂಧ

ಚಿ.ಸಂ.33. ನವರಂಗದ ಶ್ರೀಕಾರ ಕಂಬಗಳು





ಚಿ.ಸಂ.34. ದೇವಕೋಷ್ಠಗಳು, ಸಪ್ತಮಾತೃಕಾ ಮತ್ತು ಸರಸ್ವತಿ



ಚಿ.ಸಂ.35. ಪೂರ್ವ ದಿಕ್ಕಿನ ಭುವನೇಶ್ವರಿ



ಚಿ.ಸಂ. 36. ಪಶ್ಚಿಮ ದಿಕ್ಕಿನ ಭುವನೇಶ್ವರಿ



ಚಿ.ಸಂ. 37. ವಾಯುವ್ಯ ದಿಕ್ಕಿನ ಭುವನೇಶ್ವರಿ



38. ಉತ್ತರ ದಿಕ್ಕಿನ ಭುವನೇಶ್ವರಿ



39. ಈಶಾನ್ಯ ದಿಕ್ಕಿನ ಭುವನೇಶ್ವರಿ



ಚಿ.ಸಂ.40, ನವರಂಗದ ಮಧ್ಯದಂಕಣದ ಭುವನೇಶ್ವರಿ



ಚಿ.ಸಂ.41. ನವರಂಗದ ದ್ವಾರಬಂಧ



ಚಿ.ಸಂ.42. ಸೂರ್ಯ ಶಿಲ್ಪ



ಚಿ.ಸಂ.43. ಮುಖಮಂಟಪದ ಕಂಬಗಳು



ಚಿ.ಸಂ.44. ಮುಖಮಂಟಪದ ಭುವನೇಶ್ವರಿ



ಚಿ.ಸಂ.45. ಮುಖಮಂಟಪದ ಅಧಿಷ್ಠಾನ



ಚಿ.ಸಂ.46. ದೇವಾಲಯದ ಭಿತ್ತಿ, ಪ್ರಸ್ತರ ಮತ್ತು ಹಾರ

## ಬೂಚೇಶ್ವರ ದೇವಾಲಯದ ಭಿತ್ತಿ ಶಿಲ್ಪಗಳು


ಅರ್ಜುನ


ಪ್ರಹ್ಲಾದ


ಉಮಾಮಹೇಶ್ವರ


ಗಜಾಸುರ ಸಂಹಾರಮೂರ್ತಿ


ಭೂವರಾಹ


ಮೋಹಿನಿ


ಕಾಪಾಲಿಕ


ಪ್ರದ್ಯುಮ್ನ


ಅನಂತಶಯನ


ಕಾಳಿಂಗಮರ್ಧನ


ವೇಣುಗೋಪಾಲ


ನಾಗನಾಗಿಣಿ


ರಾವಣ ಕೈಲಾಸಪರ್ವತ ಎತ್ತುತ್ತಿರುವುದು


ಗೋವರ್ಧನ ಗಿರಿಧಾರಿ


ವೃಷಭಾರೂಢ ಉಮಾಮಹೇಶ್ವರ


ದುರ್ಗಿಯ ನರ್ತನಶಿಲ್ಪ



ಭೈರವ



ಗರುಡ



ವಾಮನ ಮತ್ತು ಬಲಿ



ತ್ರಿವಿಕ್ರಮ



ನವನೀತಕೃಷ್ಣ



ಲಕ್ಷ್ಮೀ



ಕೋದಂಡರಾಮ



ಲಕ್ಷ್ಮಣ



ಚಿ.ಸಂ.47. ದಕ್ಷಿಣ ದಿಕ್ಕಿನ ಹಾರ



ಚಿ.ಸಂ.48. ಗರ್ಭಗುಡಿಯ ಶಿಖರ



ಚಿ.ಸಂ.49. ವಿಮಾನದ ಪಾರ್ಶ್ವನೋಟ



ಚಿ.ಸಂ.50. ದೇವಾಲಯದ ಮುಖಮಂಟಪದ ದಕ್ಷಿಣ ದಿಕ್ಕಿನ ದ್ವಾರ



ಚಿ.ಸಂ.51. ಭೈರವ ಗುಡಿ



ಚಿ.ಸಂ.52. ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯ, ಮೊಸಳೆ



ಚಿ.ಸಂ.53. ನಾಗೇಶ್ವರ ದೇವಾಲಯದ ಮುನ್ನೋಟ



ಚಿ.ಸಂ.54. ಗರ್ಭಗೃಹ ಮತ್ತು ದ್ವಾರಬಂಧ



ಚಿ.ಸಂ.55. ಸುಕನಾಸಿಯ ದ್ವಾರಬಂಧದ ಮೇಲ್ಭಾಗ



ಚಿ.ಸಂ.56. ನವರಂಗದ ಶ್ರೀಕಾರ ಕಂಬಗಳು


ಚಿ.ಸಂ.57. ಆಗ್ನೇಯದ ಭುವನೇಶ್ವರಿ


ಚಿ.ಸಂ.58. ದಕ್ಷಿಣದ ಭುವನೇಶ್ವರಿ


ಚಿ.ಸಂ.59. ನೈರುತ್ಯದ ಭುವನೇಶ್ವರಿ


ಚಿ.ಸಂ.60. ಪಶ್ಚಿಮದ ಭುವನೇಶ್ವರಿ


ಚಿ.ಸಂ.61. ವಾಯುವ್ಯದ ಭುವನೇಶ್ವರಿ


ಚಿ.ಸಂ.62. ಉತ್ತರದ ಭುವನೇಶ್ವರಿ


ಚಿ.ಸಂ.63. ಈಶಾನ್ಯದ ಭುವನೇಶ್ವರಿ


ಚಿ.ಸಂ.64. ಪೂರ್ವದ ಭುವನೇಶ್ವರಿ


ಚಿ.ಸಂ.65. ಮಧ್ಯದಂಕಣದ ಭುವನೇಶ್ವರಿ


ಚಿ.ಸಂ.66. ನವರಂಗದ ದ್ವಾರಬಂಧ


ಚಿ.ಸಂ.67. ನಾಗೇಶ್ವರ ದೇವಾಲಯದ ಅಧಿಷ್ಠಾನ



ಚಿ.ಸಂ.68. ದೇವಾಲಯದ ಬಲಪಾರ್ಶ್ವ ನೋಟ



ಚಿ.ಸಂ.69. ದೇವಾಲಯದ ಪಾರ್ಶ್ವನೋಟ

**ನಾಗೇಶ್ವರ ದೇವಾಲಯದ ಭಿತ್ತಿ ಶಿಲ್ಪಗಳು**



ಚಿ.ಸಂ.70. ದಕ್ಷಿಣ ದೇಶಪಾಳಕ



ಚಿ.ಸಂ.71. ದೇವಕೋಷ್ಠ



ಚಿ.ಸಂ.72. ಲಕ್ಷ್ಮೀದೇವಿ, ಶ್ರೀಯಾದೇವಿ



ಚಿ.ಸಂ.73. ಕೌಮಾರಿ



ಚಿ.ಸಂ.74. ಸ್ಥಾನಕ ಗೌರಿ



ಚಿ.ಸಂ.75. ಮಹೇಶ್ವರಿ



ಚಿ.ಸಂ.76. ಮನೋಹರಿ



ಚಿ.ಸಂ.77. ದುರ್ಗಾ



ಚಿ.ಸಂ.78. ವಜ್ರಭೂತ



ಚಿ.ಸಂ.79. ಬ್ರಹ್ಮ



ಚಿ.ಸಂ.80. ಚಿತ್ರಸೇನ



ಚಿ.ಸಂ.81. ಸದಾಶಿವಮೂರ್ತಿ






ಚಿ.ಸಂ.೮೨. ಹರಿಹರ ಚಿ.ಸಂ.೮೩. ನಾರಾಯಣ ಚಿ.ಸಂ.೮೪. ಚಿತ್ರಧರ ಚಿ.ಸಂ.೮೫. ಪಾರ್ವತಿ






ಚಿ.ಸಂ.೮೬. ಚಕ್ರೇಶ್ವರಿ ಚಿ.ಸಂ.೮೭. ದೇವಿ ಶಿಲ್ಪ ಚಿ.ಸಂ.೮೮. ವರಾಹಿ ಚಿ.ಸಂ.೮೯. ದೇವಿ ಶಿಲ್ಪ




ಚಿ.ಸಂ.೯೦. ಹಾರ ಶಿಲ್ಪ ತಾಂಡವೇಶ್ವರ ಚಿತ್ರ.ಸಂ.೯೧. ಅಂದಕಾಸುರ




ಚಿ.ಸಂ.೯೨, ವಿಮಾನದ ಪಶ್ಚಿಮ ನೋಟ ಚಿ.ಸಂ.೯೩. ಶಿಖರ



ಚಿ.ಸಂ.94. ಕಳಸ



ಚಿ.ಸಂ.95. ಹೊಯ್ಸಳ ಲಾಂಛನ



ಮಕರಮುಖ ಪ್ರನಾಳ



ಚಿ.ಸಂ.96. ವೀರಭದ್ರೇಶ್ವರ ದೇವಾಲಯದ ಬಲ ಪಾರ್ಶ್ವನೋಟ, ಶಾಂತಿಗ್ರಾಮ



ಚಿ.ಸಂ.97. ವೀರಭದ್ರ ವಿಗ್ರಹ



ಚಿ.ಸಂ.98. ವೀರಭದ್ರ ವಿಗ್ರಹ ಪೀಠ



ಚಿ.ಸಂ.99. ಸುಕನಾಸಿ ದ್ವಾರಬಂಧ



ಚಿ.ಸಂ.100. ನವರಂಗದಲ್ಲಿನ ಶ್ರೀಕಾರ ಕಂಬಗಳು



ಚಿ.ಸಂ.101. ನವರಂಗದ ಮುಖ್ಯ ಭುವನೇಶ್ವರಿ



ಚಿ.ಸಂ.102. ಮುಖಮಂಟಪ



ಚಿ.ಸಂ.103. ದೇವಾಲಯದ ಎಡಪಾರ್ಶ್ವ ನೋಟ



ಚಿ.ಸಂ.104. ದಕ್ಷಿಣ ದಿಕ್ಕಿನ ದ್ವಾರ



ಚಿ.ಸಂ.105. ದೇವಾಲಯದ ಮುಂದಿನ ಮಂಟಪ



ಚಿ.ಸಂ.106. ಅರ್ಕೇಶ್ವರ ದೇವಾಲಯದ ಮುನ್ನೋಟ, ಸಾಲಗಾಮೆ



ಚಿ.ಸಂ.107. ಸುಕನಾಸಿಯ ದ್ವಾರಬಂಧ



ಚಿ.ಸಂ.108. ನವರಂಗದ ಕಂಬಗಳು



ಚಿ.ಸಂ.109. ದೇವಾಲಯದ ಎಡಪಾರ್ಶ್ವ ನೋಟ



ಚಿ.ಸಂ.110. ದೇವಾಲಯದ ವಿಮಾನ



ಚಿ.ಸಂ.111. ಸೋಮೇಶ್ವರ ದೇವಾಲಯ, ನಿಟ್ಟೂರು



ಚಿ.ಸಂ.112. ಗರ್ಭಗೃಹ ಮತ್ತು ಸುಕನಾಸಿಯ ದ್ವಾರಬಂಧ



ಚಿ.ಸಂ.113. ನವರಂಗ ಮತ್ತು ಕಂಬಗಳು



ಚಿ.ಸಂ.114. ದೇವಾಲಯದ ಎಡ ಪಾರ್ಶ್ವ ನೋಟ



ಚಿ.ಸಂ.115. ದೇವಾಲಯದ ಬಲಭಾಗದ ನೋಟ





ಚಿ.ಸಂ.116. ಕೈಲಾಸೇಶ್ವರ ದೇವಾಲಯ, ಗೊರೂರು

ಚಿ.ಸಂ.117. ಕೈಲಾಸೇಶ್ವರ ಲಿಂಗ





ಚಿ.ಸಂ.118. ಸುಕನಾಸಿಯ ದ್ವಾರಬಂಧ

ಚಿ.ಸಂ.119. ನವರಂಗ ಮತ್ತು ಕಂಬಗಳು



ಚಿ.ಸಂ.120. ದೇವಾಲಯದ ಹಿನ್ನೋಟ

## ವೈಷ್ಣವ ದೇವಾಲಯಗಳು



ಚಿ.ಸಂ.121. ಲಕ್ಷ್ಮೀ ದೇವಿ ದೇವಾಲಯ, ದೊಡ್ಡಗದ್ದವಳ್ಳಿ



ಚಿ.ಸಂ.122. ದೇವಾಲಯದ ಪಾರ್ಶ್ವನೋಟ



ಚಿ.ಸಂ.123. ಕಾಳಿ ಶಿಲ್ಪ



ಚಿ.ಸಂ.124. ಕಾಳಿಗರ್ಭಗುಡಿಯ ದ್ವಾರಬಂಧ



ಚಿ.ಸಂ.125. ಕಾಳಗುಡಿಯ ಮುಂದಿನ ಬೇತಾಳ ಶಿಲ್ಪಗಳು ಕಾಳಗರ್ಭಗುಡಿಯ ಲಲಾಟ ಬಿಂಬದ ಶಿಲ್ಪ



ಚಿ.ಸಂ.126. ನರ್ತನ ಶಿಲ್ಪ ಭುವನೇಶ್ವರಿ ಕಾಳ ಗರ್ಭಗೃಹದ ದ್ವಾರಪಾಲಕಿಯರು (ನಾಗಕನ್ಯೆ-ವಿಷಕನ್ಯೆ)



ಚಿ.ಸಂ.127. ಲಕ್ಷ್ಮೀ ದೇವಿ ಶಿಲ್ಪ ಚಿ.ಸಂ.128. ಲಕ್ಷ್ಮೀದೇವಿ ಗರ್ಭಗೃಹದ ದ್ವಾರಬಂಧ



ಚಿ.ಸಂ.129. ಲಕ್ಷ್ಮಿಗುಡಿಯ ಲಲಾಟಬಿಂಬ ಶಿಲ್ಪ ಚಿ.ಸಂ.130. ಭೈರವ ಶಿಲ್ಪ



ಚಿ.ಸಂ.131. ಭೈರವ ಗುಡಿ ದ್ವಾರಬಂಧ



ಚಿ.ಸಂ.132. ಭೂತನಾಥ ಗುಡಿಯ ಲಿಂಗ ಮತ್ತು ದ್ವಾರಬಂಧ



ಚಿ.ಸಂ.133. ನವರಂಗ ಮತ್ತು ಶ್ರೀಕಾರ ಕಂಬಗಳು



ಅಗ್ನಿ ಶಿಲ್ಪ



ಈಶಾನು



ಚಿ.ಸಂ.134. ದೇವಾಲಯದ ದ್ವಾರಬಂಧ



ಚಿ.ಸಂ.135. ಅಧಿಷ್ಠಾನ ಮತ್ತು ಭಿತ್ತಿ







ಚಿ.ಸಂ.136. ಕಾಳಿ ಶಿಲ್ಪ ಸಿಂಹಮುಖ ಪ್ರನಾಳ ಮಕರ ಪ್ರನಾಳ





ಚಿ.ಸಂ.137. ಕಾಳಿಗುಡಿ ವಿಮಾನ ಚಿ.ಸಂ.138. ಲಕ್ಷ್ಮೀದೇವಿ ವಿಮಾನ



ಚಿ.ಸಂ.139. ಭೈರವ ಗುಡಿ



ಚಿ.ಸಂ.140. ಲಕ್ಷ್ಮೀದೇವಿ ದೇವಾಲಯದ ಪ್ರಾಕಾರ



ಚಿ.ಸಂ.141. ಪ್ರಾಕಾರದ ಗುಡಿ



ಚಿ.ಸಂ.142. ದ್ವಾರಮಂಟಪ



ಚಿ.ಸಂ.143. ಕೇಶವ ದೇವಾಲಯ, ಹೊನ್ನಾವರ



ಚಿ.ಸಂ.144. ಕೇಶವ ಶಿಲ್ಪ



ಚಿ.ಸಂ.145. ಗರ್ಭಗೃಹದ ದ್ವಾರಬಂಧ



ಚಿ.ಸಂ.146. ಸುಕನಾಸಿಯ ಭುವನೇಶ್ವರಿ



ಚಿ.ಸಂ.147. ನವರಂಗ



ಚಿ.ಸಂ.148. ನವರಂಗದ ದ್ವಾರಬಂಧ



ಚಿ.ಸಂ.149. ದೇವಾಲಯದ ದಕ್ಷಿಣ ಭಿತ್ತಿ





ಚಿ.ಸಂ.150. ಕೇಶವ ಚಿ.ಸಂ.151. ಮನ್ಮಥ ಚಿ.ಸಂ.152. ಲಕ್ಷ್ಮೀನಾರಾಯಣ






ಚಿ.ಸಂ.153. ಮೋಹಿನಿ ಶಿಲ್ಪ ಚಿ.ಸಂ.154. ಕೇಶವ ಚಿ.ಸಂ.155. ಜನಾರ್ಧನ ಚಿ.ಸಂ.156. ಉಗ್ರನರಸಿಂಹ






ಚಿ.ಸಂ.157. ಧರಣಿ ವರಾಹ ಚಿ.ಸಂ.158. ವಾಮನ ಚಿ.ಸಂ.159. ಸಂಕರ್ಷಣ ಚಿ.ಸಂ.160. ವೇಣುಗೋಪಾಲ




ಚಿ.ಸಂ.161. ವಿಮಾನ ಚಿ.ಸಂ.162. ಕೇಶವ ದೇವಾಲಯದ ಬಲ ಪಾರ್ಶ್ವನೋಟ





ಚಿ.ಸಂ.163. ಕೋದಂಡರಾಮ ದೇವಾಲಯದ ಪಾರ್ಶ್ವ ನೋಟ, ಅನುಗವಳ್ಳಿ ಚಿ.ಸಂ.164. ಕೋದಂಡರಾಮ ಶಿಲ್ಪ



ಚಿ.ಸಂ.165. ನವರಂಗದ ಸ್ತಂಭ



ಚಿ.ಸಂ.166. ರಾಮ ಲಕ್ಷ್ಮಣ ಮತ್ತು ಸೀತೆ ಉತ್ಸವ ಮೂರ್ತಿಗಳು



ಚಿ.ಸಂ.167. ಮುಖಮಂಟಪ



ಚಿ.ಸಂ.168. ಗರ್ಭಗೃಹದ ಅಧಿಷ್ಠಾನ ಮತ್ತು ಭಿತ್ತಿ



ಚಿ.ಸಂ.169. ಶಿಖರ ಮತ್ತು ಕೈಪಿಡಿ ಗೋಡೆ




ಚಿ.ಸಂ.170. ದೇವಾಲಯದ ದ್ವಾರಮಂಟಪ



ಚಿ.ಸಂ.171. ಯೋಗಾನರಸಿಂಹ ದೇವಾಲಯ, ಶಾಂತಿಗ್ರಾಮ



ಚಿ.ಸಂ.172. ಅಧಿಷ್ಠಾನ



ಚಿ.ಸಂ.173. ದೇವಾಲಯದ ಭಿತ್ತಿ



ಚಿ.ಸಂ.174. ಫಾಂಸಾನ ಶೈಲಿಯ ವಿಮಾನ



ಚಿ.ಸಂ.175. ದೇವಾಲಯದ ಗೋಪುರ



ಚಿ.ಸಂ.176. ಕೀರ್ತಿನಾರಾಯಣ ದೇವಾಲಯದ ಬಲಪಾರ್ಶ್ವ ನೋಟ



ಚಿ.ಸಂ.177. ಗರ್ಭಗೃಹ ಮತ್ತು ದ್ವಾರಬಂಧ



ಚಿ.ಸಂ.178. ಸುಕನಾಸಿಯ ದ್ವಾರಬಂಧ



ಚಿ.ಸಂ.179. ನವರಂಗದ ಶ್ರೀಕಾರ ಕಂಬಗಳು



ಚಿ.ಸಂ.180. ಮುಖಮಂಟಪ



ಚಿ.ಸಂ.181. ಅಧಿಷ್ಠಾನ ಮತ್ತು ಭಿತ್ತಿ



ಚಿ.ಸಂ.182. ದೇವಾಲಯದ ಫಾಂಸಾನ ಶೈಲಿಯ ಶಿಖರ





ಚಿ.ಸಂ. ಚಿ.ಸಂ.183. ಚನ್ನಕೇಶವ ದೇವಾಲಯ, ಮೊಸಳೆ

ಚಿ.ಸಂ.184.ಗರ್ಭಗೃಹದ ದ್ವಾರಬಂಧ





ಚಿ.ಸಂ.185. ಸುಖನಾಸಿ ಭುವನೇಶ್ವರಿ

ಚಿ.ಸಂ.186. ಸುಖನಾಸಿ ದ್ವಾರಬಂಧ



ಚಿ.ಸಂ.187. ನವರಂಗದ ಕಂಬಗಳು





ಚಿ.ಸಂ. 188.ಲಕ್ಷ್ಮೀನಾರಾಯಣ

ಚಿ.ಸಂ.189.ಯೋಗಾನರಸಿಂಹ



ಚಿ.ಸಂ.190. ನವರಂಗದಲ್ಲಿರುವ ಭುವನೇಶ್ವರಿಗಳು



ಚಿ.ಸಂ.191. ನವರಂಗದ ದ್ವಾರಬಂಧ



ಚಿ.ಸಂ.192. ಮುಖಮಂಟಪದ ಭುವನೇಶ್ವರಿ



ಚಿ.ಸಂ.193. ದೇವಾಲಯದ ಭಿತ್ತಿ



ಚಿ.ಸಂ.194.ರತಿ ಮನ್ಮಥ



ಚಿ.ಸಂ.195.ಗರುಡ



ಚಿ.ಸಂ.196. ಭೂವರಾಹ



ಚಿ.ಸಂ.197.ಕಾಳಿಂಗ ಮರ್ಧನ



ಚಿ.ಸಂ.198.ವೇಣುಗೋಪಾಲ



ಚಿ.ಸಂ.199. ಭಿತ್ತಿಯ ದೇವಕೋಷ್ಠ






ಚಿ.ಸಂ. 200. ಉಗ್ರನರಸಿಂಹ ಚಿ.ಸಂ. 201. ಚಾಮರಧಾರಿಣಿ ಚಿ.ಸಂ. 202. ಗೋವರ್ಧನ ಗಿರಿಧಾರಿ ಚಿ.ಸಂ.203. ಬಲಿ ಮತ್ತು ವಾಮನ





ಚಿ.ಸಂ.204. ಕಾಳಾಮುಖಯತಿ ಚಿ.ಸಂ. 205. ಕೇಶವ ಚಿ.ಸಂ. 206. ವಿಮಾನ




ಚಿ.ಸಂ. 207. ಶಿಖರ ಚಿ.ಸಂ.208. ದೇವಾಲಯದ ಬಲಪಾರ್ಶ್ವನೋಟ




ಚಿ.ಸಂ. 209. ಚೆನ್ನಕೇಶವ ದೇವಾಲಯ, ಹಿರಿಕಡಲೂರು ಚಿ.ಸಂ. 210. ನವರಂಗ



ಚಿ.ಸಂ. 211. ಕೇಶವ



ಚಿ.ಸಂ. 212. ನವರಂಗದ ದ್ವಾರಬಂಧ



ಚಿ.ಸಂ. 213. ತೆರೆದ ಮಂಟಪ



ಚಿ.ಸಂ. 214. ಅಧಿಷ್ಠಾನ ಮತ್ತು ಭಿತ್ತಿ



ಚಿ.ಸಂ. 215. ಶಿಖರ







ಚಿ.ಸಂ. 216. ದೇವಾಲಯದ ಮುಂದಿರುವ ಅವಶೇಷಗಳು



ಚಿ.ಸಂ.217. ಹರಿಹರೇಶ್ವರ ದೇವಾಲಯ, ಹರಿಹರಪುರ



ಚಿ.ಸಂ.218. ಸುಖನಾಸಿ ಮತ್ತು ದ್ವಾರಬಂಧ




ಚಿ.ಸಂ. 219. ಅನಂತಶಯನ ಮೂರ್ತಿ



ಚಿ.ಸಂ.220. ಲಲಾಟಬಿಂಬ



ಚಿ.ಸಂ. 221. ನವರಂಗದ ಕಂಬಗಳು



ಚಿ.ಸಂ.222. ನವರಂಗದ ಮುಖ್ಯ ಭುವನೇಶ್ವರಿ



ಚಿ.ಸಂ.223. ದೇವಾಲಯದ ಪಾರ್ಶ್ವನೋಟ



ಚಿ.ಸಂ.224. ಫಾಂಸಾನ ಶಿಖರ



ಚಿ.ಸಂ.225. ಚನ್ನಕೇಶವ ದೇವಾಲಯ, ನಿಟ್ಟೂರು



ಚಿ.ಸಂ.226. ಗರ್ಭಗೃಹ



ಚಿ.ಸಂ.227. ವೇಣುಗೋಪಾಲ



ಚಿ.ಸಂ. 228. ನವರಂಗ



ಚಿ.ಸಂ. 229. ಅಧಿಷ್ಠಾನ ಮತ್ತು ಭಿತ್ತಿ



ಚಿ.ಸಂ.230. ಲಕ್ಷ್ಮೀನಾರಾಯಣ ದೇವಾಲಯ, ಕೆಲವತ್ತಿ



ಚಿ.ಸಂ. 231. ನಾರಾಯಣ



ಚಿ.ಸಂ. 232. ದೇವಾಲಯದ ಪಾರ್ಶ್ವನೋಟ

## ಜೈನ ಬಸದಿಗಳು



ಚಿ.ಸಂ.233. ಶಾಂತಿನಾಥ ಬಸದಿ, ಶಾಂತಿಗ್ರಾಮ



ಚಿ.ಸಂ.234. ಗರ್ಭಗೃಹ



ಚಿ.ಸಂ.235. ಜಿನಶಿಲ್ಪ



ಚಿ.ಸಂ.236. ಪಾರ್ಶ್ವನಾಥ ಬಸದಿ, ಹೆರಗು



ಚಿ.ಸಂ.237. ನವರಂಗದ ಕಂಬಗಳು




ಚಿ.ಸಂ.238. ಭಗ್ನಗೊಂಡಿರುವ ಭುವನೇಶ್ವರಿ

ಚಿ.ಸಂ.239. ಗರ್ಭಗೃಹದ ದ್ವಾರಬಂಧ



ಚಿ.ಸಂ.240. ಆದಿನಾಥ ಬಸದಿ, ಮರ್ಕುಲಿ



ಚಿ.ಸಂ.241. ಆದಿನಾಥ



ಚಿ.ಸಂ.242. ಯಕ್ಷ



ಚಿ.ಸಂ.243. ಚಕ್ರೇಶ್ವರಿ



ಚಿ.ಸಂ.244. ಬಾಹುಬಲಿ ಶಿಲ್ಪ



ಚಿ.ಸಂ.245. ಪಾರ್ಶ್ವನಾಥ ಶಿಲ್ಪ



ಚಿ.ಸಂ.246. ನವರಂಗದ ಕಂಬಗಳು



ಚಿ.ಸಂ.247. ಬಸದಿಯ ಅಧಿಷ್ಠಾನ ಮತ್ತು ಭಿತ್ತಿ



ಚಿ.ಸಂ.248. ಪಾರ್ಶ್ವನಾಥ



ಚಿ.ಸಂ.249. ಬಾಹುಬಲಿ ಶಿಲ್ಪ



ಚಿ.ಸಂ.250. ಬಸದಿಯ ಪ್ರಾಕಾರದ ಗೋಡೆ

## ಶಾಸನೋಕ್ತ ವೀರಗಲ್ಲುಗಳು



ಚಿ.ಸಂ.251. ಶಾಸನ ಸಂಖ್ಯೆ-4



ಚಿ.ಸಂ.252. ಶಾಸನ ಸಂಖ್ಯೆ-18



ಚಿ.ಸಂ.253. ಶಾಸನ ಸಂಖ್ಯೆ-22



ಚಿ.ಸಂ.254. ಶಾಸನ ಸಂಖ್ಯೆ-47



ಚಿ.ಸಂ.255. ಶಾಸನ ಸಂಖ್ಯೆ-72



ಚಿ.ಸಂ.256. ಶಾಸನ ಸಂಖ್ಯೆ-94



ಚಿ.ಸಂ.257. ಶಾಸನ ಸಂಖ್ಯೆ-175



ಚಿ.ಸಂ.258. ಶಾಸನ ಸಂಖ್ಯೆ-97



ಚಿ.ಸಂ.259. ಶಾಸನ ಸಂಖ್ಯೆ-127


ಚಿ.ಸಂ.260. ಶಾಸನ ಸಂಖ್ಯೆ-80


ಚಿ.ಸಂ.261. ಶಾಸನ ಸಂಖ್ಯೆ-23


ಚಿ.ಸಂ.262. ಶಾಸನ ಸಂಖ್ಯೆ-69


ಚಿ.ಸಂ.263. ಶಾಸನ ಸಂಖ್ಯೆ-81


ಚಿ.ಸಂ.264. ಶಾಸನ ಸಂಖ್ಯೆ-19


ಚಿ.ಸಂ.265. ಶಾಸನ ಸಂಖ್ಯೆ-39


ಚಿ.ಸಂ.266. ಶಾಸನ ಸಂಖ್ಯೆ-48


ಚಿ.ಸಂ.267. ಶಾಸನ ಸಂಖ್ಯೆ-70


ಚಿ.ಸಂ.268. ಶಾಸನ ಸಂಖ್ಯೆ-82


ಚಿ.ಸಂ.269. ಶಾಸನ ಸಂಖ್ಯೆ-136


ಚಿ.ಸಂ.270. ಶಾಸನ ಸಂಖ್ಯೆ-139


ಚಿ.ಸಂ.271. ಶಾಸನ ಸಂಖ್ಯೆ-137

# ಶಿಲ್ಪಗಳು



ಚಿ.ಸಂ.272. ಗಣಪತಿ ಶಿಲ್ಪಗಳು, ಮೊಸಳೆ, ಯಲಗುಂದ, ಮಹಾರಾಜ ಪಾರ್ಕ್, ಗೊರೂರು



ಚಿ.ಸಂ.273. ಶಿವಲಿಂಗಗಳು, ಗೊರೂರು, ಮೊಸಳೆ, ಹೆರಗು



ಚಿ.ಸಂ.274. ನಂದಿ ಶಿಲ್ಪಗಳು, ಯಲಗುಂದ, ಮುದುಗೆರೆ, ಮೊಸಳೆ, ಗೊರೂರು



ಚಿ.ಸಂ.275. ಕೇಶವ ಶಿಲ್ಪಗಳು, ನಿಟ್ಟೂರು, ಹಿರಿಕಡಲೂರು, ಮೊಸಳೆ, ಗೊರೂರು





ಚಿ.ಸಂ.276. ಸೂರ್ಯ ಶಿಲ್ಪಗಳು, ಗೊರೂರು, ಕೋರವಂಗಲ



ಚಿ.ಸಂ.277. ಯೋಗಾನರಸಿಂಹ, ಮೊಸಳೆ




ಚಿ.ಸಂ.278. ಭೈರವ ಶಿಲ್ಪಗಳು, ಶಾಂತಿಗ್ರಾಮ, ಹೆರಗು




ಚಿ.ಸಂ.279. ವೀರಭದ್ರ ಶಿಲ್ಪಗಳು, ಶಾಂತಿಗ್ರಾಮ



ಚಿ.ಸಂ.280. ಮಹಿಷಮರ್ಧಿನಿ ಗೊರೂರು



ಚಿ.ಸಂ.281. ಲಕ್ಷ್ಮೀ ಮೊಸಳೆ



ಚಿ.ಸಂ.282. ಲಕ್ಷ್ಮೀ, ಮೊಸಳೆ,




ಚಿ.ಸಂ.283. ಸರಸ್ವತಿ ಶಿಲ್ಪಗಳು, ಗೊರೂರು, ಮೊಸಳೆ



ಚಿ.ಸಂ.284 ಉಮಾಮಹೇಶ್ವರ, ಹೆರಗು





ಚಿ.ಸಂ. 285. ಕಾರ್ತಿಕೇಯ

ಚಿ.ಸಂ. 286. ಸಪ್ತಮಾತೃಕೆಯರು, ಕೋರವಂಗಲ





ಸಪ್ತಮಾತೃಕೆಯರು, ಗೊರೂರು

ಸಪ್ತಮಾತೃಕೆಯರು, ಶಾಂತಿಗ್ರಾಮ









ಚಿ.ಸಂ.287. ದ್ವಾರಪಾಲಕರು, ಕೋರವಂಗಲ, ದೊಡ್ಡಗದ್ದವಳ್ಳಿ

# ಮೈಸೂರು ವಿಶ್ವವಿದ್ಯಾನಿಲಯ

## "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ"

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕರು

ಮಧುಸೂದನ, ಎಂ.ಎನ್.
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006

ಮಾರ್ಗದರ್ಶಕರು

ಡಾ.ಕೆ.ಪ್ರಭು
ಎಂ.ಎ., ಪಿಎಚ್.ಡಿ.,
ಸಹಾಯಕ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006


**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**

**2019**

## ಅಧ್ಯಾಯ–7

## ಉಪಸಂಹಾರ

ಭೂಮಿಯು ಒಂದು ವಿಶಿಷ್ಟ ಗ್ರಹವಾಗಿದ್ದು ಇದರ ಮೇಲೆ ಮಾನವನು ಒಳಗೊಂಡಂತೆ ಹಲವಾರು ಜೀವ ಸಂಕುಲಗಳು ಭೌಗೋಳಿಕ ಸಂರಚನೆಗೆ ಅನುಗುಣವಾಗಿ ವಿಭಿನ್ನ ಲಕ್ಷಣಗಳನ್ನು ಮತ್ತು ಜೀವನ ಕ್ರಮಗಳನ್ನು ರೂಢಿಸಿಕೊಂಡು ಜೀವಿಸುತ್ತಿವೆ. ಆದರೆ ಈ ಎಲ್ಲಾ ಜೀವ ಸಂಕುಲಗಳಲ್ಲಿ ಮಾನವನು ಒಂದು ವಿಶಿಷ್ಟ ಜೀವಿಯಾಗಿದ್ದು ತನ್ನದೇ ಆದ ವಿಭಿನ್ನ ಆಲೋಚನಾ ಶಕ್ತಿಯಿಂದ ಇಡೀ ಜೈವಿಕ ಪರಂಪರೆಯ ಮೇಲೆ ಹಿಡಿತ ಸಾಧಿಸಿದ್ದಾನೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಮಾನವನು ಭೂಮಿಯ ಮೇಲೆ ಕಾಣಿಸಿ ಕೊಂಡಾಗಿನಿಂದ ಹಲವಾರು ವಿಕಾಸ ಪ್ರಕ್ರಿಯೆಗಳಿಗೆ ಒಳಗಾಗುತ್ತಾ ಬಂದಿದ್ದಾನೆ. ಈ ವಿಕಾಸ ಪ್ರಕ್ರಿಯೆಯೊಳಗೆ ಈತನು ತನ್ನದೇ ಆದ ಸಂಸ್ಕೃತಿಯನ್ನು ಪೋಷಿಸುತ್ತಾ ಬಂದಿದ್ದು, ಈ ಸಂಸ್ಕೃತಿಯ ಭಾಗವಾಗಿ ದೈವಿ ಶಕ್ತಿಯೊಂದನ್ನು ರೂಢಿಸಿಕೊಂಡು ಅದರಲ್ಲಿ ನಂಬಿಕೆ, ಭಕ್ತಿ, ಭಯ ಹೀಗೆ ಹಲವು ಭಾವನೆಗಳನ್ನು ವ್ಯಕ್ತಪಡಿಸುವ ಮೂಲಕ ಜೀವಿಸುತ್ತಾ ಬಂದಿದ್ದಾನೆ. ಪ್ರಾರಂಭದಲ್ಲಿ ಪ್ರಕೃತಿ ಆರಾಧಕನಾಗಿದ್ದ ಈತನಿಗೆ ಗಿಡ, ಮರ, ನದಿ ಇತ್ಯಾದಿ ಪರಿಸರದ ಅಂಶಗಳು ಪೂಜನೀಯವಾದುದಲ್ಲದೇ ಇವುಗಳ ಸೃಷ್ಟಿಯ ಹಿನ್ನೆಲೆಯಾಗಿ ಒಂದು ಅಗೋಚರ ಶಕ್ತಿಯಿದೆ ಎಂಬ ಅರಿವು ಮೂಡಿದಾಗ ಆ ಶಕ್ತಿಗೆ ಒಂದು ರೂಪಕೊಡಲು ಯತ್ನಿಸಿದನು. ಹೀಗೆ ನೀಡಿದ ಆ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಆಲಯವನ್ನು ಕಟ್ಟಲು ಪ್ರಾರಂಭಿಸಿದ್ದರ ಪರಿಣಾಮವಾಗಿ ದೇವಾಲಯಗಳ ರಚನೆಗೆ ನಾಂದಿಯಾಯಿತು.

ಮಾನವನ ಜೀವನದಲ್ಲಿ ದೇವಾಲಯಗಳು ಮಹತ್ತರವಾದ ಪಾತ್ರವನ್ನು ವಹಿಸಿವೆ. ದೇವಾಲಯವೆಂದರೆ ದೇವರ ವಾಸಸ್ಥಾನ. ದೇವಾಲಯವನ್ನು 'ಆಯತನ'ವೆನ್ನುವುದೂ ಉಂಟು. ಆಯತನವೆಂದರೆ ದೇವತಾ ಶಕ್ತಿಯು ಆಗಮಿಸುವ ಪವಿತ್ರ ಸ್ಥಳ. ಇದು ದೇವತೆಗಳಿಗೆ ವಿಶ್ರಾಂತಿ ಸ್ಥಳವೂ ಆಗಿದೆ. ದೇವಾಲಯವು ದೇವತೆಗಗಳಿಗೆ ವಾಸಸ್ಥಾನವಾದ್ದರಿಂದ ವಿಶೇಷವಾಗಿಯೂ ವೈಭವಯುತವಾಗಿಯೂ ಇರಬೇಕು ಎಂಬ ಕಾರಣದಿಂದ ವಿಭಿನ್ನವಾಗಿ ನಿರ್ಮಾಣ ಮಾಡಲಾಗುತ್ತಿತ್ತು.

ದೇವಾಲಯಗಳು ಅಂದಿನ ಸಮಾಜದ ವಿವಿಧ ಚಟುವಟಿಕೆಗಳ ಕೇಂದ್ರ ಬಿಂದುವಾಗಿದ್ದು, ಪರಮಾತ್ಮನನ್ನು ಪಾಮರ ಜನರಿಗೆ ಎಟುಕುವಂತೆ ಮಾಡುವ ಸಾಧನವಾಗಿದ್ದವು. ಇವು ಕೇವಲ ಆಧ್ಯಾತ್ಮ ಕೇಂದ್ರಗಳಾಗಿರದೇ ವಿದ್ಯಾಕೇಂದ್ರಗಳೂ ಆಗಿದ್ದು,

ಸಂಗೀತ, ನೃತ್ಯ ಇತ್ಯಾದಿ ಕಲೆಗಳಿಗೆ ಆಸರೆಯಾಗಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದವು. ದೇವಾಲಯಗಳ ನಿರ್ಮಾಣದಲ್ಲಿ ಜನಸಾಮಾನ್ಯರು ನೋಡಿ ತಿಳಿಯುವಂತಹ ಹಲವಾರು ಅಂಶಗಳನ್ನು ದೃಶ್ಯ ಮಾಧ್ಯಮದ ಮೂಲಕ ಚಿತ್ರಿಸಲಾಗುತ್ತಿತ್ತು. ಪರಮಾತ್ಮನಿಗಿರುವ ವಿಶೇಷ ಗುಣಗಳನ್ನು ಮತ್ತು ಧರ್ಮ, ಅರ್ಥ. ಕಾಮ ಹಾಗೂ ಮೋಕ್ಷಗಳ ಪರಿಕಲ್ಪನೆಯನ್ನು ತಿಳಿಸುವ ಸಲುವಾಗಿ ಮೂರ್ತ ರೂಪದಲ್ಲಿ ಶಿಲ್ಪಗಳನ್ನು ದೇವಾಲಯದ ವಿವಿಧ ಭಾಗಗಳಲ್ಲಿ ಅಳವಡಿಸಲಾಯಿತು. ಭಿತ್ತಿಯಲ್ಲಿರುವ ದೇವತಾ ಸ್ವರೂಪಗಳು, ಪೌರಾಣಿಕ ಸನ್ನಿವೇಶಗಳು, ಧಾರ್ಮಿಕ ಪರಂಪರೆಯ ಬಗ್ಗೆ ತಿಳಿಸಿದರೆ ಪ್ರಾಣಿ–ಪಕ್ಷಿ ಸಂಕುಲಗಳು, ವೃಕ್ಷವಲ್ಲಿಗಳು, ಗಜಾಶ್ವಬಲ, ಸಾಲಭಂಜಿಕೆಯ ಸಂಕೇತಗಳು ಅಂದಿನ ಆರ್ಥಿಕ, ನೈಸರ್ಗಿಕ ಅಂಶಗಳನ್ನು ಹಾಗೂ ಕಲಾ ಪ್ರೌಢಿಮೆಯ ವೈಭವವನ್ನು ಪ್ರತಿಬಿಂಬಿಸುತ್ತಿದ್ದವು.

ಈ ತರಹದ ಉನ್ನತವಾದ ಸಾಂಸ್ಕೃತಿಕ ಪರಂಪರೆಯನ್ನು ಪ್ರಾಚೀನ ಕಾಲದಿಂದ ಇಂದಿನವರೆಗೂ ಉಳಿಸಿಕೊಂಡು ಬಂದಿರುವ ನಮ್ಮ ನಾಡಿನ ಪ್ರದೇಶಗಳ ಸಾಲಿನಲ್ಲಿ ಹಾಸನ ಜಿಲ್ಲೆಯು ಸಹ ಒಂದು. ಹೊಯ್ಸಳ ಅರಸರ ರಾಜಧಾನಿಯಾಗಿ ಮೆರೆದ ಈ ಜಿಲ್ಲೆಯು ತನ್ನ ಶಿಲ್ಪಕಲಾ ವೈಭವದಿಂದ ಜಾಗತಿಕ ಭೂಪಟದಲ್ಲಿ ಚಿರಸ್ಥಾಯಿಯಾದ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿ ಹೊಯ್ಸಳರ ಕಾಲದ ನೂರಾರು ಸುಂದರ ದೇವಾಲಯಗಳು ಮತ್ತು ಶಾಸನಗಳು ಕಂಡುಬಂದಿದ್ದು, ಇದನ್ನು 'ಶಿಲ್ಪಕಲೆಗಳ ಕಣಜ' ಎಂದು ಕರೆದರೆ ಉತ್ಪ್ರೇಕ್ಷೆಯಾಗಲಾರದು. ಈ ಜಿಲ್ಲೆಯು ಹಾಸನ, ಹೊಳೆನರಸೀಪುರ, ಅರಕಲಗೂಡು, ಸಕಲೇಶಪುರ, ಆಲೂರು, ಬೇಲೂರು, ಅರಸೀಕೆರೆ ಮತ್ತು ಚನ್ನರಾಯಪಟ್ಟಣ ಎಂಬ 8 ತಾಲೂಕುಗಳನ್ನು ಒಳಗೊಂಡಿದೆ. ಇವುಗಳಲ್ಲಿ ಹಾಸನ ತಾಲೂಕು ಹೊಯ್ಸಳ ಅರಸರ ನೇರ ಆಳ್ವಿಕೆಗೆ ಒಳಪಟ್ಟಿದ್ದಂತಹ ಪ್ರಮುಖ ಪ್ರದೇಶವಾಗಿದ್ದು, ಇವರ ಪ್ರಭಾವದಿಂದಾಗಿ ಇಲ್ಲಿ ಹಲವಾರು ಸುಂದರ ದೇವಾಲಯಗಳು ನಿರ್ಮಾಣವಾಗಿದ್ದು, ಇವು ನಮ್ಮ ಸಂಸ್ಕೃತಿಯ ಭಾಗವಾಗಿ ಉಳಿದುಬಂದಿವೆ. ನಮ್ಮ ಪರಂಪರೆಯ ಉದಾತ್ತ ಅಂಶಗಳನ್ನು ಒಳಗೊಂಡಿರುವ ಈ ದೇವಾಲಯಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿದ್ದು, ಪ್ರಸ್ತುತ ಸಂಶೋಧನೆಯಲ್ಲಿ ಹಾಸನ ತಾಲೂಕಿನ ಹೊಯ್ಸಳರ ಆಳ್ವಿಕೆಗೆ ಸೀಮಿತವಾದಂತೆ "ಹಾಸನ ತಾಲೂಕಿನ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ಅಧ್ಯಯನ" ಎಂಬ ಮಹಾಪ್ರಬಂಧದ ರಚನೆಯ ಮೂಲಕ ಹೊಯ್ಸಳರ ಕಾಲದ ದೇವಾಲಯಗಳು, ಶಾಸನಗಳು, ಶಿಲ್ಪಗಳು ಮತ್ತು ಸ್ಮಾರಕ ಶಿಲ್ಪಗಳಾದ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ವಿವರಣಾತ್ಮಕವಾಗಿ ವಿವರಿಸಲಾಗಿದೆ.

ಈ ತಾಲೂಕಿನ ಪ್ರತಿಯೊಂದು ಗ್ರಾಮಕ್ಕೂ ಕ್ಷೇತ್ರಕಾರ್ಯವನ್ನು ಕೈಗೊಂಡು ತನ್ನ ಪರಿಮಿತಿಯಲ್ಲಿ ಬರುವ ದೇವಾಲಯಗಳನ್ನು ಅಂದರೆ ಹೊಯ್ಸಳರ ಕಾಲದ ದೇವಾಲಯಗಳನ್ನು ದಾಖಲೀಕರಣ ಮಾಡುವುದರ ಜೊತೆಗೆ ಅದರ ಕಲೆ ಮತ್ತು ವಾಸ್ತುಶಿಲ್ಪ, ಶಿಲ್ಪಗಳ ವೈಶಿಷ್ಟ್ಯ ಮತ್ತು ಸ್ಮಾರಕ ಶಿಲ್ಪಗಳಾದ ಶಾಸನೋಕ್ತ ವೀರಗಲ್ಲುಗಳ ಅಂಶಗಳನ್ನು ಕುರಿತಂತೆ ವಿವರಣಾತ್ಮಕವಾಗಿ ಈ ಪ್ರೌಢಪ್ರಬಂಧದಲ್ಲಿ ವಿವರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದೇನೆ. ಹೊಯ್ಸಳ ದೇವಾಲಯಗಳ ಅಧ್ಯಯನಕ್ಕಾಗಿ ಹಾಸನ ತಾಲೂಕಿನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿಗಳನ್ನು ಕಲೆ ಹಾಕುವಾಗ ಅನೇಕ ವಿಭಿನ್ನ ಪರಿಸ್ಥಿತಿಗಳನ್ನು ಎದುರಿಸಬೇಕಾಯಿತು. ಅಂದರೆ ನನ್ನ ಅಧ್ಯಯನದ ಮೂಲ ವಿಷಯಗಳಾದ ದೇವಾಲಯಗಳು, ಶಿಲ್ಪಗಳು, ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳ ಬಗ್ಗೆ ಸ್ಥಳೀಯರನ್ನು ವಿಚಾರಿಸಿದಾಗ ಅವರಲ್ಲಿನ ನಿರ್ಲಕ್ಷ್ಯ, ಅನುಮಾನ, ಆಸಕ್ತಿ ಮತ್ತು ಉತ್ಸಾಹ ಪೂರ್ವಕವಾಗಿ ತಮ್ಮ ಪರಿಸರದ ಸಂಸ್ಕೃತಿ, ಗ್ರಾಮಗಳ ಐತಿಹಾಸಿಕ ಹಿನ್ನೆಲೆ, ಪುರಾಣಗಳು ಮತ್ತು ಸ್ಮಾರಕಗಳ ಬಗ್ಗೆ ಮಾಹಿತಿಯನ್ನು ಒದಗಿಸಿದರು. ಅಲ್ಲದೇ ನಮ್ಮಿಂದಲೂ ಸಹ ಅವರ ಗ್ರಾಮದ ಸ್ಮಾರಕಗಳು ಮತ್ತು ಶಾಸನಗಳ ಕಾಲಮಾನ ಮತ್ತು ಅವುಗಳ ವೈಶಿಷ್ಟ್ಯದ ಬಗ್ಗೆ ಮಾಹಿತಿಯನ್ನು ಕೇಳಿ ಪಡೆದರು. ಕ್ಷೇತ್ರಕಾರ್ಯದಲ್ಲಿ ಕಂಡುಬಂದಂತಹ ಪ್ರಮುಖ ಅಂಶವೇನೆಂದರೆ ಕೆಲವು ದೇವಾಲಯಗಳು ಶಿಥಿಲಾವಸ್ಥೆಯಲ್ಲಿರುವುದರಿಂದ ಮತ್ತು ಅದರಲ್ಲಿ ಆರಾಧನೆಗೆ ಒಳಪಡುವ ಮೂರ್ತಿಗಳು ಇಲ್ಲವಾದ್ದರಿಂದ ಈ ದೇವಾಲಯಗಳು ಜನರ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಹಾಗೂ ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರ ಪಡಿಸುವ ಉದ್ದೇಶದಿಂದ ಅತ್ಯಂತ ಸುಂದರ ಕಲಾತ್ಮಕ ಅಂಶಗಳಿರುವ ದೇವಾಲಯಗಳ ಭಿತ್ತಿ ಮತ್ತು ಶಿಲ್ಪಗಳಿಗೆ ಸುಣ್ಣ-ಬಣ್ಣ ಮತ್ತು ಎಣ್ಣೆಯನ್ನು ಬಳಿದು ಅವುಗಳ ಮೂಲ ಸೌಂದರ್ಯವು ಗೋಚರಿಸದಂತೆ ಮಾಡಿರುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಹಾಗೂ ಕೆಲವು ಮೂಲ ದೇವಾಲಯಗಳನ್ನೇ ಕೆಡವಿ ಹೊಸದಾಗಿ ನಿರ್ಮಿಸಿರುವುದರಿಂದ ಆ ದೇವಾಲಯದ ಮೂಲ ಸಂಸ್ಕೃತಿಯ ಕುರುಹುಗಳು ನಾಶವಾಗಿರುವುದು ಸಹ ಒಂದು ಪ್ರಮುಖವಾದ ವಿಷಾದನೀಯ ಅಂಶವಾಗಿದೆ.

**ಹಾಸನ ತಾಲೂಕಿನ ಹೊಯ್ಸಳ ದೇವಾಲಯಗಳ ಅಧ್ಯಯನದಲ್ಲಿ ವಿಶೇಷ ಅಂಶಗಳು**

ಒಂದು ಸಂಸ್ಕೃತಿಯ ನಿರ್ಮಾಣ ಮತ್ತು ಬೆಳವಣಿಗೆಯಲ್ಲಿ ಭೌಗೋಳಿಕ ಅಂಶಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಅದೇ ರೀತಿಯಾಗಿ ಹಾಸನ ತಾಲೂಕಿನಲ್ಲಿ ಹೊಯ್ಸಳರ ಆಳ್ವಿಕೆ ಮತ್ತು ಇವರ ಕಾಲದ ದೇವಾಲಯಗಳ ನಿರ್ಮಾಣದ ಮೇಲೆ ಅಲ್ಲಿನ ಭೌಗೋಳಿಕ ಅಂಶಗಳು ಪ್ರಭಾವ ಬೀರಿರುವುದನ್ನು ಅಲ್ಲಗಳೆಯುವಂತಿಲ್ಲ. ಈ ತಾಲೂಕು ಕಸಬಾ,

ಸಾಲಗಾಮೆ, ಕಟ್ಟಾಯ, ದುದ್ದ ಮತ್ತು ಶಾಂತಿಗ್ರಾಮ ಎಂಬ 5 ಹೋಬಳಿಗಳನ್ನು ಹೊಂದಿದ್ದು, ಇವುಗಳಲ್ಲಿ ಕಸಬಾ, ಕಟ್ಟಾಯ, ಸಾಲಗಾಮೆ ಮತ್ತು ಶಾಂತಿಗ್ರಾಮ ಹೋಬಳಿಯ ಪಶ್ಚಿಮ ಭಾಗವು ಅರೆಮಲೆನಾಡು ವಾತಾವರಣವನ್ನು ಹೊಂದಿದ್ದರೆ ದುದ್ದ ಹೋಬಳಿಯು ಬಯಲು ಸೀಮೆಯ ವಾತಾವರಣವನ್ನು ಹೊಂದಿದೆ. ಸಮುದ್ರಮಟ್ಟಕ್ಕಿಂತ ಎತ್ತರದ ಭೂ ಪ್ರದೇಶವನ್ನು ಹೊಂದಿರುವ ಈ ತಾಲೂಕು ಫಲವತ್ತಾದ ವ್ಯವಸಾಯ ಯೋಗ್ಯ ಭೂಮಿಯನ್ನು ಹೊಂದಿದ್ದು, ಇಲ್ಲಿ ಹೇಮಾವತಿ, ಯಗಚಿ ಮತ್ತು ವಾಟೆಹೊಳೆ ನದಿಗಳು ಹರಿಯುತ್ತವೆ. ಫಲವತ್ತಾದ ಭೂ ಪ್ರದೇಶ ಮತ್ತು ನದಿಗಳ ಹರಿಯುವಿಕೆಯ ಪ್ರಭಾವದಿಂದಾಗಿ ಈ ತಾಲೂಕು ಪ್ರಮುಖವಾಗಿ ಕೃಷಿ ಆಧಾರಿತ ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಲು ಕಾರಣವಾಗಿದೆ. ಒಟ್ಟಾರೆಯಾಗಿ ಈ ಪ್ರದೇಶ ಪ್ರಾಚೀನ ಕಾಲದಿಂದಲೂ ರಾಜಕೀಯ ಮತ್ತು ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಲೂ ಈ ಭೌಗೋಳಿಕ ಅಂಶಗಳು ಪ್ರಭಾವ ಬೀರಿವೆ ಎಂದು ಮನಗಾಣಬೇಕಾಗುತ್ತದೆ.

ಹಾಸನ ತಾಲೂಕಿನ ರಾಜಕೀಯ ಇತಿಹಾಸವನ್ನು ಶಾಸನಗಳ ಆಧಾರದ ಮೇಲೆ ನೋಡಿದಾಗ ಈ ಪ್ರದೇಶವು ಪ್ರಾಚೀನ ಕಾಲದಲ್ಲಿ ಗಂಗರ ಆಳ್ವಿಕೆಯ ಸಂದರ್ಭದಲ್ಲಿ ಗಂಗವಾಡಿ ೯೬,೦೦೦ ಪ್ರದೇಶದ ವ್ಯಾಪ್ತಿಯೊಳಗೆ ಕಂಡುಬಂದಿದ್ದು, ಇಲ್ಲಿ ನೀರ್ಗುಂದ ಮತ್ತು ಸೀಗೆನಾಡುಗಳು ಪ್ರಮುಖ ಆಡಳಿತ ವಿಭಾಗಗಳಾಗಿದ್ದವು. ಇಲ್ಲಿ ಗಂಗರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಇವರ ಸಾಮಂತರು ಹಾಗೂ ವಿವಿಧ ಪಾಳೆಯ ಪಟ್ಟುಗಳನ್ನು ಹೊಂದಿದ್ದ ಪಾಳೆಯಗಾರರು ಆಳ್ವಿಕೆ ನಡೆಸಿರುವುದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಈ ತಾಲೂಕಿನಲ್ಲಿ ಒಟ್ಟು 219 ಶಾಸನಗಳು ಕಂಡುಬಂದಿದ್ದು, ಇವುಗಳಲ್ಲಿ ಶೇ.5೦ಕ್ಕೂ ಹೆಚ್ಚು ಶಾಸನಗಳು ಹೊಯ್ಸಳರ ಆಳ್ವಿಕೆಯನ್ನು ಪ್ರತಿಬಿಂಬಿಸುತ್ತವೆ.

ಹೊಯ್ಸಳರ ರಾಜಕೀಯ ಇತಿಹಾಸವನ್ನು ತಾಲೂಕಿಗೆ ಸೀಮಿತವಾದಂತೆ ನೋಡುವುದಾದರೆ ವಿನಯಾದಿತ್ಯನ ಆಳ್ವಿಕೆಯನ್ನು ತಿಳಿಸುವ ನಿಟ್ಟೂರಿನ ಶಾಸನವು ಪ್ರಥಮವಾಗಿ ದಾಖಲಾಗುತ್ತದೆ. ಈ ಶಾಸನದ ಪ್ರಕಾರ ವಿನಯಾದಿತ್ಯನು ಚಾಳುಕ್ಯರ ಮಾಂಡಲೀಕನಾಗಿದ್ದನೆಂಬುದು ತಿಳಿದುಬರುತ್ತದೆ. ಈತನ ನಂತರ ಅಧಿಕಾರಕ್ಕೆ ಬಂದ ಒಂದನೇ ಬಲ್ಲಾಳನಿಗೆ ಸಂಬಂಧಿಸಿದ ಎರಡು ಶಾಸನಗಳು ಗುಡ್ಡದ ತೆರಣ್ಯ ಗ್ರಾಮದಲ್ಲಿ ದೊರೆತಿದ್ದು, ಇವುಗಳಲ್ಲಿ ಒಂದು ಶಾಸನವು ಒಂದನೇ ಬಲ್ಲಾಳನು ಕೊಂಗಾಳ್ವ ದೇವನ ಮೇಲೆ ದಾಳಿ ಮಾಡಿದ ವಿಷಯವನ್ನು ಉಲ್ಲೇಖಿಸುತ್ತದೆ. ಒಂದನೇ ಬಲ್ಲಾಳನ ನಂತರ ವಿಷ್ಣುವರ್ಧನನು ಇಲ್ಲಿ ಆಳ್ವಿಕೆ ನಡೆಸಿರುವುದಕ್ಕೆ ಪೂರಕವಾಗಿ 16 ಶಾಸನಗಳು ಕಂಡುಬರುತ್ತವೆ. ಇವುಗಳಲ್ಲಿ

ದೊಡ್ಡಗದ್ದವಳ್ಳಿಯ ಶಾಸನವು ಪ್ರಥಮವಾದುದ್ದು. ಇದು ಲಕ್ಷ್ಮಿದೇವಿ ದೇವಾಲಯ ಎಂಬ ಚತುಷ್ಕೂಟ ದೇವಾಲಯದ ನಿರ್ಮಾಣ ಮತ್ತು ಇದರ ವಾಸ್ತು ಪ್ರಕಾರಗಳನ್ನು ಹೆಸರಿಸಿರುವುದು ವಿಶೇಷವಾಗಿದೆ. ಕೆಲವತ್ತಿ ಗ್ರಾಮದ ಕ್ರಿ.ಶ.1123ರ ಶಾಸನವು ವಿಷ್ಣುವರ್ಧನನ ಸಹೋದರ ಉದಯಾದಿತ್ಯನು ಇದೇ ಗ್ರಾಮದಲ್ಲಿ ಮರಣ ಹೊಂದಿದ ವಿಷಯವನ್ನು ಉಲ್ಲೇಖಿಸಿದ್ದು, ವಿಷ್ಣುವರ್ಧನನು ತನ್ನ ತಮ್ಮನ ನೆನಪಿಗಾಗಿ ಪರೋಕ್ಷ ವಿನಯದ ರೂಪದಲ್ಲಿ ಈ ಗ್ರಾಮವನ್ನು ಅಗ್ರಹಾರವಾಗಿ ಮಾರ್ಪಡಿಸಿ ದಾನ ನೀಡಿದ ಅಂಶವನ್ನು ತಿಳಿಸುತ್ತದೆ. ಪೂಮಗಾಮೆ ಗ್ರಾಮದ ಕ್ರಿ.ಶ.1139ರ ಶಾಸನವು ಕಲ್ಯಾಣಿ ಚಾಳುಕ್ಯರ ದೊರೆ 3ನೇ ಸೋಮೇಶ್ವರನ ಬಿರುದಾವಳಿಗಳನ್ನು ವರ್ಣಿಸಿ ನಂತರ ವಿಷ್ಣುವರ್ಧನನ ಬಿರುದುಗಳನ್ನು ವರ್ಣಿಸುತ್ತದೆ. ಇದರಿಂದ ತಿಳಿದುಬರುವ ಪ್ರಮುಖ ಅಂಶವೇನೆಂದರೆ ವಿಷ್ಣುವರ್ಧನನ ಆಳ್ವಿಕೆಯ ಕೊನೆಯ ಕಾಲಘಟ್ಟದಲ್ಲೂ ಸಹ ಕಲ್ಯಾಣಿ ಚಾಳುಕ್ಯರ ಅಧಿಪತ್ಯದಿಂದ ಹೊಯ್ಸಳರು ಪೂರ್ಣವಾಗಿ ಹೊರಬಂದಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ವಿಷ್ಣುವರ್ಧನನು ಉತ್ತಮ ಕಲಾಭಿರುಚಿಯುಳ್ಳ ವ್ಯಕ್ತಿಯಾಗಿದ್ದು, ಈತನ ಆಳ್ವಿಕೆಯ ಕಾಲದಲ್ಲಿ ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ, ಶಾಂತಿಗ್ರಾಮದ ಧರ್ಮೇಶ್ವರ ಮತ್ತು ಹೊನ್ನಾವರದ ಕೇಶವ ದೇವಾಲಯಗಳು ನಿರ್ಮಾಣವಾದವು. ವಿಷ್ಣುವರ್ಧನನ ನಂತರ ಇವನ ಮಗ ಒಂದನೇ ನರಸಿಂಹನು ಈ ಪ್ರದೇಶವನ್ನು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ 20 ಶಾಸನಗಳು ದೊರೆತಿವೆ. ಇವುಗಳಲ್ಲಿ ಕ್ರಿ.ಶ.1160ರ ಕೋರವಂಗಲದ ಶಾಸನ ಮತ್ತು ಕ್ರಿ.ಶ.1170ರ ಜಕ್ಕೇನಹಳ್ಳಿ ಶಾಸನಗಳು ಪ್ರಮುಖವಾಗಿವೆ. ಏಕೆಂದರೆ ಈ ಎರಡೂ ಶಾಸನಗಳು ಒಂದನೇ ನರಸಿಂಹನ ಅಧಿಕಾರಿಯಾಗಿದ್ದ ಗೋವಿಂದನ ವಂಶಾವಳಿಯನ್ನು ತಿಳಿಸುತ್ತವೆ. ಈ ವಂಶಾವಳಿಯ ಪ್ರಕಾರ ಮದ್ದಿಮಯ್ಯ ಮತ್ತು ಮಾಕವ್ವೆ ದಂಪತಿಗಳಿಗೆ ಗೋವಿಂದ, ನಾಕಣ(ನಾಕುಮಯ್ಯ), ಕಾಳಿಮಯ್ಯ ಮತ್ತು ಬೂಚಿರಾಜ ಎಂಬ ನಾಲ್ಕು ಜನ ಪುತ್ರರಿದ್ದು, ಇವರು ಒಂದನೇ ನರಸಿಂಹನ ಕಾಲದಲ್ಲಿ ಮಹಾಪ್ರಧಾನರು, ಶ್ರೀಕರಣರು ಹಾಗೂ ತಂತ್ರಾಧಿಕಾರಿಗಳು ಆಗಿದ್ದರೆಂದು ಹಾಗೂ ಗೋವಿಂದನು ಗೋವಿಂದೇಶ್ವರ, ನಾಕಣನು ನಾಕೇಶ್ವರ ಮತ್ತು ಬೂಚರಾಜನು ಬೂಚೇಶ್ವರ ಎಂಬ ದೇವಾಲಯಗಳನ್ನು ಕೋರವಂಗಲದಲ್ಲಿ ಹಾಗೂ ಕಾಳಿಮಯ್ಯನು ಜಕ್ಕೇನಹಳ್ಳಿಯಲ್ಲಿ ಕಾಳೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ಅಂಶಗಳು ತಿಳಿದುಬರುತ್ತವೆ. ಒಂದನೇ ನರಸಿಂಹನ ನಂತರ ಈತನ ಮಗ ಎರಡನೇ ಬಲ್ಲಾಳನು ಹೊಯ್ಸಳ ಸಿಂಹಾಸನವನ್ನು ಏರಿದನು. ಹಾಸನ ತಾಲೂಕಿನಲ್ಲಿ ಹೊಯ್ಸಳ ಅರಸರು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ ದಾಖಲಾಗಿರುವ ಶಾಸನಗಳಲ್ಲಿ ಅತೀ ಹೆಚ್ಚಿನ ಶಾಸನಗಳು ಕಂಡುಬರುವುದು ಎರಡನೇ ಬಲ್ಲಾಳನ ಆಳ್ವಿಕೆಯ ಕಾಲಘಟ್ಟದಲ್ಲಿ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ. ಕ್ರಿ.ಶ.1173ರಲ್ಲಿ ಬಲ್ಲಾಳನ ಪಟ್ಟಾಭಿಷೇಕದ ದಿನದಂದೇ

ಕೋರವಂಗಲದಲ್ಲಿ ಬೂಚಿರಾಜನಿಂದ ಬೂಚೇಶ್ವರ ದೇವಾಲಯ ಹಾಗೂ ಮರ್ಕುಲಿ ಗ್ರಾಮದಲ್ಲಿ ಸಂಧಿವಿಗ್ರಹಿ ಬೂಚಿಮಯ್ಯನಿಂದ ತ್ರಿಕೂಟ ಜೈನ ಬಸದಿಯು ನಿರ್ಮಾಣವಾಗಿರುವುದು ಒಂದು ವಿಶೇಷ ಅಂಶವಾಗಿದೆ. ಹಾಗೂ ಈ ಎರಡು ದೇವಾಲಯಗಳ ನಿರ್ಮಾತೃಗಳ ಹೆಸರು ಒಂದೇ ಎಂಬಂತೆ ಕಂಡುಬಂದರೂ ಸಹ ಇವರು ಬೇರೆ ಬೇರೆ ವ್ಯಕ್ತಿಗಳೆಂದು ಅಲ್ಲಿನ ಶಾಸನ ಪಠ್ಯದಿಂದ ತಿಳಿಯುತ್ತದೆ. ಹೆರಗು ಗ್ರಾಮದ ಕ್ರಿ.ಶ.1218ರ ಶಾಸನವು ಎರಡನೇ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಜಯಭಟ್ಟಯ್ಯ ನಾಯಕನು ಜೈತನಾರಾಯಣ ಎಂಬ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ. ಎರಡನೇ ಬಲ್ಲಾಳನ ನಂತರ ಎರಡನೇ ನರಸಿಂಹನು ಹೊಯ್ಸಳ ಸಿಂಹಾಸನವನ್ನೇರಿ ಹಾಸನ ತಾಲೂಕಿನಲ್ಲಿಯೂ ಆಳ್ವಿಕೆ ನಡೆಸಿ ದೊಡ್ಡಗದ್ದವಳ್ಳಿ ಲಕ್ಷ್ಮಿದೇವಿ, ಶಾಂತಿಗ್ರಾಮದ ವರದ ನರಸಿಂಹ ದೇವಾಲಯಗಳಿಗೆ ಮತ್ತು ಹಿರಿಯ ಅಗ್ರಹಾರವಾಗಿದ್ದ ಅರುಂಧತೀಪುರಕ್ಕೆ (ಹಿರಿಕಡಲೂರು) ದಾನ ನೀಡಿರುವ ಅಂಶಗಳು ಇಲ್ಲಿನ ಶಾಸನಗಳಿಂದ ತಿಳಿದುಬಂದಿದೆ. ಆದರೆ ಈತನ ಕಾಲದಲ್ಲಿ ಯಾವುದೇ ಪ್ರಮುಖ ದೇವಾಲಯಗಳ ನಿರ್ಮಾಣ ತಾಲೂಕಿನಲ್ಲಿ ಕಂಡುಬರುವುದಿಲ್ಲ. ಎರಡನೇ ನರಸಿಂಹನ ನಂತರ ಸೋಮೇಶ್ವರನು ಹೊಯ್ಸಳ ರಾಜ್ಯದ ಚುಕ್ಕಾಣಿ ಹಿಡಿದನಾದರೂ ಹಾಸನ ತಾಲೂಕಿನಲ್ಲಿ ಈತನು ಆಳ್ವಿಕೆ ನಡೆಸಿರುವುದಕ್ಕೆ ಸಂಬಂಧಿಸಿದಂತೆ ಕೇವಲ ಎರಡು ಶಾಸನಗಳು ಮಾತ್ರ ಕಂಡುಬಂದಿದ್ದು, ಇದರಲ್ಲಿ ಸಾಲಗಾಮೆ ಗ್ರಾಮದ ಶಾಸನವು ಈತನು ಕಣ್ಣಾನೂರಿನಿಂದ ಆಳ್ವಿಕೆ ಮಾಡುತ್ತಿದ್ದನೆಂಬ ಅಂಶವನ್ನು ಉಲ್ಲೇಖಿಸಿದೆ. ಸೋಮೇಶ್ವರನ ನಂತರ ಮೂರನೇ ನರಸಿಂಹ ಹಾಗೂ ಮೂರನೇ ಬಲ್ಲಾಳ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿ ವಿವಿಧ ದೇವಾಲಯಗಳಿಗೆ ಮತ್ತು ಕೆರೆಕಟ್ಟೆಗಳ ನಿರ್ಮಾಣಕ್ಕೆ ದಾನ ನೀಡಿದ ಅಂಶಗಳು ಇವರ ಶಾಸನಗಳಿಂದ ತಿಳಿದುಬಂದಿದೆ.

ಹೊಯ್ಸಳರು ಆಡಳಿತದ ಅನುಕೂಲಕ್ಕಾಗಿ ರಾಜ್ಯವನ್ನು ವಿವಿಧ ಆಡಳಿತ ವಿಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದು, ಅವುಗಳಲ್ಲಿ 'ನೀರ್ಗುಂದ' ಮತ್ತು 'ಸೀಗೆನಾಡುಗಳು' ಹಾಸನ ತಾಲೂಕಿನ ಪ್ರಮುಖ ಆಡಳಿತ ವಿಭಾಗಗಳಾಗಿದ್ದವು. ಹಾಗೂ ಸಾಲಗಾಮೆ, ನಿಟ್ಟೂರು, ಹೊನ್ನಾವರ, ಹಿರಿಕಡಲೂರು, ಕೋರವಂಗಲ, ಶಾಂತಿಗ್ರಾಮ ಮತ್ತು ಗೊರೂರು ಗ್ರಾಮಗಳು ಪ್ರಮುಖ ಅಗ್ರಹಾರಗಳಾಗಿದ್ದು ಹೆಚ್ಚಿನ ಸಂಖ್ಯೆಯ ಹೊಯ್ಸಳ ದೇವಾಲಯಗಳು ಈ ಪ್ರದೇಶಗಳಲ್ಲೇ ನಿರ್ಮಾಣವಾಗಿರುವುದು ವಿಶೇಷವಾಗಿದೆ.

ಈ ತಾಲೂಕಿನ ಹೊಯ್ಸಳ ದೇವಾಲಯಗಳ ಬಗ್ಗೆ ಹೇಳುವುದಾದರೆ ಬಹುಪಾಲು ದೇವಾಲಯಗಳು ಸೋಪುಗಲ್ಲಿನಿಂದ (ಕ್ಲೋರೈಟಿಕ್ ಸಿಸ್ಟ್) ನಿರ್ಮಾಣವಾಗಿವೆ. ಆದರೆ ಇವರ ಆಳ್ವಿಕೆಯ ನಂತರ ದೇವಾಲಯಗಳ ಜೀರ್ಣೋದ್ಧಾರದ ಸಂದರ್ಭದಲ್ಲಿ ಕಣಶಿಲೆಯನ್ನು

(ಗ್ರಾನೈಟ್) ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ದೇವಾಲಯಗಳ ಹಂಚಿಕೆಯ ಪ್ರಮಾಣವನ್ನು ಗಮನಿಸಿದಾಗ ಅತೀ ಹೆಚ್ಚಿನ ಸಂಖ್ಯೆಯ ದೇವಾಲಯಗಳು ದುದ್ದ ಮತ್ತು ಶಾಂತಿಗ್ರಾಮ ಹೋಬಳಿಯಲ್ಲಿ ಕಂಡುಬರುತ್ತವೆ. ಇಲ್ಲಿ ಶೈವ ಮತ್ತು ವೈಷ್ಣವ ದೇವಾಲಯಗಳು ಹೆಚ್ಚು ಕಡಿಮೆ ಸಮಾನ ಸಂಖ್ಯೆಯಲ್ಲಿ ಕಂಡುಬಂದರೆ ಜೈನ ಬಸದಿಗಳು ತೀರಾ ವಿರಳವೆಂದೇ ಹೇಳಬಹುದು. ಶೈವ ದೇವಾಲಯಗಳಲ್ಲಿ ಪ್ರಾಚೀನ ದೇವಾಲಯವಾಗಿ ಗುಡ್ಡದ ತೆರಣ್ಯ ಗ್ರಾಮದ ಸೋಮೇಶ್ವರ ದೇವಾಲಯವು ತೀರಾ ಸರಳವಾಗಿ ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ. ತಾಲೂಕಿನ ಹೊಯ್ಸಳ ದೇವಾಲಯಗಳ ಲಕ್ಷಣಗಳನ್ನು ಗಮನಿಸಿದಾಗ ಇವು ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿವೆ ಹಾಗೂ ಕೆಲವು ದೇವಾಲಯಗಳು ಪ್ರಾಕಾರವನ್ನೂ ಸಹ ಹೊಂದಿವೆ. ಊರ್ಧ್ವಮುಖವಾಗಿ ನೋಡಿದಾಗ ದೇವಾಲಯಗಳು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿಗಳನ್ನು ಹೊಂದಿದ್ದು, ಷಡ್ವರ್ಗ ಕ್ರಮದಲ್ಲಿಯೇ ನಿರ್ಮಾಣವಾಗಿವೆ. ಕೆಲವು ದೇವಾಲಯಗಳಿಗೆ ಶಿಖರ ಕಂಡುಬಂದರೆ ಕೆಲವು ದೇವಾಲಯಗಳಿಗೆ ಶಿಖರ ಇರುವುದಿಲ್ಲ. ಕೋರವಂಗಲದ ಬೂಚೇಶ್ವರ ದೇವಾಲಯ, ಹೊನ್ನಾವರದ ಕೇಶವ, ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳು ಅತ್ಯಂತ ಆಕರ್ಷಕವಾದ ಭಿತ್ತಿ ಶಿಲ್ಪಗಳ ಅಲಂಕರಣೆಯನ್ನು ಹೊಂದಿದ್ದರೆ, ದೊಡ್ಡಗದ್ದವಳ್ಳಿ ಲಕ್ಷ್ಮಿದೇವಿ, ಶಾಂತಿಗ್ರಾಮದ ಧರ್ಮೇಶ್ವರ ಮತ್ತು ಕೋರವಂಗಲದ ಗೋವಿಂದೇಶ್ವರ ದೇವಾಲಯಗಳು ಸ್ತಂಭಪಂಜರ ಮತ್ತು ಕೋಷ್ಟಪಂಜರಗಳಿಂದ ಅಲಂಕರಿಸಲ್ಪಟ್ಟಿವೆ. ಶಾಂತಿಗ್ರಾಮದ ವರದ ನರಸಿಂಹ, ಹೆರಗಿನ ಕೀರ್ತಿನಾರಾಯಣ, ಗೊರೂರಿನ ತ್ರಿಕೂಟೇಶ್ವರ, ಸಾಲಗಾಮೆಯ ಕೇಶವ, ಹರಿಹರಪುರದ ಹರಿಹರೇಶ್ವರ ಹಾಗೂ ಹಿರಿಕಡಲೂರಿನ ಕೇಶವ ದೇವಾಲಯಗಳು ಸರಳವಾದ ಬ್ರಹ್ಮಕಾಂತ ಭಿತ್ತಿಪಾದಗಳ ರಚನೆಯನ್ನು ಹೊಂದಿವೆ. ತಾಲೂಕಿನ ದೇವಾಲಯಗಳು ಸಾಮಾನ್ಯವಾಗಿ ದ್ರಾವಿಡ ಮಾದರಿಯ ಶಿಖರಗಳನ್ನು ಹೊಂದಿದ್ದು, ಕೆಲವು ದೇವಾಲಯಗಳು ಅಂದರೆ ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ, ಗೊರೂರಿನ ತ್ರಿಕೂಟೇಶ್ವರ, ಹರಿಹರಪುರದ ಹರಿಹರೇಶ್ವರ, ಹೆರಗಿನ ಕೀರ್ತಿನಾರಾಯಣ, ಹಿರಿಕಡಲೂರಿನ ಕೇಶವ ಇನ್ನೂ ಮುಂತಾದ ದೇವಾಲಯಗಳು ಫಾಂಸಾನ ಶೈಲಿಯ ಶಿಖರಗಳನ್ನು ಹೊಂದಿವೆ.

ಶೈವ ದೇವಾಲಯಗಳಲ್ಲಿ ಕೋರವಂಗಲದ ಬೂಚೇಶ್ವರ ದೇವಾಲಯವು ಬಹಳ ಪ್ರಾಮುಖ್ಯತೆಯನ್ನು ಪಡೆದಿದ್ದು, ದ್ವಿಕೂಟಾಚಲ ಮಾದರಿಯಲ್ಲಿ ಶಿಲ್ಪಗಳ ಸಮೃದ್ಧತೆಯಿಂದ ನಿರ್ಮಾಣವಾಗಿದೆ. ಇದರ ಭಿತ್ತಿಯಲ್ಲಿ ರಾಮಾಯಣ, ಮಹಾಭಾರತ ಮತ್ತು ಪುರಾಣಗಳ ಸನ್ನಿವೇಶಗಳನ್ನು ಉಬ್ಬು ಶಿಲ್ಪಗಳ ಮೂಲಕ ಕೆತ್ತಲಾಗಿದೆ ಹಾಗೂ ಶೈವ ಮತ್ತು ವೈಷ್ಣವ

ಪರಂಪರೆಯ ಲೀಲಾ ಮೂರ್ತಿಗಳನ್ನು ಮತ್ತು ಚತುರ್ವಿಂಶತಿ ಮೂರ್ತಿಗಳನ್ನು ಸುಂದರವಾಗಿ ಖಂಡರಿಸಲಾಗಿದೆ. ಈ ದೇವಾಲಯವು 32 ಶ್ರೀಕಾರ ಸ್ತಂಭಗಳಂದ ಕೂಡಿದ ಮುಖಮಂಟಪವನ್ನು ಹೊಂದಿದ್ದು ಇದರ ಭುವನೇಶ್ವರಿಗಳು ಅತ್ಯಂತ ಆಕರ್ಷಕವಾಗಿ ನಿರ್ಮಿಸಲ್ಪಟ್ಟಿವೆ.

ಮೊಸಳೆ ಗ್ರಾಮದ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳು ಹೊಯ್ಸಳ ಅರಸರ ಉತ್ಕೃಷ್ಟ ಪರಂಪರೆಯನ್ನು ಸಾರುವ ಅವಳಿ ದೇವಾಲಯಗಳಾಗಿದ್ದು, ತಳವಿನ್ಯಾಸ ಮತ್ತು ಏರು ವಿನ್ಯಾಸದಲ್ಲಿ ಒಂದೇ ಮಾದರಿಯಲ್ಲಿ ನಿರ್ಮಾಣವಾಗಿವೆ. ಎರಡೂ ದೇವಾಲಯಗಳ ನವರಂಗವು ಅತ್ಯಂತ ಆಕರ್ಷಕವಾದ ಭುವನೇಶ್ವರಿಗಳನ್ನು ಹೊಂದಿದ್ದು, ಮಧ್ಯ ಅಂಕಣದ ಭುವನೇಶ್ವರಿಗಳಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಹಾಗೂ ಚೆನ್ನಕೇಶವ ದೇವಾಲಯದ ಮುಖ್ಯ ಭುವನೇಶ್ವರಿಯಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳ ಕೆತ್ತನೆಯು ಕಂಡುಬರುತ್ತದೆ. ನಾಗೇಶ್ವರ ದೇವಾಲಯದ ಭಿತ್ತಿಯಲ್ಲಿ ಶೈವ ಮತ್ತು ಶಾಕ್ತ ಪರಂಪರೆಯನ್ನು ಬಿಂಬಿಸುವ ಶಿಲ್ಪಗಳಿದ್ದರೆ, ಚೆನ್ನಕೇಶವ ದೇವಾಲಯದ ಭಿತ್ತಿಯಲ್ಲಿ ವೈಷ್ಣವ ಪರಂಪರೆಯ ಶಿಲ್ಪಗಳದ್ದೇ ಪ್ರಾಬಲ್ಯ.

ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ ದೇವಾಲಯವು ಹೊಯ್ಸಳ ಕಲೆ ಮತ್ತು ವಾಸ್ತು ಶಿಲ್ಪದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದ್ದು, ಇದು ನಾಲ್ಕು ಗರ್ಭಗುಡಿಗಳನ್ನು ಹೊಂದಿರುವ ಚತುಷ್ಕೂಟ ದೇವಾಲಯವಾಗಿದೆ. ಇದನ್ನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1113ರಲ್ಲಿ ವಜ್ರದ ವ್ಯಾಪಾರಿ ಕುಲ್ಹಣ ರಾಹುತ ಮತ್ತು ಈತನ ಪತ್ನಿ ಸಹಜಾದೇವಿ ನಿರ್ಮಾಣ ಮಾಡಿದರೆಂದು ತಿಳಿದುಬರುತ್ತದೆ. ಈ ದೇವಾಲಯವು ವಾಸ್ತುವಿನ ಪ್ರಕಾರಗಳಾದ ವಿಮಾನ, ಸರ್ವತೋಭದ್ರ, ವೈಷ್ಣವ, ನಳನೀಕ, ಉತ್ತುಂಗ, ವೈರಾಜ, ಗರುಡ, ವರ್ಧಮಾನ, ಶಂಖ, ವೃತ್ತ, ಪುಷ್ಪಕ ಹಾಗೂ ಗೃಹರಾಜ ಎಂಬ ಅಂಶಗಳನ್ನು ಒಳಗೊಂಡಿದ್ದು, ಇದರ ನಿರ್ಮಾತೃಗಳು ಮಲ್ಲೋಜ ಮತ್ತು ಮಾಣಿಯೋಜರೆಂಬುದು ಇಲ್ಲಿನ ಶಾಸನದಿಂದ ತಿಳಿದುಬರುತ್ತದೆ. ಈ ದೇವಾಲಯದಲ್ಲಿ ಉತ್ತರ ದಿಕ್ಕಿನ ಗರ್ಭಗುಡಿಯಲ್ಲಿ ಕಾಳಿ ವಿಗ್ರಹ, ಪೂರ್ವ ದಿಕ್ಕಿನ ಗರ್ಭಗೃಹದಲ್ಲಿ ಲಕ್ಷ್ಮಿದೇವಿ, ದಕ್ಷಿಣ ದಿಕ್ಕಿನಲ್ಲಿ ಭೈರವ ಮತ್ತು ಪಶ್ಚಿಮ ದಿಕ್ಕಿನ ಗರ್ಭಗೃಹದಲ್ಲಿ ಭೂತನಾಥ ಲಿಂಗಗಳು ಪ್ರತಿಷ್ಠಾಪಿತವಾಗಿದ್ದು, ಲಕ್ಷ್ಮಿದೇವಿ ಗರ್ಭಗೃಹದ ಶಿಖರವು ದ್ರಾವಿಡ ಮಾದರಿಯಲ್ಲಿದ್ದರೆ ಉಳಿದ ಗರ್ಭಗುಡಿಗಳ ಶಿಖರಗಳು ಫಾಂಸಾನ ಮಾದರಿಯಲ್ಲಿವೆ. ಈ ದೇವಾಲಯಕ್ಕೆ ವಿಶಾಲವಾದ ಪ್ರಾಕಾರವಿದ್ದು, ಇದರ ಮೂಲೆಗಳಲ್ಲಿ ನಾಲ್ಕು ಸಣ್ಣ ಗುಡಿಗಳ ನಿರ್ಮಾಣವಿದೆ. ಹೊನ್ನಾವರದ ಕೇಶವ ದೇವಾಲಯವು ಹೊಯ್ಸಳರ ಪ್ರಮುಖ

ಕಲಾಕೃತಿಯಾಗಿದ್ದು, ಇದನ್ನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಕೋಣೆಯ ಶಂಕರ ದಂಡನಾಥ ಎಂಬಾತನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ದೇವಾಲಯದ ಭಿತ್ತಿಯು ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು, ದೇವ-ದೇವತೆಯರ ಶಿಲ್ಪಗಳು, ಸುರುಳಿ ಬಳ್ಳಿಗಳು ಮತ್ತು ಸ್ತಂಭ ಪಂಜರಗಳ ಅಲಂಕಾರಿಕ ಕೆತ್ತನೆಯಿಂದ ಕೂಡಿದೆ. ಇದರ ಶಿಖರವು ಮೂರು ತಲಗಳನ್ನು ಹೊಂದಿದ್ದು, ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾಗಿದೆ.

ಹರಿಹರಪುರದ ಹರಿಹರೇಶ್ವರ ದೇವಾಲಯವು ಹೊಯ್ಸಳರ ಕಾಲದ ಒಂದು ಪ್ರಮುಖ ತ್ರಿಕೂಟ ದೇವಾಲಯವಾಗಿದ್ದು, ದುರಾದೃಷ್ಟವಶಾತ್ ಈ ದೇವಾಲಯದ ಮೂರು ಗರ್ಭಗುಡಿಯಲ್ಲಿ ಇಂದು ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಪ್ರಾರಂಭದಲ್ಲಿ ಈ ದೇವಾಲಯದ ಗರ್ಭಗುಡಿಯಲ್ಲಿ ಕ್ರಮವಾಗಿ ಹರಿಹರ, ಅನಂತಶಯನ ಮತ್ತು ಸರಸ್ವತಿ ವಿಗ್ರಹಗಳಿದ್ದವೆಂದು ತಿಳಿದುಬರುತ್ತದೆ. ಆದರೆ ವಸಾಹತುಶಾಹಿಗಳ ಆಳ್ವಿಕೆಗೆ ಒಳಪಟ್ಟಿದ್ದಂತಹ ಸಂದರ್ಭದಲ್ಲಿ ಡೆನ್ಮಾರ್ಕಿನ ಎಡ್ವರ್ಡ್ ಲೊವಿನ್‌ತಲ್ ಎಂಬ ಅಧಿಕಾರಿಗೆ ಹೊಯ್ಸಳ ಶಿಲ್ಪಗಳನ್ನು ಸಂಗ್ರಹಿಸುವ ಹವ್ಯಾಸವಿದ್ದುದರಿಂದ ೧೮೯೭ರ ನಂತರ ಈ ದೇವಾಲಯದ ಮೂರು ವಿಗ್ರಹಗಳನ್ನು ತೆಗೆದುಕೊಂಡು ಹೋಗಿ ಡೆನ್ಮಾರ್ಕಿನ ಕೊಪೆನ್ ಹೆಗನ್‌ನ ನ್ಯಾಷನಲ್ ಮ್ಯೂಸಿಯಂನಲ್ಲಿ ಇಟ್ಟನೆಂದು ತಿಳಿದುಬರುತ್ತದೆ. ಪ್ರಸ್ತುತ ಈ ಮ್ಯೂಸಿಯಂನಲ್ಲಿ ಅತ್ಯಂತ ಸುಂದರವಾದ ಅನಂತಶಯನ ಮೂರ್ತಿಯನ್ನು ನೋಡಬಹುದಾಗಿದೆ.

ಹಾಸನ ತಾಲೂಕಿನ ಹೊಯ್ಸಳರ ಜೈನ ಬಸದಿಗಳ ಬಗ್ಗೆ ಹೇಳುವುದಾದರೆ ಈ ಬಸದಿಗಳು ಇಂದು ಕೇವಲ ಶಾಸನ ಉಲ್ಲೇಖಕ್ಕೆ ಮಾತ್ರ ಸೀಮಿತವಾಗಿವೆ. ಅಂದರೆ ಇಲ್ಲಿನ ಬಹುಪಾಲು ಬಸದಿಗಳು ಶಿಥಿಲವಾಗಿವೆ ಮತ್ತು ನಾಶವಾಗಿವೆ. ಪ್ರಸ್ತುತ ಮರ್ಕುಲಿಯ ತ್ರಿಕೂಟ ಬಸದಿಯು ಸುಸ್ಥಿತಿಯಲ್ಲಿದ್ದರೂ ಶಾಂತಿಗ್ರಾಮದ ಶಾಂತಿನಾಥ ಬಸದಿಯು ಹೊಸದಾಗಿ ನಿರ್ಮಾಣಗೊಂಡಿದೆ. ಹೆರಗಿನ ಪಾರ್ಶ್ವನಾಥ ಬಸದಿಯು ಭಗ್ನಾವಶೇಷ ಸ್ಥಿತಿಯಲ್ಲಿದ್ದು, ಇದರ ಕೆಲವು ಭಾಗಗಳನ್ನು ಇದೇ ಗ್ರಾಮದ ಕಮಟೇಶ್ವರ ದೇವಾಲಯದ ದ್ವಾರಬಂಧದ ಲಲಾಟ ಬಿಂಬದಲ್ಲಿ ಜಿನ ಶಿಲ್ಪವಿರುತ್ತದೆ. ಆದರೆ ಶಾಸ್ತ್ರಗ್ರಂಥಗಳ ಪ್ರಕಾರ ಶೈವ ಅಥವಾ ವೈಷ್ಣವ ದೇವಾಲಯಗಳ ದ್ವಾರಬಂಧದಲ್ಲಿ ಜೈನ ಶಿಲ್ಪಗಳು ಕಂಡುಬರುವುದಿಲ್ಲ. ಆದ್ದರಿಂದ ಕಮಟೇಶ್ವರ ದೇವಾಲಯದ ದ್ವಾರಬಂಧವು ಮೂಲದಲ್ಲಿ ಪಾರ್ಶ್ವನಾಥ ಬಸದಿಯದ್ದು ಎಂಬುದು ಖಚಿತವಾಗುತ್ತದೆ. ಮುಗುಳೂರಿನಲ್ಲಿ ಎರಡು ಜೈನ ಬಸದಿಗಳು ನಿರ್ಮಾಣವಾಗಿದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಈ ಎರಡು ಬಸದಿಗಳಲ್ಲಿ ಒಂದು ಬಸದಿ ಶಿಥಿಲಾವಸ್ಥೆಯಲ್ಲಿದ್ದರೆ ಇನ್ನೊಂದು ಬಸದಿ ಕಣ್ಮರೆಯಾಗಿದೆ. ದುರಂತವೆಂದರೆ ಇಂದು ಈ

ಮುಗುಳೂರು ಗ್ರಾಮವೇ ಕಂಡುಬರದಿರುವುದು ಒಂದು ಆಶ್ಚರ್ಯಕರ ಸಂಗತಿಯಾಗಿದೆ. ಸರ್ಕಾರದ ಕಂದಾಯ ದಾಖಲೆಗಳಲ್ಲಿರುವ ಈ ಗ್ರಾಮ ವಾಸ್ತವದಲ್ಲಿ ಕಂಡುಬರುವುದಿಲ್ಲ.

ಒಂದು ಪ್ರದೇಶದ ಸ್ಥಳೀಯ ಇತಿಹಾಸವನ್ನು ತಿಳಿಯುವಲ್ಲಿ ವೀರಗಲ್ಲು ಸ್ಮಾರಕಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಹೊಯ್ಸಳರ ಆಳ್ವಿಕೆಯಲ್ಲಿ ಹಾಸನ ತಾಲೂಕಿನಾದ್ಯಂತ ಸಾಕಷ್ಟು ಸಂಖ್ಯೆಯಲ್ಲಿ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ತಿಳಿಯುವುದಾದರೆ, ಗೌಡಗೆರೆ ಗ್ರಾಮದ ಕ್ರಿ.ಶ.1173ರ ವೀರಗಲ್ಲು ಶಾಸನವು ಗೌಡಗೆರೆ ಗ್ರಾಮದ ತುರುಗಳನ್ನು ಅಪಹರಿಸಲು ಬಂದಾಗ ವೀರಣ ಮತ್ತು ಬಂಕ ಎಂಬುವವರು ಹೋರಾಡಿ ಮಡಿದಾಗ ಮಾರಗಾವುಂಡನ ಮಗ ಮುದ್ದಯನು ವೀರಗಲ್ಲನ್ನು ನಿಲ್ಲಿಸಿದನೆಂಬ ಮಾಹಿತಿಯನ್ನು ನೀಡುತ್ತದೆ. ಕಿತ್ತನೆಕೆರೆ ಗ್ರಾಮದ ಕ್ರಿ.ಶ.1196ರ ವೀರಗಲ್ಲು ಶಾಸನವು ಹಾರುವನಹಳ್ಳಿಯ ದಾರಿಯಲ್ಲಿ ಹೆಂಗಸರ ಮೇಲೆ ಮಾನಭಂಗ ಪ್ರಯತ್ನವಾಗುತ್ತಿರುವಾಗ ಚಟ್ಟಗಾವುಂಡರ ಮಾಳಯ್ಯನ ಮಗ ಸೋಮೆಯನೂ ಅವನ ಸಂಗದಲ್ಲಿದ್ದ ಬೆಚ್ಚಯ್ಯ ಎಂಬಾತನು ಹೆಣ್ಣು ಮಕ್ಕಳನ್ನು ರಕ್ಷಿಸಿ ಮಡಿದ ವಿಚಾರವನ್ನು ತಿಳಿಸುತ್ತದೆ. ಕ್ರಿ.ಶ.1174ರ ಹೊನ್ನಾವರ ಗ್ರಾಮದ ವೀರಗಲ್ಲು ಶಾಸನವು ಹೊನ್ನಾವರ ಮತ್ತು ನೀರ್ಗುಂದ ಗಡಿ ಕಾಳಗದಲ್ಲಿ ಭೀಮನ ಮಗ ಹೊನ್ನಗಾವುಂಡನು ಮರಣ ಹೊಂದಿದ ವಿಚಾರವನ್ನು ಉಲ್ಲೇಖಿಸಿದೆ. ಕುದುರೆ ಗುಂಡಿ ಗ್ರಾಮದ ಕ್ರಿ.ಶ.1140ರ ವೀರಗಲ್ಲು ಶಾಸನವು ಹೊಯ್ಸಳ ವಿಷ್ಣುವರ್ಧನನು ಹಾನಗಲ್ಲಿನ ಕೋಟೆಯನ್ನು ವಶಪಡಿಸಿಕೊಂಡಾಗ ಈ ಕಾಳಗದಲ್ಲಿ ಬಾಳುಗಿಯ ಚಟ್ಟಯ್ಯ ಎಂಬಾತನು ಮರಣ ಹೊಂದಿದ ಅಂಶವನ್ನು ತಿಳಿಸಿದೆ. ದುದ್ದ ಗ್ರಾಮದ ಕ್ರಿ.ಶ.1276ರ ವೀರಗಲ್ಲು ಶಾಸನವು ಸಾಳುವ ತಿಕ್ಕಮನ ವಿರುದ್ಧದ ಯುದ್ಧದಲ್ಲಿ ಹಿರಿಯ ಬಯಿಚೆಯನಾಯಕನ ಮಗ ಅಂಕಣನು ಮರಣ ಹೊಂದಿದ ಅಂಶವನ್ನು ತಿಳಿಸುತ್ತದೆ. ಇದೇ ಗ್ರಾಮದ ಕ್ರಿ.ಶ.1310ರ ವೀರಗಲ್ಲು ಶಾಸನವು ಬಹಳ ಪ್ರಮುಖವಾಗಿದ್ದು, ದೋರಸಮುದ್ರದ ಮೇಲೆ ಮುಸ್ಲಿಮರು (ಮಲ್ಲಿಕಾಫರ್) ದಾಳಿ ಮಾಡಿದಾಗ ದುದ್ದನ ನಡೆಗೋಟೆಯ ಮಾಚಯನಾಯಕನ ಮಗ ಬಯಿಚಯ ನಾಯಕನು ವೀರಾವೇಷದಿಂದ ಹೋರಾಡಿ ಮಡಿದಾಗ ಈತನ ಮಗ ಮಾಚಯನು ವೀರಗಲ್ಲನ್ನು ನಿಲ್ಲಿಸಿದನೆಂದು ತಿಳಿದುಬರುತ್ತದೆ. ಹೀಗೆ ಹಾಸನ ತಾಲೂಕಿನಲ್ಲಿ ಗೋವುಗಳನ್ನು ರಕ್ಷಿಸಲು, ಮಹಿಳೆಯರ ಮಾನ ಕಾಪಾಡಲು, ಕೋಟೆಗಳನ್ನು ವಶಪಡಿಸಿಕೊಳ್ಳಲು, ಊರಿನ ಗಡಿಯ ವಿಚಾರಕ್ಕಾಗಿ ಹಾಗೂ ರಾಜ್ಯವನ್ನು ಶತ್ರುಗಳಿಂದ ರಕ್ಷಿಸಲು ಇನ್ನೂ ಮುಂತಾದ ಕಾರಣಗಳಿಗೆ ಮಡಿದ ವೀರರ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ಹಾಕಿಸಿದ್ದು, ಇವು ಹೊಯ್ಸಳ ಅರಸರ ಆಳ್ವಿಕೆಗೆ ಸಾಕ್ಷಿಯಾಗಿ ಕಂಡುಬರುತ್ತವೆ. ಹಾಸನ ತಾಲೂಕಿನ ಹೊಯ್ಸಳರ ಶಿಲ್ಪಗಳ ಬಗ್ಗೆ ತಿಳಿಸುವುದಾದರೆ ಇವರ ಕಲೆ ಮತ್ತು

ವಾಸ್ತುಶಿಲ್ಪದ ಪ್ರೌಢಿಮೆ ನಿಂತಿರುವುದೇ ಇವರ ಮೂರ್ತಿ ಶಿಲ್ಪಗಳು ಮತ್ತು ಭಿತ್ತಿ ಶಿಲ್ಪಗಳಿಂದ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ. ಇವರ ಶಿಲ್ಪ ರಚನಾ ಕ್ರಮವು ಅದ್ವಿತೀಯವಾಗಿದ್ದು ಎಂತಹವರನ್ನು ಬೆರಗುಗೊಳಿಸುತ್ತದೆ. ಹೊಯ್ಸಳರ ಶೈವ ದೇವಾಲಯಗಳ ಲಿಂಗಗಳ ಬಗ್ಗೆ ಹೇಳುವುದಾದರೆ ಇವು ಎತ್ತರವಾದ ಪೀಠದ ಮೇಲೆ ನಿರ್ಮಾಣವಾಗಿವೆ. ಲಿಂಗದ ರುದ್ರ ಭಾಗದಲ್ಲಿ ಬ್ರಹ್ಮಸೂತ್ರ ರೇಖೆಗಳಿರುವ ಲಿಂಗಗಳು ನಿಟ್ಟೂರಿನ ಸೋಮೇಶ್ವರ, ಮೊಸಳೆಯ ನಾಗೇಶ್ವರ ಮತ್ತು ಹೆರಗಿನ ಕಮಟೇಶ್ವರ ದೇವಾಲಯಗಳಲ್ಲಿ ಕಂಡುಬಂದಿವೆ. ಶೈವ ದೇವಾಲಯಗಳಲ್ಲಿ ನಂದಿ ಶಿಲ್ಪವು ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಅತ್ಯಂತ ಸುಂದರವಾಗಿ ಅಲಂಕರಿಸಲ್ಪಟ್ಟ ನಂದಿ ಶಿಲ್ಪವು ಮುದುಗೆರೆಯ ಓಂಕಾರೇಶ್ವರ ದೇವಾಲಯದ ಬಳಿ ಕಂಡುಬರುತ್ತದೆ. ಶೈವ ಪರಂಪರೆಯಲ್ಲಿ ಗಣಪತಿಗೆ ವಿಶೇಷ ಸ್ಥಾನವಿದ್ದು, ಈ ಗಣಪತಿಯ ಶಿಲ್ಪಗಳು ಮೊಸಳೆಯ ನಾಗೇಶ್ವರ ಮತ್ತು ಕೋರವಂಗಲದ ಬೂಚೇಶ್ವರ ದೇವಾಲಯದ ನವರಂಗದ ದೇವಕೋಷ್ಟಗಳಲ್ಲಿ ಕಂಡುಬರುತ್ತವೆ. ಹಾಗೂ ಅತ್ಯಂತ ಸುಂದರವಾದ ನರ್ತನ ಗಣಪತಿಯ ಶಿಲ್ಪವು ಕೋರವಂಗಲದ ಸೂರ್ಯ ಗುಡಿಯ ದಕ್ಷಿಣ ದಿಕ್ಕಿನ ಹೊರ ಭಿತ್ತಿಯಲ್ಲಿ ಉಬ್ಬು ಶಿಲ್ಪವಾಗಿ ರಚನೆಯಾಗಿದೆ. ಶೈವ ಮತ್ತು ವೈಷ್ಣವ ಪರಂಪರೆಯೆರಡರಲ್ಲೂ ಸರಸ್ವತಿಗೆ ವಿಶೇಷ ಸ್ಥಾನವಿದ್ದು ಈಕೆಯ ಅತ್ಯಂತ ಸುಂದರವಾದ ಹಾಗೂ ಸರ್ವಾಭರಣಭೂಷಿತವಾದ ಶಿಲ್ಪಗಳು ಕೋರವಂಗಲದ ಬೂಚೇಶ್ವರ ಮತ್ತು ಮೊಸಳೆಯ ಚೆನ್ನಕೇಶವ ದೇವಾಲಯದ ದೇವಕೋಷ್ಟಗಳಲ್ಲಿ ಬಿಡಿ ಶಿಲ್ಪವಾಗಿ ಪ್ರತಿಷ್ಠಾಪನೆಯಾಗಿವೆ. ಮಾತೃದೇವೋಪಾಸನೆಯ ಅಡಿಯಲ್ಲಿ ನಿರ್ಮಾಣವಾದ ಸಪ್ತಮಾತೃಕೆಯರ ಶಿಲ್ಪಗಳು ಗೊರೂರಿನ ತ್ರಿಕೂಟೇಶ್ವರ, ಕೋರವಂಗಲದ ಬೂಚೇಶ್ವರ ಮತ್ತು ಮೊಸಳೆಯ ನಾಗೇಶ್ವರ ಹಾಗೂ ಶಾಂತಿಗ್ರಾಮದ ಧರ್ಮೇಶ್ವರ ದೇವಾಲಯಗಳಲ್ಲಿ ಕಂಡುಬಂದಿವೆ. ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಿ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದ ಕಾಳಿ ವಿಗ್ರಹವು ಅತ್ಯಂತ ವಿಶಿಷ್ಟವಾಗಿದ್ದು, ಇದರಲ್ಲಿ ಬೇತಾಳದ ಶಿಲ್ಪವನ್ನು ಹೊಂದಿರುವ ಪೀಠದ ಮೇಲೆ ಕಾಳಿಯು ಸುಖಾಸನದಲ್ಲಿ ಕುಳಿತಿದ್ದಾಳೆ. ಈಕೆಯು ಬಲಪಾರ್ಶ್ವದ ಕೈಗಳಲ್ಲಿ ಬಾಣ, ಕತ್ತಿ, ತ್ರಿಶೂಲ ಮತ್ತು ಪರಶು ಹಾಗೂ ಎಡ ಭಾಗದ ಕೈಗಳಲ್ಲಿ ಢಮರು, ಪಾಶ, ಬಿಲ್ಲು ಮತ್ತು ಬಟ್ಟಲನ್ನು ಹಿಡಿದಿದ್ದು, ಸರ್ವಾಭರಣ ಭೂಷಿತಳಾಗಿ ಜಟಾಮುಕುಟವನ್ನು ಹೊಂದಿದ್ದಾಳೆ. ಇದೇ ದೇವಾಲಯದ ಎರಡು ಬೇತಾಳ ಶಿಲ್ಪಗಳು ಅತ್ಯಂತ ವಿಶಿಷ್ಟವಾಗಿ ರೂಪುಗೊಂಡಿವೆ. ಇವುಗಳು ಆರೂವರೆ ಅಡಿ ಎತ್ತರವನ್ನು, ಅಗಲವಾದ ಕಣ್ಣುಗಳು, ದೊಡ್ಡದಾದ ಕಿವಿಯೋಲೆಗಳು, ಉದ್ದವಾದ ಕೂದಲನ್ನು ಹೊಂದಿದ್ದು, ನಾಲಿಗೆಯನ್ನು ಉದ್ದವಾಗಿ ಹೊರಕ್ಕೆ ಚಾಚಿ ಅಸ್ತಿಪಂಜರದ ರೀತಿಯಲ್ಲಿ ನಗ್ನವಾಗಿ ಕಂಡುಬರುತ್ತವೆ. ಇದರಲ್ಲಿ ಒಂದು ಬೇತಾಳವು ಬಲಗೈಯಲ್ಲಿ ಕತ್ತಿಯನ್ನು ಎಡಗೈಯಲ್ಲಿ

ಕತ್ತರಿಸಿದ ರುಂಡವನ್ನು ಹಿಡಿದು ಉದ್ದವಾಗಿ ನಾಲಿಗೆಯನ್ನು ಹೊರಚಾಚಿದೆ. ಬೂಚೇಶ್ವರ ದೇವಾಲಯದ ಸೂರ್ಯ ವಿಗ್ರಹವು ಅತ್ಯಂತ ಸುಂದರವಾದ ಮೂರ್ತಿ ಶಿಲ್ಪವಾಗಿದ್ದು, ಈ ಶಿಲ್ಪವು ನಾಲ್ಕುವರೆ ಅಡಿ ಎತ್ತರವನ್ನು ಹೊಂದಿದೆ. ಎರಡೂ ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದು, ಹಾರ, ಕಂಠೀಹಾರ, ಯಜ್ಞೋಪವೀತ, ಉದರಬಂಧ, ರತ್ನಾಂಗುಲೀಯಕಗಳು, ಪಾದಸರ ಮತ್ತು ಕಿರೀಟಮುಕುಟವನ್ನು ಹೊಂದಿದೆ. ತಾಲೂಕಿನ ಹೊಯ್ಸಳರ ಕಾಲದ ಎಲ್ಲಾ ಕೇಶವ ದೇವಾಲಯಗಳ ಕೇಶವ ಮೂರ್ತಿ ಶಿಲ್ಪಗಳು ಅತ್ಯಂತ ಸುಂದರವಾಗಿ ನಿರ್ಮಿಸಲ್ಪಟ್ಟಿದ್ದು, ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಹೊಂದಿವೆ. ಹೊನ್ನಾವರದ ಕೇಶವ ಮೂರ್ತಿ ಶಿಲ್ಪವು 6 ಅಡಿ ಎತ್ತರವನ್ನು ಹೊಂದಿದ್ದು, ಶಂಖ, ಚಕರ, ಗದಾ ಮತ್ತು ಪದ್ಮವನ್ನು ಹಿಡಿದು, ಕಂಠೀಹಾರ, ಹಾರ, ಕೇಯೂರ, ಉದರಬಂಧ, ಕಂಕಣ, ರತ್ನಾಂಗುಲೀಯಕಗಳು, ಯಜ್ಞೋಪವೀತ ಮತ್ತು ವನಮಾಲೆಯನ್ನು ಧರಿಸಿದೆ. ಹಾಗೂ ಇದರ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಿದ್ದಾರೆ. ಹಿರಿಕಡಲೂರಿನ ಚೆನ್ನಕೇಶವ ದೇವಾಲಯದ ಕೇಶವನ ವಿಗ್ರಹವು ಅತ್ಯಂತ ಆಕರ್ಷಕವಾದ ಕಲಾಕೃತಿಯಾಗಿದ್ದು, ಇದು $1^1/_2$ ಅಡಿ ಗರುಡ ಪೀಠದ ಮೇಲೆ ಭೂದೇವಿ ಶ್ರೀದೇವಿ ಸಮೇತನಾಗಿ ಸಮಭಂಗಿಯಲ್ಲಿ ನಿಂತಿದ್ದು, $4^1/_2$ ಅಡಿ ಎತ್ತರವನ್ನು ಹೊಂದಿದೆ. ಈ ಶಿಲ್ಪವು ಕಂಠಿಹಾರ, ಮುಕ್ತಾಹಾರ, ಭುಜಕೀರ್ತಿ, ಕೇಯೂರ, ಉದರಬಂಧ, ಹಸ್ತಕಟಕ, ಯಜ್ಞೋಪವೀತ, ವನಮಾಲೆ, ಪಾದಕಟಕ ಮತ್ತು ಕಿರೀಟ ಮುಕುಟವನ್ನು ಧರಿಸಿದ್ದು, ಬಲ ಹಿಂಬದಿಯ ಕೈಯಲ್ಲಿ ಶಂಖ, ಮುಂಬದಿಯ ಕೈಯಲ್ಲಿ ಪದ್ಮ ಮತ್ತು ಎಡ ಹಿಂಬದಿಯ ಕೈಯಲ್ಲಿ ಚಕ್ರವನ್ನು ಹಿಡಿದಿದೆ. ಆದರೆ ಎಡ ಮುಂಬದಿಯ ಕೈ ಭಗ್ನವಾಗಿದೆ. ಶಿಲ್ಪದ ಹಿಂಬದಿಯಲ್ಲಿ ಸುಂದರವಾದ ಪ್ರಭಾವಳಿಯಿದ್ದು, ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕೆತ್ತಲಾಗಿದೆ.

ಹೊಯ್ಸಳ ದೇವಾಲಯಗಳಲ್ಲಿ ಭಿತ್ತಿಯು ಒಂದು ಪ್ರಮುಖ ಆಕರ್ಷಣೀಯ ಭಾಗವಾಗಿದ್ದು, ಇದರಲ್ಲಿ ವಿವಿಧ ಉಬ್ಬು ಶಿಲ್ಪಗಳನ್ನು ಕೆತ್ತುವ ಮೂಲಕ ಅಲಂಕರಿಸಲಾಗಿರುತ್ತದೆ. ಮೊಸಳೆಯ ನಾಗೇಶ್ವರ ಮತ್ತು ಚೆನ್ನಕೇಶವ ದೇವಾಲಯಗಳು ಕೂಡ ಸುಂದರವಾದ ಭಿತ್ತಿ ಶಿಲ್ಪಗಳ ಅಲಂಕರಣದಿಂದ ಕೂಡಿದ್ದು, ನಾಗೇಶ್ವರ ದೇವಾಲಯದ ಭಿತ್ತಿಯಲ್ಲಿ ಶೈವ ಮತ್ತು ಶಾಕ್ತ ಪರಂಪರೆಯನ್ನು ಬಿಂಬಿಸುವ ಚಕ್ರೇಶ್ವರಿ, ಗೌರಿ, ವಜ್ರಭೂತ, ಮಹೇಶ್ವರಿ, ಶಾರದಾ, ದುರ್ಗಾ, ಸರಸ್ವತಿ, ಸದಾಶಿವಮೂರ್ತಿ, ದಕ್ಷಿಣಾಮೂರ್ತಿ ಇನ್ನೂ ಮುಂತಾದ ಶಿಲ್ಪಗಳಿದ್ದರೆ, ಚೆನ್ನಕೇಶವ ದೇವಾಲಯದಲ್ಲಿ ವೈಷ್ಣವ ಪರಂಪರೆಯ ಗರುಡ, ಭೂವರಾಹಮೂರ್ತಿ, ಕಾಳಿಂಗಮರ್ಧನ, ವೇಣುಗೋಪಾಲ, ಗೋವರ್ಧನ ಗಿರಿಧಾರಿ, ಬಲಿಚಕ್ರವರ್ತಿ ಮತ್ತು ವಾಮನ, ತ್ರಿವಿಕ್ರಮ ಇನ್ನೂ

ಮುಂತಾದ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು ಕಂಡುಬರುತ್ತವೆ. ಕೋರವಂಗಲದ ಬೂಚೇಶ್ವರ ದೇವಾಲಯವೂ ಸಹ ಭಿತ್ತಿಯಲ್ಲಿ ಉಬ್ಬು ಶಿಲ್ಪಗಳ ಕೆತ್ತನೆಯನ್ನು ಹೊಂದಿದ್ದು, ಇದರಲ್ಲಿ ರಾಮಾಯಣ, ಮಹಾಭಾರತ ಮತ್ತು ಪುರಾಣದ ಕತೆಗಳನ್ನು ನಿರೂಪಿಸುವ ಶಿಲ್ಪಗಳು ಪ್ರಮುಖವಾಗಿ ಕಂಡುಬರುತ್ತವೆ.

ಹೀಗೆ ಹಾಸನ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪ, ಸ್ಮಾರಕ ಶಿಲ್ಪಗಳು, ಮೂರ್ತಿ ಶಿಲ್ಪಗಳು ಮತ್ತು ಭಿತ್ತಿ ಶಿಲ್ಪಗಳ ವಿಶೇಷ ಅಂಶಗಳನ್ನು ಒಳಗೊಂಡಿರುವ ಈ ಮಹಾಪ್ರಬಂಧವು ಈ ಕೆಳಕಂಡ ಅಧ್ಯಾಯಗಳ ವರ್ಗೀಕರಣದಂತೆ ರಚನೆಗೊಂಡಿದೆ.

ಮೊದಲನೇ ಅಧ್ಯಾಯವು ಪೀಠಿಕೆಯಾಗಿದ್ದು ಇದರಲ್ಲಿ ಹಾಸನ ತಾಲೂಕಿನ ಭೌಗೋಳಿಕ ಲಕ್ಷಣಗಳಲ್ಲಿ ಕಂಡುಬರುವ ನದಿಗಳು, ಬೆಟ್ಟ ಗುಡ್ಡಗಳು, ಅರಣ್ಯಗಳು, ವಾಯುಗುಣದ ಬಗ್ಗೆ ಹಾಗೂ ಆರ್ಥಿಕ ಅಂಶಗಳಾದ ಕೃಷಿ, ಕೈಗಾರಿಕೆ, ನೀರಾವರಿಯ ಬಗ್ಗೆ ಚರ್ಚಿಸುವುದರ ಜೊತೆಗೆ ಹಾಸನ ನಗರದ ಐತಿಹಾಸಿಕ ಹಿನ್ನೆಲೆಯನ್ನು ತಿಳಿಸಲಾಗಿದೆ. ಯಾವುದೇ ಒಂದು ಅಧ್ಯಯನ ಅಥವಾ ಸಂಶೋಧನೆಗೆ ಒಂದು ಉದ್ದೇಶ, ವ್ಯಾಪ್ತಿ ಮತ್ತು ವಿಧಾನಗಳಿರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಈ ಮಹಾಪ್ರಬಂಧದ ಶೀರ್ಷಿಕೆಯನ್ನು ಆಯ್ಕೆ ಮಾಡಿಕೊಂಡ ಉದ್ದೇಶ. ಸಂಶೋಧನೆಯ ವ್ಯಾಪ್ತಿ ಹಾಗೂ ಈ ಸಂಶೋಧನೆಗಾಗಿ ರೂಪಿಸಿಕೊಂಡ ವಿಧಾನಗಳನ್ನು ಚರ್ಚಿಸಿದ್ದೇನೆ. ನಂತರ ಈ ಸಂಶೋಧನಾ ಶೀರ್ಷಿಕೆಗೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳ ಬಗ್ಗೆ ತಿಳಿಸಿದ್ದೇನೆ. ಕೊನೆಯಲ್ಲಿ ಈ ಸಂಶೋಧನೆಯ ಸ್ವರೂಪವನ್ನು ಹೇಳಿದ್ದು, ಇದನ್ನು 7 ಅಧ್ಯಾಯಗಳನ್ನಾಗಿ ಮಾಡಿಕೊಂಡು ಆಯಾಯ ಅಧ್ಯಾಯದಲ್ಲಿ ನಿಗಧಿಪಡಿಸಿಕೊಂಡ ವಿಷಯಗಳ ಬಗ್ಗೆ ಕೂಲಂಕಷವಾಗಿ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯವು ಹಾಸನ ತಾಲೂಕಿನ ರಾಜಕೀಯ ಇತಿಹಾಸದ ಅಂಶಗಳನ್ನು ಒಳಗೊಂಡಿದೆ. ಇದರಲ್ಲಿ ಹೊಯ್ಸಳರ ಮೂಲಪುರುಷ ಸಳನಿಂದ ಪ್ರಾರಂಭವಾಗಿ ಮೂರನೇ ಬಲ್ಲಾಳನವರೆಗಿನ ಸಂಕ್ಷಿಪ್ತ ರಾಜಕೀಯ ಇತಿಹಾಸವನ್ನು ತಿಳಿಸುವುದರ ಜೊತೆಗೆ ಇವರ ಆಳ್ವಿಕೆಯ ಕಾಲದಲ್ಲಿ ಹಾಸನ ತಾಲೂಕಿನಲ್ಲಿ ಕಂಡುಬರುವ ಶಾಸನಗಳನ್ನು ಬಳಸಿಕೊಂಡು ಹಾಸನ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು ಸಂರಚಿಸುವ ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹೊಯ್ಸಳರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳನ್ನು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಹೊಯ್ಸಳ ದೇವಾಲಯಗಳ ತಳವಿನ್ಯಾಸದಲ್ಲಿ ಕಂಡುಬರುವ ಗರ್ಭಗೃಹ, ಸುಕನಾಸಿ, ನವರಂಗ, ಭುವನೇಶ್ವರಿಗಳು, ಸ್ತಂಭಗಳು, ದ್ವಾರಗಳು ಮತ್ತು ದ್ವಾರಪಾಲಕರು ಹಾಗೂ ಏರು ವಿನ್ಯಾಸದಲ್ಲಿ ಕಂಡುಬರುವ ಜಗತಿ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಹಾರ ಮತ್ತು ಶಿಖರದ ಲಕ್ಷಣಗಳನ್ನು ಹಾಗೂ ಹೊಯ್ಸಳ ಶಿಲ್ಪಗಳ ವೈಶಿಷ್ಟ್ಯತೆಯನ್ನು ತಿಳಿಸಿದ್ದೇನೆ.

ನಾಲ್ಕನೆಯ ಅಧ್ಯಾಯವು ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಅಂಶಗಳನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಹಾಸನ ತಾಲೂಕಿನ ಹೊಯ್ಸಳರ ದೇವಾಲಯಗಳನ್ನು ಶೈವ, ವೈಷ್ಣವ ಮತ್ತು ಜೈನ ಬಸದಿಗಳೆಂದು ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಶಾಸನಗಳು, ಕಲೆ ಮತ್ತು ವಾಸ್ತು ಶಿಲ್ಪದ ಗ್ರಂಥಗಳನ್ನು ಪೂರಕವಾಗಿ ಬಳಸಿಕೊಂಡು ಈ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ಹಾಗೂ ವಿಶೇಷತೆಗಳನ್ನು ವಿವರಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧದಲ್ಲಿ 14 ಶೈವ ದೇವಾಲಯಗಳು, 10 ವೈಷ್ಣವ ದೇವಾಲಯಗಳು ಹಾಗೂ 3 ಜೈನ ಬಸದಿಗಳ ಕುರಿತಾಗಿ ಕಾಲಾನುಕ್ರಮದಲ್ಲಿ ವಿವರಿಸಿದ್ದೇನೆ.

ಐದನೆಯ ಅಧ್ಯಾಯದಲ್ಲಿ ಹಾಸನ ತಾಲೂಕಿನ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ವೀರಗಲ್ಲುಗಳ ಸ್ವರೂಪ ಮತ್ತು ವಿಧಗಳು ಹಾಗೂ ಹಾಸನ ತಾಲೂಕಿನಲ್ಲಿ ಕಂಡುಬಂದಿರುವ ಹೊಯ್ಸಳರ ಕಾಲದ ಶಾಸನೋಕ್ತ ವೀರಗಲ್ಲುಗಳಲ್ಲಿನ ಅಂಶಗಳ ಕುರಿತಾಗಿ ವಿವರಿಸಿದ್ದೇನೆ.

ಆರನೆಯ ಅಧ್ಯಾಯದಲ್ಲಿ ಶಿಲ್ಪಗಳ ರಚನಾ ವಿಧಾನ ಮತ್ತು ಬೆಳವಣಿಗೆ, ಶಿಲ್ಪಗಳ ಲಕ್ಷಣಗಳು, ಹಸ್ತ-ವಿನ್ಯಾಸ, ಮುದ್ರೆಗಳು, ಆಯುಧಗಳು, ಆಭರಣಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸುವುದರ ಜೊತೆಗೆ ಈ ಶಿಲ್ಪಗಳು ಆರಾಧಿಸುತ್ತಿರುವ ಗ್ರಾಮಗಳು ಮತ್ತು ದೇವಾಲಯಗಳ ಬಗ್ಗೆ ತಿಳಿಸಿದ್ದೇನೆ.

ಏಳನೆಯ ಅಧ್ಯಾಯವು ಉಪಸಂಹಾರವಾಗಿದ್ದು, ಇದರಲ್ಲಿ ಕ್ಷೇತ್ರಕಾರ್ಯದ ಅನುಭವ, ಸಂಶೋಧನೆಯಲ್ಲಿ ಕಂಡುಕೊಂಡ ವಿಶೇಷ ಫಲಿತಗಳು ಹಾಗೂ ಇಡೀ ಮಹಾಪ್ರಬಂಧದ ಸಾರಾಂಶವನ್ನು ತಿಳಿಸಲಾಗಿದೆ. ಅಲ್ಲದೇ ಪರಾಮರ್ಶನ ಗ್ರಂಥಗಳು, ಭೂಪಟಗಳು, ದೇವಾಲಯಗಳ ಪಟ್ಟಿ ಮತ್ತು ತಳನಕ್ಷೆಗಳು ಹಾಗೂ ಛಾಯಾಚಿತ್ರಗಳನ್ನು ಸಹ ನೀಡಿದ್ದೇನೆ.

ಪ್ರಸ್ತುತ ಹಾಸನ ತಾಲೂಕಿನ ಕೆಲವು ಹೊಯ್ಸಳ ದೇವಾಲಯಗಳು ಶಿಥಿಲವಾಗಿ ವಿನಾಶದ ಅಂಚನ್ನು ತಲುಪಿವೆ. ಕೆಲವು ದೇವಾಲಯಗಳು ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡು ಬಂದಿದ್ದು, ಪ್ರವಾಸಿಗರ ಆಕರ್ಷಣೀಯ ಕೇಂದ್ರಗಳಾಗಿವೆ. ಕೆಲವು ಸ್ಮಾರಕಗಳನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿಸುತ್ತಿದ್ದರೆ, ಕೆಲವು ಸ್ಮಾರಕಗಳನ್ನು ಕರ್ನಾಟಕದ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯವು ಸಂರಕ್ಷಿಸುತ್ತಿರುವುದು ಕಂಡುಬರುತ್ತದೆ. ಕೆಲವು ಗ್ರಾಮಗಳ ಶಿಥಿಲವಾದ ದೇವಾಲಯಗಳನ್ನು ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟಿನವರು, ಗ್ರಾಮಸ್ಥರು ಮತ್ತು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಸಹಯೋಗದೊಂದಿಗೆ ಜೀರ್ಣೋದ್ಧಾರ ಮಾಡಿರುವುದು ಶ್ಲಾಘನೀಯ ವಿಷಯವಾಗಿದೆ.

ಪ್ರಸ್ತುತ ಈ ಮಹಾಪ್ರಬಂಧದಲ್ಲಿ ಹಾಸನ ತಾಲೂಕಿನಲ್ಲಿ ಕಂಡುಬರುವ ಹೊಯ್ಸಳ ದೇವಾಲಯಗಳನ್ನು ಒಂದೇ ಕಡೆ ದಾಖಲಿಸಿ ವಿವರಣೆ ನೀಡಲಾಗಿದೆ. ಅಲ್ಲದೇ ಈಗಾಗಲೇ ಪ್ರಕಟವಾಗಿರುವ ಗ್ರಂಥಗಳು, ಲೇಖನಗಳನ್ನು ಪರಾಮರ್ಶಿಸಿ ಸಾಧ್ಯವಾದಷ್ಟರ ಮಟ್ಟಿಗೆ ಮಹಾಪ್ರಬಂಧವನ್ನು ರಚಿಸಿದ್ದೇನೆ ಎಂದು ತಿಳಿಸುತ್ತಾ ಈ ಮಹಾಪ್ರಬಂಧವು ಮುಂದೆ ಇತಿಹಾಸ ಮತ್ತು ಕಲಾಸಕ್ತರ ಹೆಚ್ಚಿನ ಸಂಶೋಧನೆಗೆ ಉತ್ತಮ ಪರಾಮರ್ಶನ ಗ್ರಂಥವಾಗಲಿದೆ ಎಂಬುದು ನನ್ನ ಆಶಯವಾಗಿದೆ.